# ಸಮಗ್ರ ದಾಸ ಸಾಹಿತ್ಯ

ಸಂಪುಟ : ೧೫





# ಮುದ್ದುಮೋಹನವಿಠಲದಾಸರು ಹಾಗೂ ಇತರರ ಕೀರ್ತನೆಗಳು

ಸಮಗ್ರ ದಾಸ ಸಾಹಿತ್ಯ
ಸಂಪುಟ : ೧೫




# ಮುದ್ದುಮೋಹನ ವಿಠಲದಾಸರು
# ಹಾಗೂ ಇತರರ ಕೀರ್ತನೆಗಳು

(ತಂದೆ ಮುದ್ದುಮೋಹನವಿಠಲದಾಸರು, ಬಾಗೇಪಲ್ಲಿ ಶೇಷದಾಸರು,
ಕೃಷ್ಣವಿಠಲದಾಸರು, ಸರಗೂರು ವೆಂಕಟವರದಾರ್ಯರು)


*ಸಂಪಾದಕರು*
ಹೆಚ್.ಎಸ್. ಶ್ರೀನಿವಾಸಮೂರ್ತಿ
ಎ.ಎನ್.ಅನಂತಸ್ವಾಮಿರಾವ್



ಕರ್ನಾಟಕ ಸರ್ಕಾರ
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ
ಬೆಂಗಳೂರು

**SAMAGRA DASA SAHITYA SAMPUTA - 15 :**
Muddumohana Vitaladasaru Hagu Itharara Keerthanegalu, Edited by Shri. H.S. Srinivasa Murthy, A.N. Ananthaswamy Rao & Published by Sri. Y. K. Muddukrishna, Director, Directorate of Kannada and Culture, Kannada Bhavana, J.C. Road, Bangalore - 560 002.

ಪುಟಗಳು : 95 + ೪೮೪




ಪ್ರಥಮ ಮುದ್ರಣ : ೨೦೦೩
ಪ್ರತಿ : ೧೨೫೦

ಬಿಡಿ ಪ್ರತಿ ಬೆಲೆ : ರೂ. ೬೦=೦೦
ಸಮಗ್ರ ಸಂಪುಟಗಳ ಬೆಲೆ : ರೂ. ೨೪೦೦=೦೦



**ಮುದ್ರಣ ನಿರ್ವಹಣೆ :**

ಮೈಸೂರು ಸೇಲ್ಸ್ ಇಂಟರ್‌ನ್ಯಾಷನಲ್ ಲಿಮಿಟೆಡ್
೩೬, ಕನ್ನಿಂಗ್‌ಹ್ಯಾಮ್ ರಸ್ತೆ
ಬೆಂಗಳೂರು – ೫೬೦ ೦೫೨.

**ಮುದ್ರಕರು :**

ಮೆ. ಡಾಟ್ಸ್
೧೨೪, ಸುಲ್ತಾನ್‌ಪೇಟೆ
ಬೆಂಗಳೂರು – ೫೬೦ ೦೫೩.

# ಸಮಗ್ರ ದಾಸಸಾಹಿತ್ಯ ಪ್ರಕಟಣ ಯೋಜನೆ

## ಸಂಪಾದಕ ಮಂಡಳಿ

### ಕಾರ್ಯನಿರ್ವಾಹಕ ಸಂಪಾದಕರು

ಡಾ. ಶ್ರೀನಿವಾಸ ಹಾವನೂರ
ಡಾ. ಟಿ. ಎನ್. ನಾಗರತ್ನ
ಪ್ರೊ. ವಸಂತ ಕುಷ್ಟಗಿ

### ಸದಸ್ಯರು

ಡಾ. ಎಂ. ಎಂ. ಕಲಬುರ್ಗಿ
ಪ್ರೊ. ಎಂ. ರಾಜಗೋಪಾಲಾಚಾರ್ಯ (ಫೆಬ್ರವರಿ '೯೮ ರವರೆಗೆ)
ಡಾ. ಕೃಷ್ಣ ಕೊಲ್ಹಾರಕುಲಕರ್ಣಿ
ಡಾ. ಮಂದಾಕಿನಿ
ಪ್ರೊ. ಸುಧಾಕರ
ಡಾ. ಬಸವರಾಜ ಸಬರದ

### ಸದಸ್ಯ ಕಾರ್ಯದರ್ಶಿ

ನಿರ್ದೇಶಕರು
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ

# ಮುನ್ನುಡಿ

ಹರಿದಾಸ ಸಾಹಿತ್ಯ ಕನ್ನಡ ಸಂಸ್ಕೃತಿ ಪರಂಪರೆಯ ಮಹತ್ವಪೂರ್ಣ ಭಾಗವಾಗಿದೆ. ದೇಶೀಯತೆ ಹಾಗೂ ಗೇಯತೆಗಳೆರಡನ್ನೂ ಮೇಳವಿಸಿಕೊಂಡು, ಕನ್ನಡ ಸಾಹಿತ್ಯವಾಹಿನಿಗೆ ಇದು ಹೊಸತನವನ್ನು ನೀಡಿದೆ. ಮನುಜಮತ, ಸಾಹಿತ್ಯಪಥ ಹಾಗೂ ಭಕ್ತಿಸಿದ್ಧಾಂತದ ತ್ರಿವೇಣಿಯಾಗಿರುವ ಈ ಪ್ರಜಾಸಾಹಿತ್ಯವನ್ನು ಪ್ರಜೆಗಳಿಗೆ ಮುಟ್ಟಿಸುವುದು ಪ್ರಜಾಸತ್ತಾತ್ಮಕ ಸರಕಾರದ ಆದ್ಯ ಕರ್ತವ್ಯವಾಗಿದೆ.

ಕನ್ನಡ ಭಾಷಿಕಶಕ್ತಿಯ ವಿವಿಧ ಆಯಾಮಗಳನ್ನು ಸೆಳೆದು ತೋರಿರುವ, ಸಾಹಿತ್ಯ–ಸಂಗೀತಗಳ ಸಾಮರಸ್ಯವನ್ನು ಮೆರೆದಿರುವ ಈ ಸಾಹಿತ್ಯ ಕನ್ನಡ ಸಾಹಿತ್ಯಕ್ಕೆ ಜಾಗತಿಕ ಮಹತ್ವವನ್ನು ತಂದುಕೊಟ್ಟಿದೆ ಎಂದರೆ ಅತಿಶಯೋಕ್ತಿಯಾಗಲಾರದು. ಮಾನವಾನುಕಂಪ, ಸಮಾಜಸುಧಾರಣೆ, ಲೋಕದ ಡೊಂಕುಗಳನ್ನು ನಗೆ ವಿಡಂಬನೆಗಳ ಮೂಲಕ ತಿದ್ದುವ ಕೌಶಲ ದಾಸಸಾಹಿತ್ಯದ ಪ್ರಮುಖ ಲಕ್ಷಣವಾಗಿದೆ.

ಆಧ್ಯಾತ್ಮಿಕ ಸಾಧನೆ, ಅನುಭವ – ಅನುಭಾವಗಳು ದಾಸಸಾಹಿತ್ಯದ ಪ್ರಮುಖ ಅಂಶವಾದರೂ, ಸುತ್ತಮುತ್ತಲಿರುವ ಜೀವನದ ಕಡೆಗೆ, ಮಾನವ ಸ್ವಭಾವದ ಕಡೆಗೆ ಕಣ್ಣು ಹರಿಸಿದ ಹರಿದಾಸರು ಸಾತ್ತ್ವಿಕ ಜೀವನ ನಿರ್ವಹಣೆಗೆ, ಮಾನವನ ಮೇಲ್ಮೆಗೆ, ನೈತಿಕ ಆಚರಣೆಗೆ ಒತ್ತು ನೀಡಿದವರು.

ಹರಿದಾಸ ಸಾಹಿತ್ಯ ಅಪಾರವಾದುದು ಹಾಗೂ ವೈವಿಧ್ಯವಾದುದು. ಈ ವಿಪುಲ ಸಾಹಿತ್ಯರಾಶಿಯನ್ನು ಒಂದೆಡೆ ಕ್ರೋಡೀಕರಿಸಿ, ಕರ್ನಾಟಕ ಸರ್ಕಾರವು ಸಮಗ್ರ ದಾಸಸಾಹಿತ್ಯವನ್ನು ಕನ್ನಡ ಜನತೆಗೆ ನೀಡುತ್ತಿದೆ.

ಈ ಯೋಜನೆಗೆ ದುಡಿದ ಸಂಪಾದಕ ಮಂಡಳಿಯ ಶ್ರದ್ಧೆ ಹಾಗೂ ಮಾರ್ಗದರ್ಶನವನ್ನು, ವಿವಿಧ ಸಂಪುಟಗಳ ಸಂಪಾದಕರಾಗಿ ನಾಡಿನ ಅನೇಕ ವಿದ್ವಾಂಸರು ತೋರಿರುವ ಆಸಕ್ತಿ ಹಾಗೂ ನೆರವನ್ನು ಮತ್ತು ಈ ಸಂಪುಟದ ಸಂಪಾದಕರ ಶ್ರಮವನ್ನು ಸ್ಮರಿಸುತ್ತ ಕನ್ನಡ ಜನತೆಯ ಕೈಗೆ ಈ ಮೌಲಿಕ ಪ್ರಕಟಣೆಗಳನ್ನು ಸಂತೋಷದಿಂದ ಅರ್ಪಿಸುತ್ತೇನೆ.

**ಎಸ್. ಎಂ. ಕೃಷ್ಣ**

ಮುಖ್ಯಮಂತ್ರಿಗಳು

ಕರ್ನಾಟಕ ಸರ್ಕಾರ

# ಎರಡು ಮಾತು

ಕನ್ನಡ ಸಾಹಿತ್ಯದ ತವನಿಧಿಗಳಲ್ಲಿ ದಾಸಸಾಹಿತ್ಯವೂ ಒಂದು. ಕರ್ನಾಟಕದ ಸಾಹಿತ್ಯ, ಸಂಗೀತ, ಸಂಸ್ಕೃತಿಗಳನ್ನು ಪ್ರಭಾವಪೂರ್ಣವಾಗಿ ಸಮೃದ್ಧಿಗೊಳಿಸಿದವರು ಹರಿದಾಸರು. ಬದುಕಿನಲ್ಲಿ ನಿಷ್ಠೆ, ಸಾಹಿತ್ಯದಲ್ಲಿ ಬದುಕಿನ ತತ್ತ್ವಗಳನ್ನು ಅಡಗಿಸಿ ಜನಸಾಮಾನ್ಯರನ್ನು ಉನ್ನತ ಜೀವನದತ್ತ ಉದ್ದೀಪಿಸುವ ಮಹಾಕಾಯಕದಲ್ಲಿ ತೊಡಗಿದವರು ಹರಿದಾಸರು. ಕನ್ನಡ ಸಾಹಿತ್ಯಕ್ಕೆ ಅಪೂರ್ವ ಕೊಡುಗೆಯಾಗಿರುವ ಹರಿದಾಸ ಸಾಹಿತ್ಯ ಸಮಾಜದ ಮೌಢ್ಯವನ್ನು ಬಯಲಿಗೆಳೆದು, ಜಾತಿ, ಮತ, ಪಂಥಗಳನ್ನು ಮೀರಿ ನಿಂತ ಮಾನವೀಯ ಮೌಲ್ಯಗಳನ್ನು ಸಾಹಿತ್ಯದ ಮೂಲಕ ಅಭಿವ್ಯಕ್ತಿಸಿತು.

ಹರಿದಾಸ ಸಾಹಿತ್ಯಕ್ಕೆ ಪ್ರೇರಣೆ ಭಕ್ತಿಯಾದರೂ, ಕರ್ನಾಟಕ ಸಂಗೀತಕ್ಕೆ ಸಮೃದ್ಧಿಯನ್ನು ನೀಡಿದವರು ಹರಿದಾಸರು. ಗ್ರಾಮ್ಯ ಮತ್ತು ದೇಶ್ಯ ಶಬ್ದಗಳಿಗೆ ಸಾಹಿತ್ಯದ ಮುದ್ರೆಯನ್ನು ಒತ್ತಿ, ಭಾಷೆಗೊಂದು ಪರಿಪಕ್ವತೆಯನ್ನೂ ತಂದುಕೊಟ್ಟರು. ಇಂಥ ಸಾಹಿತ್ಯ ಸಂಪತ್ತನ್ನು ರಕ್ಷಿಸುವುದು ಮತ್ತು ಪ್ರಸಾರ ಮಾಡುವುದು ನಮ್ಮ ಕರ್ತವ್ಯ. ಈ ದೃಷ್ಟಿಯಿಂದ ಕರ್ನಾಟಕ ಸರ್ಕಾರವು ಸಮಗ್ರ ದಾಸಸಾಹಿತ್ಯ ಪ್ರಕಟಣ ಯೋಜನೆಗೆ ಸಮಿತಿಯೊಂದನ್ನು ರಚಿಸಿದ್ದು, ಇದರಲ್ಲಿ ನಾಡಿನ ಅನೇಕ ವಿದ್ವಾಂಸರು ಸಂಪುಟ ಸಂಪಾದಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಈ ಸಂಪುಟಗಳು ಹೊರಬರಲು ಕಾರಣರಾದ ಸಂಪಾದಕ ಮಂಡಳಿಯ ಸದಸ್ಯರಿಗೆ ಹಾಗೂ ಈ ಸಂಪುಟದ ಸಂಪಾದಕರಿಗೆ ನನ್ನ ಕೃತಜ್ಞತೆಗಳು.

ದಾಸರು ತಮ್ಮ ಸಾಹಿತ್ಯದಲ್ಲಿ ಸಾರ್ವಕಾಲಿಕ ಮೌಲ್ಯಗಳನ್ನು ಉಳಿಸಿ ಹೋಗಿದ್ದಾರೆ. ನಮ್ಮ ಸಾಮಾಜಿಕ ಜೀವನವನ್ನು ರೂಪಿಸುವಲ್ಲಿ ಈ ಕೀರ್ತನೆಗಳು ಮೌಲಿಕವಾದುವು. ಕನ್ನಡ ಜನತೆ ಈ ಕೃತಿಯ ಪ್ರಯೋಜನವನ್ನು ಪಡೆದರೆ ಪಟ್ಟ ಶ್ರಮ ಸಾರ್ಥಕವಾಗುತ್ತದೆ.

**ರಾಣಿ ಸತೀಶ್**

ಕನ್ನಡ ಮತ್ತು ಸಂಸ್ಕೃತಿ ಸಚಿವರು



# ಯೋಜನೆಯನ್ನು ಕುರಿತು

ಕನ್ನಡ ಸಾಹಿತ್ಯ ಚರಿತ್ರೆಯ ಸಿರಿವಂತಿಕೆಯಲ್ಲಿ ಕೀರ್ತನ ಸಾಹಿತ್ಯದ ಕೊಡುಗೆ ವಿಪುಲವಾದುದು; ವೈಶಿಷ್ಟ್ಯಪೂರ್ಣವಾದುದು. ಈ ಸಮಗ್ರ ಸಾಹಿತ್ಯದ ಸಂಗ್ರಹ ಮತ್ತು ಪ್ರಕಾಶನದ ಕಾರ್ಯ ಪೂರ್ಣವಾಗಿ ಆಗಿರಲಿಲ್ಲ. ಇದನ್ನು ಮನಗಂಡ ಸರ್ಕಾರ ಸಮಗ್ರ ದಾಸ ಸಾಹಿತ್ಯ ಪ್ರಕಟಣೆಯ ಕಾರ್ಯವನ್ನು ಕೈಗೆತ್ತಿಕೊಂಡಿತು.

ಸುಮಾರು ಒಂದು ನೂರ ಮೂವತ್ತೊಂಬತ್ತು ಜನ ದಾಸರ ಸುಮಾರು ಹದಿನಾರು ಸಾವಿರ ಕೀರ್ತನೆಗಳ ಬೃಹತ್ ಸಾಹಿತ್ಯ ಸಾಮಗ್ರಿ ದೊರಕಿತು. ಹೀಗೆ ಸಾಂಪ್ರದಾಯಿಕ ರೀತಿಯಲ್ಲಿ ಸಂಗ್ರಹಿಸಿ, ಸಂಪಾದಿಸಿದ ಕೀರ್ತನ ಸಾಹಿತ್ಯವನ್ನು ಸಂಪುಟಗಳಲ್ಲಿ ಮುದ್ರಿಸುವುದು ಕಷ್ಟವೇನಾಗಿರಲಿಲ್ಲ. ಆದರೆ, ಅದನ್ನು ಮಾಹಿತಿ ತಂತ್ರಜ್ಞಾನದ ಇವತ್ತಿನ ಸಂದರ್ಭದಲ್ಲಿ ಬಹು ಉಪಯೋಗಿ ನೆಲೆಯಲ್ಲಿ ಬಹುಮಾಧ್ಯಮದಲ್ಲಿ ಹೊರತರಬೇಕೆಂಬ ಕನಸು ರೋಮಾಂಚಕಾರಿ ಅನುಭವವೇ ಸರಿ. ಇದನ್ನು ಕೃತಿ ರೂಪಕ್ಕಿಳಿಸುವ ಹಾದಿಯಲ್ಲಿ ಎದುರಾದ ತಾಂತ್ರಿಕ ಸವಾಲು ಬಹು ಕ್ಲಿಷ್ಟಕರವಾಗಿಯೇ ಕಂಡಿತು.

ದಿಟ, ಈ ಸಮಗ್ರ ಸಾಹಿತ್ಯವನ್ನು ಕೇವಲ ಮುದ್ರಣದಲ್ಲಷ್ಟೇ ಅಲ್ಲ, ಆಯ್ದ ಕೀರ್ತನೆಗಳನ್ನು ಗಾಯನಕ್ಕೆ ಅಳವಡಿಸಿ, ಸಿ.ಡಿ. ಮತ್ತು ಅಂತರ್ಜಾಲದಲ್ಲಿ ಹೊರತರ ಬೇಕೆಂದಾಗ ಬಳಕೆದಾರರ ಅವಶ್ಯಕತೆಯನ್ನು ಆಧರಿಸಿ ತಯಾರಿಸುವ ಅಗತ್ಯ ಇತ್ತು. ಆದರೆ ಇವುಗಳಲ್ಲಿ ಕನ್ನಡ ಮತ್ತು ಇಂಗ್ಲಿಷ್ ಎರಡೂ ಭಾಷೆಗಳಲ್ಲಿ ಸರ್ಚ್ ಎಂಜಿನ್ (ಹುಡುಕುವಿಕೆ) ಇಲ್ಲದಿರುವುದು ಒಂದು ತಾಂತ್ರಿಕ ಸಮಸ್ಯೆಯೇ ಆಯಿತು.

ಈ ರೀತಿಯ ಪ್ರಯತ್ನ ಕನ್ನಡ ಭಾಷೆಯಲ್ಲಿ ಹಿಂದೆಂದೂ ಆಗದಿದ್ದುದರಿಂದ ತಂತ್ರಾಂಶವನ್ನು ಹೊಸದಾಗಿಯೇ ಅಭಿವೃದ್ಧಿ ಪಡಿಸಬೇಕಾದ ಸವಾಲನ್ನು ಕೈಗೆತ್ತಿ ಕೊಳ್ಳಲಾಯಿತು. ಇದಕ್ಕಾಗಿ ಕನ್ನಡ ಗಣಕ ಪರಿಷತ್ತು, ರಾಷ್ಟ್ರೀಯ ಮಾಹಿತಿ ಕೇಂದ್ರ (ಎನ್‌ಐಸಿ), ಮಾಹಿತಿ ಮತ್ತು ತಂತ್ರಜ್ಞಾನ ಇಲಾಖೆ, ಮಹಾಭಾರತ ಸಂಶೋಧನಾ ಪ್ರತಿಷ್ಠಾನ ಮುಂತಾದ ಹಲವಾರು ತಂತ್ರಾಂಶ ಸಂಸ್ಥೆಗಳೊಂದಿಗೆ ನಿರಂತರ ಸಮಾಲೋಚನೆ, ಚಿಂತನೆಗಳನ್ನು ನಡೆಸಲಾಯಿತು.

ಹೀಗೆ ಸಾಹಿತ್ಯ ಸಂಗ್ರಹ, ಸಂಪಾದನೆ, ಸಂಗೀತ ಸಂಯೋಜನೆ, ಧ್ವನಿಮುದ್ರಣ, ಬಹುಮಾಧ್ಯಮಕ್ಕೆ ಅಳವಡಿಸುವ ತಾಂತ್ರಿಕ ಕುಶಲತೆಯ ನಿರಂತರ ಕಾರ್ಯಾನುಷ್ಠಾನಕ್ಕೆ ಸಂಪಾದಕ ಮಂಡಳಿ ಸದಸ್ಯರು, ಸಂಪುಟ ಸಂಪಾದಕರು, ಇಲಾಖಾ ಅಧಿಕಾರಿಗಳು, ತಂತ್ರಜ್ಞರು, ಕೋರ್ ಸಮಿತಿ ಸದಸ್ಯರು, ಸಂಗೀತ ನಿರ್ದೇಶಕರು, ಗಾಯಕರು – ಈ ಎಲ್ಲರ ಪರಿಶ್ರಮ ಅಗಾಧವಾಗಿ ದೊರಕಿದೆ. ಈ ಶ್ರಮದ ಫಲವಾಗಿ ಬಹುಮಾಧ್ಯಮದಲ್ಲಿ ಸಮಗ್ರ ದಾಸ ಸಾಹಿತ್ಯ ಯೋಜನೆಯ ಬೃಹತ್ ಕಾರ್ಯ ಸಾಕಾರಗೊಂಡಿದೆ.

ಈ ವಿಪುಲ ಸಾಹಿತ್ಯವನ್ನು ಕನ್ನಡ ಅಕ್ಷರಜ್ಞಾನಿಗಳು ಪುಸ್ತಕ ರೂಪದಲ್ಲಿಯೂ ಬಹುಗಾತ್ರದ ಸಾಹಿತ್ಯವನ್ನು ಕೈ ಅಳತೆಯ ಸಿ.ಡಿ. ರೂಪದಲ್ಲಿಯೂ ಈಗ ಪಡೆಯಬಹುದಾಗಿದೆ. ಅಲ್ಲದೆ, ಅಂತರ್ಜಾಲದ ಮೂಲಕ ವಿಶ್ವದ ಯಾವುದೇ ಮೂಲೆಯಲ್ಲಿರುವ ಆಸಕ್ತ ಜನತೆ ಕುಳಿತಲ್ಲಿಯೇ ಆರಾಮವಾಗಿ ವೀಕ್ಷಿಸುವ, ಕೇಳುವ ಹಾಗೂ ಕನ್ನಡ ಅಕ್ಷರ ಜ್ಞಾನವಿರದ ಭಾಷಿಕರು ಸಹಿತ ಸಂಗೀತವನ್ನು ಕೇಳಿ ಆಸ್ವಾದಿಸುವ ಅವಕಾಶವನ್ನು ಏಕಕಾಲದಲ್ಲಿ ಕಲ್ಪಿಸಲಾಗಿದೆ. ಪ್ರಕಾಶನದ ಇತಿಹಾಸದಲ್ಲಿಯೇ ದಾಖಲನೀಯವಾದ ಈ ಕಾರ್ಯ ಮುಂದೆ ಸರ್ಕಾರಿ ಸಂಸ್ಥೆಗಳಿಗಾಗಲಿ, ಖಾಸಗಿ ಸಂಸ್ಥೆಗಳಿಗಾಗಲಿ ಮಾದರಿಯಾಗಬಹುದೆಂದು ನಂಬಲಾಗಿದೆ.

ನಮ್ಮ ಸಂಸ್ಕೃತಿಯನ್ನು ಬಿತ್ತರಿಸಲು ನಾಲ್ಕು ಗೋಡೆಗಳೊಳಗಿನ ರಂಗ ಮಂದಿರಗಳು, ವೇದಿಕೆಗಳು ಅಗತ್ಯವಿದೆ ದಿಟ. ಆದರೆ ಭವಿತವ್ಯದಲ್ಲಿ ವಿಶ್ವದ ಜನರನ್ನು ತಲಪಲು ಮತ್ತು ಮುಖ್ಯವಾಗಿ ಯುವಜನಾಂಗಕ್ಕೆ ನಮ್ಮ ಸಾಂಸ್ಕೃತಿಕ ಕ್ಷಿತಿಜದ ವಿಸ್ತಾರವನ್ನು ಪರಿಚಯಿಸಲು ಸೂಕ್ಷ್ಮ ಸಂವೇದನಾಶೀಲವಾದ ಸಾಹಿತ್ಯವನ್ನು ಬಹುಮಾಧ್ಯಮದಲ್ಲಿ ಅಳವಡಿಸುವುದು ಅತ್ಯಾವಶ್ಯಕ. ಈ ನಿಟ್ಟಿನಲ್ಲಿ ಇದೊಂದು ವಿನೂತನ ಪ್ರಯೋಗ; ಈ ಪ್ರಯೋಗದ ಫಲ ಎಲ್ಲರಿಗೂ ಲಭ್ಯವಾಗಲೆಂಬುದು ನಮ್ಮ ಆಶಯ.

**ಸಿ. ಎಸ್. ಕೇದಾರ್**
ಸರ್ಕಾರದ ಕಾರ್ಯದರ್ಶಿ

# ಪ್ರಕಾಶಕರ ಮಾತು

ಕರ್ನಾಟಕದ ಧಾರ್ಮಿಕ, ಸಾಂಸ್ಕೃತಿಕ ಇತಿಹಾಸದಲ್ಲಿ ಹರಿದಾಸರ ಸ್ಥಾನ ವಿಶಿಷ್ಟವಾದದ್ದು. ಸಾವಿರಾರು ವರ್ಷಗಳಿಂದ ಭಾರತದಲ್ಲಿ ಅವಿರತವಾಗಿ ಹರಿದುಬಂದ ಜೀವನಮೌಲ್ಯಗಳನ್ನು ಜನಸಾಮಾನ್ಯರ ಆಡುಭಾಷೆಯಲ್ಲಿ ಮುಟ್ಟಿಸಿ, ಲೌಕಿಕ ವಿಡಂಬನೆಯ ಮೂಲಕ ಅವರ ಮಾನಸಿಕ ವಿಕಾಸವನ್ನು ಯಶಸ್ವಿಯಾಗಿ ಸಾಧಿಸಿದವರು ಹರಿದಾಸರು. ಪಾಂಡಿತ್ಯ, ಲೋಕಾನುಭವಗಳ ಹಿನ್ನೆಲೆಯಿಂದಾಗಿ, ಆಡುಭಾಷೆಯ ಸೊಗಡಿನಿಂದಾಗಿ ಇವರು ಹಾಡಿದ್ದೆಲ್ಲ ಸಾಹಿತ್ಯವಾಯಿತು, ಕಾವ್ಯವಾಯಿತು, ಕೇಳುಗರನ್ನು ಸೆರೆಹಿಡಿಯಿತು. ಗೇಯಗುಣವುಳ್ಳ, ನೃತ್ಯಕ್ಕೆ ಅಳವಡುವ, ಛಂದೋಬದ್ಧವಾದ, ಜನತೆಯ ಮಧ್ಯದಲ್ಲಿಂದೇ ಸಂದರ್ಭಾನುಸಾರ ಹುಟ್ಟಿದ ಹರಿದಾಸಸಾಹಿತ್ಯ ವೈಶಿಷ್ಟ್ಯಪೂರ್ಣವೆನಿಸಿತು. ಕನ್ನಡ ವಾಙ್ಮಯದಲ್ಲಿ ದಾಸಸಾಹಿತ್ಯ ಒಂದು ವಿಶೇಷ ಸ್ಥಾನ ಪಡೆಯಿತು. ಹೀಗೆ ಸಾಹಿತ್ಯ, ಸಂಗೀತ ಮತ್ತು ಸಾಮಾಜಿಕ ಕ್ಷೇತ್ರಕ್ಕೆ ದಾಸಸಾಹಿತ್ಯದ ಕೊಡುಗೆ ಗಣನೀಯವಾದುದು.

ಸುಮಾರು ನೂರಮಾವತ್ತೊಂಬತ್ತು ಜನ ದಾಸರು ಆಗಿಹೋಗಿದ್ದು, ಅವರ ಕೀರ್ತನೆಗಳ ಸಂಖ್ಯೆ ಸುಮಾರು ಹದಿನಾರು ಸಾವಿರಕ್ಕೂ ಅಧಿಕ. ಈವರೆಗೆ ಕೆಲವು ದಾಸರ ಕೀರ್ತನೆಗಳು ಬಿಡಿ ಬಿಡಿಯಾಗಿ ಪ್ರಕಟವಾಗಿವೆಯಾದರೂ, ಇನ್ನೂ ಅನೇಕ ದಾಸವರೇಣ್ಯರ ಕೀರ್ತನೆಗಳು ಹಸ್ತಪ್ರತಿ ರೂಪದಲ್ಲಿಯೇ ಉಳಿದುಕೊಂಡಿವೆ. ಅವುಗಳನ್ನು ಸಂಗ್ರಹಿಸಿ, ಸಂಪಾದಿಸಿ, ಪ್ರಕಟಿಸಿ, ಸಮಗ್ರ ದಾಸಸಾಹಿತ್ಯವು ಕನ್ನಡಿಗರಿಗೆ ಒಂದೆಡೆ ಲಭ್ಯವಾಗುವಂತೆ ಮಾಡುವ ಉದ್ದೇಶದಿಂದ ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯವು ಸಮಗ್ರ ದಾಸಸಾಹಿತ್ಯ ಪ್ರಕಟಣೆಯ ಬೃಹತ್ ಯೋಜನೆಯನ್ನು ಹಾಕಿಕೊಂಡಿದೆ. ಈ ಉದ್ದೇಶಕ್ಕಾಗಿ ಕಾರ್ಯನಿರ್ವಾಹಕ ಸಂಪಾದಕರಾದ ಡಾ. ಶ್ರೀನಿವಾಸ ಹಾವನೂರ, ಡಾ. ಟಿ. ಎನ್. ನಾಗರತ್ನ, ಪ್ರೊ. ವಸಂತ ಕುಷ್ಟಗಿ, ಸದಸ್ಯರಾದ ಡಾ. ಎಂ. ಎಂ. ಕಲಬುರ್ಗಿ, ಡಾ. ಬಸವರಾಜ ಸಬರದ, ಪ್ರೊ. ಸುಧಾಕರ, ಡಾ. ಕೃಷ್ಣ ಕೊಲ್ಹಾರಕುಲಕರ್ಣಿ, ಡಾ. ಮಂದಾಕಿನಿ (ಈಗ ದಿವಂಗತರು) ಹಾಗೂ ಪ್ರೊ. ಎಂ. ರಾಜಗೋಪಾಲಾಚಾರ್ಯ (ಈಗ ದಿವಂಗತರು) ಅವರನ್ನೊಳಗೊಂಡಂತೆ ಸಂಪಾದಕ ಸಮಿತಿಯನ್ನು ರಚಿಸಲಾಯಿತು. ಇಲಾಖಾ ನಿರ್ದೇಶಕರು ಸಮಿತಿಯ ಸದಸ್ಯ–ಕಾರ್ಯದರ್ಶಿಗಳಾಗಿರುತ್ತಾರೆ. ಇದರಲ್ಲಿ ನಾಡಿನ ಅನೇಕ ವಿದ್ವಾಂಸರ ನೆರವನ್ನು ಬಳಸಿಕೊಳ್ಳಲಾಗುತ್ತಿದೆ.

ಈ ಯೋಜನೆಯನ್ವಯ 'ಸಮಗ್ರ'ವಾಗಿ ದಾಸರ ಕೀರ್ತನೆಗಳನ್ನು ಸಂಗ್ರಹಿಸಿ ಪ್ರಕಟಿಸುವುದಿದ್ದರೂ, ಕೆಲವು ಹರಿದಾಸರ ರಚನೆಗಳು ಬಿಟ್ಟು ಹೋಗಿರುವ ಸಾಧ್ಯತೆ ಇರುತ್ತದೆ. ಅಂಥ ಹರಿದಾಸರ ಕೀರ್ತನೆಗಳು ದೊರೆತಲ್ಲಿ ಮುಂದೆ ಪರಿಷ್ಕರಣ ಸಂದರ್ಭದಲ್ಲಿ ಪ್ರಕಟಿಸಲು ಕ್ರಮಕೈಗೊಳ್ಳಲಾಗುವುದು.

ಸಮಗ್ರ ದಾಸಸಾಹಿತ್ಯ ಯೋಜನೆಯಡಿ ಪ್ರಕಟವಾಗುತ್ತಿರುವ ಆಯಾ ಸಂಪುಟಗಳ ಸಂಪಾದಕರಿಗೆ ಹಾಗೂ ಈ ಕಾರ್ಯದಲ್ಲಿ ನಮ್ಮೊಡನೆ ಸಹಕರಿಸಿದ ಸಂಪಾದಕ ಮಂಡಳಿಯವರಿಗೆ ಹಾಗೂ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಹಿಂದಿನ ನಿರ್ದೇಶಕರಾದ ಶ್ರೀ ಕೆ. ಸಿ. ರಾಮಮೂರ್ತಿ, ಶ್ರೀ ಸಿ. ಸೋಮಶೇಖರ ಅವರಿಗೆ, ಜಂಟಿ ನಿರ್ದೇಶಕರಾದ ಶ್ರೀ ಕಾ. ತ. ಚಿಕ್ಕಣ್ಣ ಅವರಿಗೆ, ಸಹಾಯಕ ನಿರ್ದೇಶಕರಾದ ಶ್ರೀಮತಿ ವೈ. ಎಸ್. ವಿಜಯಲಕ್ಷ್ಮಿ ಹಾಗೂ ಡಾ. ಮಂಜುಳ ಅವರಿಗೆ ಕೃತಜ್ಞತೆಗಳು.

ಹರಿದಾಸರ ಕೀರ್ತನೆಗಳನ್ನು ಆಯ್ದು ಸಂಗೀತಕ್ಕೆ ಆಯ್ಕೆ ಮಾಡಲು ನೆರವಾದ ಶ್ರೀ ವಿನಾಯಕ ತೊರವಿ, ಶ್ರೀ ಮೈಸೂರು ವಿ. ಸುಬ್ರಹ್ಮಣ್ಯ, ಶ್ರೀ ಆರ್. ಕೆ. ಪದ್ಮನಾಭ, ಶ್ರೀ ಬಾನಂದೂರು ಕೆಂಪಯ್ಯ ಹಾಗು ಶ್ರೀಮತಿ ಮಾಲತಿ ಶರ್ಮರವರಿಗೆ, ಮತ್ತು ಈ ಯೋಜನೆಯಲ್ಲಿ ಪಾಲ್ಗೊಂಡ ಎಲ್ಲ ಸಂಗೀತ ನಿರ್ದೇಶಕರಿಗೆ ಹಾಗೂ ಗಾಯಕರಿಗೆ ಕೃತಜ್ಞತೆಗಳು.

ಸಂಪುಟಗಳನ್ನು ಮುದ್ರಣಕ್ಕೆ ಅನುಗೊಳಿಸುವ ಕಾರ್ಯ ನಿರ್ವಹಿಸಿದ ಪ್ರೊ. ಜಿ. ಅಶ್ವತ್ಥನಾರಾಯಣ, ಡಾ. ಅನಂತ ಪದ್ಮನಾಭರಾವ್ ಮತ್ತು ಪ್ರೊ. ನಾ. ಗೀತಾಚಾರ್ಯ ಇವರಿಗೂ ಸಹ ಕೃತಜ್ಞತೆಗಳು.

ಈ ಸಮಗ್ರ ದಾಸಸಾಹಿತ್ಯ ಸಂಪುಟಗಳ ಮುದ್ರಣ ಕಾರ್ಯವನ್ನು ನಿರ್ವಹಿಸಿದ ಎಂ.ಎಸ್.ಐ.ಎಲ್. ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರಾದ ಶ್ರೀ ಅಶೋಕ್ ವಿ. ಡೇವಿಡ್ ಹಾಗೂ ವಿಶೇಷಾಧಿಕಾರಿಗಳಾದ ಶ್ರೀ ಎಂ. ರವಿಶಂಕರ್ ಅವರಿಗೆ ನನ್ನ ಕೃತಜ್ಞತೆಗಳು. ಸಮಗ್ರ ದಾಸಸಾಹಿತ್ಯವನ್ನು ಪ್ರಕಟಿಸುವುದು ಹರಿದಾಸರಿಗೂ ಕನ್ನಡ ಜನತೆಗೂ ನಾವು ಸಲ್ಲಿಸಬೇಕಾದ ಸೇವೆಯೆಂದು ಭಾವಿಸಿದ್ದೇನೆ. ಪಂಡಿತ–ಪಾಮರರನ್ನು ಏಕಕಾಲಕ್ಕೆ ಆಕರ್ಷಿಸಬಲ್ಲ ವಿಶಿಷ್ಟ ಸಾಮರ್ಥ್ಯ ದಾಸಸಾಹಿತ್ಯದ್ದು ಎಂದರೆ ತಪ್ಪಾಗಲಾರದು. ಕನ್ನಡ ಜನತೆಯು ಈ ಪ್ರಕಟಣೆಯ ಸದುಪಯೋಗ ಪಡೆದುಕೊಂಡೀತು ಎಂದು ಆಶಿಸಿದ್ದೇನೆ.

**ವೈ. ಕೆ. ಮುದ್ದುಕೃಷ್ಣ**

ನಿರ್ದೇಶಕರು

# ಸಂಪಾದಕ ಮಂಡಳಿಯ ನುಡಿ

ಕನ್ನಡ ಸಾಹಿತ್ಯದ ತವನಿಧಿಗಳಲ್ಲಿ ದಾಸಸಾಹಿತ್ಯವೂ ಒಂದು. ಕನ್ನಡಜನಕ್ಕೆ ಪಂಪನಂತಹ ಪ್ರೌಢಕವಿಗಳು ಗೊತ್ತಿರಲಿ ಬಿಡಲಿ, ದಾಸರ ಹಾಡುಗಳು ಗೊತ್ತಿಲ್ಲದವರು ಮಾತ್ರ ಅಪರೂಪ. ಜನರ ಮೇಲೆ ನಿರಂತರ ಪ್ರಭಾವವನ್ನು ಬೀರುವ ಜನಸಮ್ಮುಖತೆ ದಾಸಸಾಹಿತ್ಯದ ಪ್ರಮುಖ ಲಕ್ಷಣಗಳಲ್ಲಿ ಒಂದು. ಇಂತಹ ದಾಸರ ಹಾಡುಗಳು ಜ್ಞಾನಸಂಪದ ಹಾಗೂ ಭಕ್ತಿಸಂಪದಗಳ ಸಾರ್ವತ್ರಿಕ ಹಬ್ಬುಗೆಗೆ ಸಾಧನವಾಗಿ ಪರಿಣಮಿಸಿವೆ.

ಕನ್ನಡ ನಾಡಿನಾದ್ಯಂತ ಎಲ್ಲ ಸ್ತರಗಳಲ್ಲಿ ವರ್ಗ-ವರ್ಣಗಳ ಭೇದವಿಲ್ಲದೆ, ಜನರ ಬಾಯಲ್ಲಿ ಉಳಿದುಕೊಂಡು ಬಂದ ಈ ಸಾಹಿತ್ಯವನ್ನು ಮೊಟ್ಟಮೊದಲಿಗೆ ಪ್ರಕಟಿಸಿದ ಶ್ರೇಯಸ್ಸು ಬಾಸೆಲ್ ಮಿಶನ್ನಿನ ರೆ. ಹರ್ಮನ್ ಮೊಗ್ಲಿಂಗ್‌ರಿಗೆ ಸೇರುತ್ತದೆ. ಇವರು ತಮ್ಮ ಇಲ್ಲಿಯ ವಾಸ್ತವ್ಯದಲ್ಲಿ (೧೮೩೬ರಿಂದ) ನಾಲ್ಕುನೂರಕ್ಕೂ ಮೀರಿದ ದಾಸರಪದಗಳನ್ನು ಸಂಗ್ರಹಿಸಿದ್ದರು. ಅವುಗಳಲ್ಲಿಯ ಒಂದು ನೂರು ಪದಗಳ ಸಂಗ್ರಹವನ್ನು 'ದಾಸರ ಪದಗಳು' ಎಂಬ ಹೆಸರಿನಿಂದ ಕ್ರಿ. ಶ. ೧೮೫೦ರಲ್ಲಿ, ಮತ್ತೆ ಕ್ರಿ.ಶ. ೧೮೫೨ರಲ್ಲಿ ೧೭೪ ಪದಗಳುಳ್ಳ ಸಂಕಲನವನ್ನು ಮಂಗಳೂರಿನಲ್ಲಿ ಕಲ್ಲಚ್ಚಿನಲ್ಲಿ ಛಾಪಿಸಿ ಪ್ರಕಟಿಸಿದರು. ಈ ವಿಷಯವನ್ನು ೧೮೭೩ರಲ್ಲಿ ಪ್ರಕಟವಾದ ಇಂಡಿಯನ್ ಎಂಟಿಕ್ವೆರಿಯ 'On the Karnataka Vaishnava Dasas' – ಎಂಬ ತಮ್ಮ ಲೇಖನದಲ್ಲಿ ರೆ. ಕಿಟೆಲ್ಲರು ಕಾಣಿಸಿದ್ದಾರೆ. ಇದರಿಂದ ಕಿಟೆಲ್‌ರಂಥವರು ಕೂಡ ದಾಸರ ಪದಗಳ ಮಹತ್ವವನ್ನು ಮತ್ತು ಜನಪ್ರಿಯತೆಯನ್ನು ಗುರುತಿಸಿದ್ದರು ಎಂಬುದು ಗೊತ್ತಾಗುತ್ತದೆ. ಪ್ರಾಸಂಗಿಕವಾಗಿ ಇದುವೆ ದಾಸಸಾಹಿತ್ಯದ ಕುರಿತಾದ ಮೊದಲ ಲೇಖನವೂ ಆಗಿದೆ.

ಆ ನಂತರದ ದಿನಗಳಲ್ಲಿ ಈ ಕ್ಷೇತ್ರದಲ್ಲಿ ಹಲವಾರು ಜನರು ಕೆಲಸವನ್ನು ಮುಂದುವರಿಸಿದರು. ರೆ. ಮೊಗ್ಲಿಂಗರ 'ದಾಸರ ಪದಗಳು' ಇದರ ದ್ವಿತೀಯ ಆವೃತ್ತಿಯನ್ನು ೧೮೭೧ರಲ್ಲಿ ಜಾನ್ ಗ್ಯಾರೆಟರ ಸೂಚನೆಯ ಮೇರೆಗೆ ಹೊಳಕಲ್ಲು ನರಸಿಂಹಯ್ಯನವರು ಬೆಂಗಳೂರಿನಿಂದ ಪ್ರಕಟಿಸಿದರು. ೧೮೭೩ರಲ್ಲಿ ಹಿಂದೂ ಭಾಷಾ ಸಂಜೀವಿನೀ ಮುದ್ರಣ ಶಾಲೆಯಲ್ಲಿ 'ಹರಿಭಜನೆ, ಕೀರ್ತನೆ' ಎಂಬ ಸಂಗ್ರಹ ಪ್ರಕಟವಾಯಿತು. ೧೮೯೦ನೆಯ ದಶಕದಲ್ಲಿ ಬೆಳಗಾವಿಯ ಆಬಾಜಿ ರಾಮಚಂದ್ರ ಸಾವಂತ ಇವರು ದೇವನಾಗರಿ ಲಿಪಿಯಲ್ಲಿ "ದಾಸರ ಪದಗಳ ಸಂಗ್ರಹವು" ಎಂಬುದಾಗಿ ಎರಡು ಭಾಗಗಳಲ್ಲಿ ಪ್ರಕಟಿಸಿದರು. ಆ ದಶಕದಲ್ಲಿಯೇ ಮಡಕಶಿರಾದ ಬಾಲಕೃಷ್ಣರಾಯರು ೧೮೯೪ರಲ್ಲಿ 'ಪುರಂದರ ದಾಸರು ಮೊದಲಾದ ಅಪರೋಕ್ಷ ಜ್ಞಾನಿಗಳ ಪದಗಳು' ಎಂಬ ಪುಸ್ತಕವನ್ನು ತೆಲುಗು ಲಿಪಿಯಲ್ಲಿ ಮುದ್ರಿಸಿದ್ದು ಗಮನಾರ್ಹವಾಗಿದೆ. ಮತ್ತೆ ೧೯೦೮ರಲ್ಲಿ ಅವರೇ ಇನ್ನೊಂದು ಸಂಕಲನವನ್ನೂ ಪ್ರಕಟಿಸಿದ್ದಾರೆ.

ಹೀಗೆ ೧೮೫೦ರಷ್ಟು ಹಿಂದೆಯೇ ಪ್ರಾರಂಭವಾದ ದಾಸರ ಪದಗಳ ಸಂಗ್ರಹ ಹಾಗೂ ಪ್ರಕಟಣೆಯ ಕಾರ್ಯಕ್ಕೆ ಒಂದು ವ್ಯವಸ್ಥಿತ ರೂಪವನ್ನು ಕೊಟ್ಟು, ನಾಡಿನಾದ್ಯಂತ ಹರಿದು ಹಂಚಿಹೋದ, ಜನರ ಬಾಯಲ್ಲಿ ಉಳಿದುಕೊಂಡು ಬಂದ ವಿವಿಧ ದಾಸರ ಪದಗಳನ್ನು ಸಂಗ್ರಹಿಸಿ ಪ್ರಕಟಿಸಲು ಪ್ರಾರಂಭಿಸಿದವರು ಉಡುಪಿಯ ಪಾವಂಜೆ ಗುರುರಾಯರು. ಅವರು ೧೯೧೪ರಲ್ಲಿ ಪ್ರಕಟಿಸಿದ ಮೊದಲ ಸಂಕಲನದ ಹೆಸರು 'ಉದಯರಾಗವು' ಎಂಬುದು. ಅನಂತರದ ದಿನಗಳಲ್ಲಿ ಪುರಂದರದಾಸರ ಕೀರ್ತನೆಗಳನ್ನು ಐದು ಸಂಪುಟಗಳಲ್ಲಿ ಮತ್ತು ಉಳಿದ ದಾಸರ ಕೃತಿಗಳನ್ನು ಬಿಡಿಬಿಡಿಯಾಗಿ ಪ್ರಕಟಿಸಿದರು. ಹೀಗೆ ನಾಡಿನ ದಕ್ಷಿಣದ ಅಂಚಿನ ಉಡುಪಿಯಲ್ಲಿ ಪ್ರಾರಂಭವಾದ ಕೆಲಸವನ್ನು ಉತ್ತರದ ಅಂಚಿನ ಲಿಂಗಸುಗೂರಿನಲ್ಲಿ ಗೊರಾಬಾಳ ಹಣಮಂತರಾಯರು 'ವರದೇಂದ್ರ ಸಾಹಿತ್ಯ ಮಾಲೆ'ಯನ್ನು ಪ್ರಾರಂಭಿಸಿ ತಮ್ಮ ಇಡೀ ಜೀವನವನ್ನೇ ಹರಿದಾಸ ಸಾಹಿತ್ಯದ ಸಂಗ್ರಹ ಮತ್ತು ಪ್ರಕಟಣೆಗೆ ಮೀಸಲಾಗಿರಿಸಿದರು. ಇತ್ತ ಮೈಸೂರು ಭಾಗದಲ್ಲಿ ಸುಪ್ರಸಿದ್ಧ ದಾಸರ ಹಾಡುಗಳನ್ನು ತಕ್ಕಮಟ್ಟಿಗೆ ಶಾಸ್ತ್ರಶುದ್ಧವಾಗಿ ಪ್ರಕಟಿಸಲು

ಸುಬೋಧ ರಾಮರಾಯರು ಮುಂದಾದರು. ಇದೇ ಬಗೆಯ ಕೆಲಸವನ್ನು ಧಾರವಾಡ ಪ್ರದೇಶದಲ್ಲಿ ನಾರಾಯಣರಾವ ಕಲಮದಾನಿ, ಹುಚ್ಚರಾವ ಬೆಂಗೇರಿ ಹಾಗೂ ಬೆಟಗೇರಿ ಕೃಷ್ಣಶರ್ಮರು ಮಾಡಿದರು. ಇದರೊಂದಿಗೆ, ಭಜನೆಯ ದೃಷ್ಟಿಯಿಂದ ಅನುಕೂಲವಾಗುವಂತೆ ನಾಡಿನ ವಿವಿಧ ಭಾಗಗಳಲ್ಲಿ ದಾಸಸಾಹಿತ್ಯಾಸಕ್ತರು ತಮತಮಗೆ ಬೇಕಾದ ಪದಗಳ ಸಂಗ್ರಹವನ್ನು ಪ್ರಕಟಿಸತೊಡಗಿದರು. ಇದರಿಂದಾಗಿ ನಾಡಿನ ಬಹುತೇಕ ಭಾಗಗಳಲ್ಲಿ ಬೇರೆ ಬೇರೆ ದಾಸರು ಇದ್ದುದು ಮತ್ತು ಅವರು ಹಾಡುಗಳನ್ನು ಬರೆದಿದ್ದಾರೆ ಎಂಬುದು ಗಮನಕ್ಕೆ ಬಂದಿತು. ಅದು 'ದಾಸ-ಪೀಳಿಗೆ'ಯನ್ನು ಗುರುತಿಸಲು ಸಹಾಯವಾಯಿತು.

ಶ್ರೀಪಾದರಾಜರಿಂದ ಪ್ರಾರಂಭವಾದ ಕೀರ್ತನೆಗಳ ರಚನೆಯ ಸಂಪ್ರದಾಯದಲ್ಲಿ ಈ ಐದುನೂರು ವರ್ಷಗಳಲ್ಲಿ ಸುಮಾರು ಮುನ್ನೂರು ಜನ ಹರಿದಾಸರು ಹುಟ್ಟಿ ಮೂವತ್ತು ಸಾವಿರಕ್ಕೂ ಮಿಕ್ಕ ಕೀರ್ತನೆಗಳನ್ನು ರಚಿಸಿದ್ದಾರೆಂದರೆ ಅವುಗಳ ಮಹತ್ವ ಗೊತ್ತಾಗದೇ ಇರದು.

ಇಡಿಯಾಗಿ-ಬಿಡಿಬಿಡಿಯಾಗಿ ವ್ಯಕ್ತಿಗಳಿಂದ, ಸಂಘ ಸಂಸ್ಥೆಗಳಿಂದ ದಾಸರ ಪದಗಳು ಪ್ರಕಟವಾಗುತ್ತ ಬರುತ್ತಿರುವಾಗಲೇ ಪುರಂದರ ಕನಕದಾಸರ ಚತುಃಶತಮಾನೋತ್ಸವ ಸಂದರ್ಭಗಳಲ್ಲಿ ಅವರ ಸಮಗ್ರ ಕೃತಿಗಳು ಸರ್ಕಾರದಿಂದ ಹಾಗೂ ವಿವಿಧ ಸಂಘ ಸಂಸ್ಥೆಗಳಿಂದ ಪ್ರಕಟವಾದವು. ಆದರೆ ಸಮಗ್ರ ದಾಸಸಾಹಿತ್ಯದ ಪ್ರಕಟಣೆ ಈವರೆಗೆ ಆಗಲೇ ಇಲ್ಲವೆಂದು ಹೇಳಬಹುದು. ಇಂಥದೊಂದು ಪ್ರಯತ್ನವನ್ನು ಮೂರು ದಶಕಗಳ ಹಿಂದೆ ಮೈಸೂರು ವಿಶ್ವವಿದ್ಯಾನಿಲಯವು ಕೈಗೊಂಡಿತು. ವೈಜ್ಞಾನಿಕ ರೀತಿಯಲ್ಲಿ ಶಾಸ್ತ್ರಶುದ್ಧವಾಗಿ ದಾಸಸಾಹಿತ್ಯವನ್ನು ಪ್ರಕಟಿಸುವುದರ ಅಡಿಗಲ್ಲನ್ನು ಹಾಕಿದ ಶ್ರೇಯಸ್ಸು ಆ ಮಾಲೆಯ ಸಂಪಾದಕರಾಗಿದ್ದ ಡಾ. ಜಿ. ವರದರಾಜರಾವ್ ಅವರಿಗೆ ಸಲ್ಲಬೇಕು. ಇದುವರೆಗೆ ಕೆಲವು ಸಂಪುಟಗಳು ಮಾತ್ರ ಬಂದಿವೆ. ಆದರೆ ಹಸ್ತಪ್ರತಿಗಳಲ್ಲಿ ವಿಪುಲ ದಾಸಸಾಹಿತ್ಯವನ್ನು ಸಂಗ್ರಹಿಸಲಾಗಿದೆ. ಅದೇ ರೀತಿಯಲ್ಲಿ ಲಿಂಗಸುಗೂರಿನಲ್ಲಿ, ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಹಾಗೂ ತಿರುಪತಿಯ ದಾಸಸಾಹಿತ್ಯ ಪ್ರೊಜೆಕ್ಟದಲ್ಲಿ ಕೂಡ ವಿಪುಲ ಹಸ್ತಪ್ರತಿಗಳ ಸಂಗ್ರಹವಿದೆ. ಇವರೆಲ್ಲರ ಸಹಕಾರದಿಂದ ಈಗ ಕರ್ನಾಟಕ ಸರ್ಕಾರವು ಸಮಗ್ರ ದಾಸಸಾಹಿತ್ಯವನ್ನು ಒಂದೆಡೆ ಸಂಗ್ರಹಿಸಿ ಪ್ರಕಟಿಸುವ ಸಾಹಸದ ಕಾರ್ಯವನ್ನು ಮಾಡುತ್ತಿದೆ.

## ಸಂಪುಟ ಯೋಜನೆ

ದಾಸಸಾಹಿತ್ಯದ ಪರಿಷ್ಕರಣ ಕಾರ್ಯ ತುಂಬ ಜಟಿಲವಾದುದೆಂಬುದು ಸಂಪಾದಕ ಮಂಡಳಿಯ ಪ್ರಥಮ ಸಭೆಯಲ್ಲಿಯೇ ಅನುಭವಕ್ಕೆ ಬಂದಿತು. ಕಳೆದ ಐದು ಶತಮಾನಗಳಿಂದ ನಿರಂತರ ಹರಿದುಬಂದ ದಾಸಸಾಹಿತ್ಯ ರಚನೆಯಲ್ಲಿಯ ದಾಸರ ಹಾಗೂ ದಾಸರ ಪದಗಳ ಸಂಖ್ಯಾಬಾಹುಳ್ಯವನ್ನು ಗಮನಿಸಿ ಅದಕ್ಕೊಂದು ಕಾಲಮಿತಿಯನ್ನು ಹಾಕಿಕೊಳ್ಳುವುದು ಅನಿವಾರ್ಯ ವಾಯಿತು. ಹಾಗೆ ದಾಸಸಾಹಿತ್ಯದ ಪ್ರಾರಂಭ ಕಾಲದಿಂದ ೧೯ನೆಯ ಶತಮಾನದ ಅಂತ್ಯದವರೆಗೆ ರಚಿತಗೊಂಡ ವೈದಿಕ ಪರಂಪರೆಯ ದಾಸರ ಪದಗಳನ್ನು ಸಂಗ್ರಹಿಸುವುದೆಂದೂ, ಅದರಲ್ಲಿ ದ್ವೈತ, ಅದ್ವೈತ, ವಿಶಿಷ್ಟಾದ್ವೈತ ಪರಂಪರೆಯ ಲಭ್ಯವಿದ್ದ ಹಾಡುಗಳನ್ನು ಸೇರಿಸಿಕೊಂಡು ೩೫ ಸಂಪುಟಗಳಲ್ಲಿ ಪ್ರಕಟಿಸುವುದೆಂದೂ ನಿರ್ಧರಿಸಲಾಯಿತು.

ಈ ೩೫ ಸಂಪುಟಗಳನ್ನು* ಸಂಪಾದಕ ಮಂಡಳಿಯ ಸದಸ್ಯರಲ್ಲದೆ ನಾಡಿನ ಹಲವಾರು ವಿದ್ವಾಂಸರನ್ನು ಸಂಪಾದಿಸಿಕೊಡಲು ಕೇಳಿಕೊಳ್ಳಲಾಯಿತು.

ಇಂಥದೊಂದು ಬೃಹತ್ ಕಾರ್ಯವನ್ನು ಕೈಗೊಂಡಾಗ ಕೆಲವು ಮಾರ್ಗದರ್ಶಿ ಸೂತ್ರಗಳನ್ನು ಅನುಸರಿಸುವುದು ಅನಿವಾರ್ಯವಾಗುತ್ತದೆ. ಅನ್ಯ ಮತ-ಪಂಥಗಳ ಟೀಕೆಗಳು ಬಂದಿದ್ದರೆ ಅಂಥ ಹಾಡುಗಳನ್ನು ಕೈಬಿಡಬೇಕು. ಒಂದೇ ಹಾಡು ಇಬ್ಬರು ದಾಸರ ಅಂಕಿತದಲ್ಲಿ ಪ್ರಚಲಿತದಲ್ಲಿದ್ದರೆ, ಎರಡೂ ಕಡೆಗೆ ಅವುಗಳನ್ನು ಕೊಟ್ಟು, ಕೆಳಗೆ 'ಈ ಕೀರ್ತನೆ . . . . ದಾಸರ ಅಂಕಿತದಲ್ಲೂ ಇದೆ' ಎಂದೂ ಸೂಚಿಸಬೇಕು. ದ್ವೈತ ಸಂಪ್ರದಾಯದ ಕೀರ್ತನೆಗಳನ್ನು ಪ್ರಕಟಿಸುವಾಗ ದೇವ-ಗುರು ತಾರತಮ್ಯವನ್ನು ಪಾಲಿಸಬೇಕು ; ಉಳಿದೆಡೆ ಗಣೇಶ ಪ್ರಾರ್ಥನೆ, ಭಗವಂತನ ನಾಮಸಂಕೀರ್ತನೆ, ಆತ್ಮನಿವೇದನೆ, ಲೋಕನೀತಿ, ತಾತ್ವಿಕ, ಕಥನಾತ್ಮಕ, ಸಂಪ್ರದಾಯ ಹಾಗೂ ವಿಶೇಷ ಹಾಡುಗಳೆಂದು ಮುಂತಾಗಿ ವಿಂಗಡಿಸಿಕೊಡಬೇಕು-ಎಂಬುದಾಗಿ ನಿರ್ಧರಿಸಲಾಯಿತು.

---

*ಇವುಗಳಲ್ಲಿ ಕೆಲವುಗಳಿಗೆ ಎರಡು ಮೂರು ಭಾಗಗಳಿವೆ.

ಪ್ರತಿಯೊಂದು ಸಂಪುಟದ ಪ್ರಾರಂಭದಲ್ಲಿ ಹಾಡುಗಳ ಪರಿವಿಡಿಯನ್ನು ಕೊಟ್ಟು ಪ್ರಸ್ತಾವನೆಯಲ್ಲಿ ಆಯಾ ದಾಸರ ಸಂಕ್ಷಿಪ್ತ ಜೀವನ ಚರಿತ್ರೆ, ಕೃತಿಗಳ ಸಮೀಕ್ಷೆ, ಶೈಲಿ ಇತ್ಯಾದಿಗಳನ್ನು ವಿವರಿಸಿ, ಗ್ರಂಥಸಂಪಾದನೆಯ ಆಕರಗಳನ್ನೂ ಕೊಡಲು ಪ್ರಯತ್ನಿಸಲಾಗಿದೆ. ಕೊನೆಯಲ್ಲಿ ಬರುವ ಅನುಬಂಧಗಳಲ್ಲಿ ಕಠಿಣ ಶಬ್ದಗಳ ಅರ್ಥ, ಟಿಪ್ಪಣಿ ಮತ್ತು ವಿಶಿಷ್ಟ ಅಂಕಿತನಾಮಗಳ ಸೂಚಿ ಹಾಗೂ ಹಾಡುಗಳ ಅಕಾರಾದಿಯನ್ನು ಕೊಡಲಾಗಿದೆ.

ಈ ಸಂಪುಟಗಳು ಜನಪ್ರಿಯ ಆವೃತ್ತಿಗಳಾಗಿರುವುದರಿಂದ ಲಭ್ಯವಿರುವ ಪಾಠಾಂತರಗಳಲ್ಲಿ ಯೋಗ್ಯವಾದುದನ್ನು ಸ್ವೀಕರಿಸಿದೆ. ಅನ್ಯ ಪಾಠಗಳನ್ನು ಅಡಿಯಲ್ಲಿ ನಮೂದಿಸಿಲ್ಲ. ಆದರೂ ಇವು ವಿದ್ವಜ್ಜನಪ್ರಿಯ ಆವೃತ್ತಿಗಳೂ ಆಗಬೇಕೆಂಬ ರೀತಿಯಲ್ಲಿ ಈ ಸಂಪುಟಗಳನ್ನು ರೂಪಿಸಲು ಪ್ರಯತ್ನಿಸಿದ್ದೇವೆ.

## ಕೃತಜ್ಞತೆಗಳು

ಕಳೆದ ನೂರೈವತ್ತು ವರ್ಷಗಳಿಂದ ಪಾಶ್ಚಾತ್ಯ ಮಿಶನರಿಗಳಿಂದ ಹಿಡಿದು ಈ ಮೊದಲು ಉಲ್ಲೇಖಿಸಿದ ನಾಡಿನ ಅನೇಕ ವಿದ್ವಜ್ಜನರು, ಸಂಘ ಸಂಸ್ಥೆಗಳು, ವಿಶ್ವವಿದ್ಯಾಲಯಗಳು ದಾಸಸಾಹಿತ್ಯ ಕುರಿತು ನಿರಂತರ ದುಡಿದು ವಿಪುಲ ಸಾಮಗ್ರಿಯನ್ನು ಪ್ರಕಟಿಸಿದ್ದಾರೆ. ಈ ಎಲ್ಲ ವ್ಯಕ್ತಿಗಳಿಗೂ, ಸಂಘ ಸಂಸ್ಥೆಗಳಿಗೂ ನಮ್ಮ ಕೃತಜ್ಞತಾಪೂರ್ವಕ ವಂದನೆಗಳು ಸಲ್ಲುತ್ತವೆ.

ಈ ಯೋಜನೆ ಅಸ್ತಿತ್ವಕ್ಕೆ ಬಂದುದೂ ಒಂದು ವಿಶಿಷ್ಟ ಸಂದರ್ಭದಲ್ಲಿ ಎಂಬುದನ್ನು ಇಲ್ಲಿ ನಮೂದಿಸಬೇಕು. ಕರ್ನಾಟಕ ಸರ್ಕಾರವು ನಾಡಿನ ಖ್ಯಾತ ಸಂಶೋಧಕರಾದ ಡಾ. ಎಂ. ಎಂ. ಕಲಬುರ್ಗಿ ಅವರ ಪ್ರಧಾನ ಸಂಪಾದಕತ್ವದಲ್ಲಿ ಸಮಗ್ರ ವಚನಸಾಹಿತ್ಯವನ್ನು ಪ್ರಕಟಿಸಿತಷ್ಟೇ. ಅವರೇ 'ದಾಸಸಾಹಿತ್ಯ' ಯೋಜನೆಯನ್ನು ರೂಪಿಸಿ ಶ್ರೀ ಪೇಜಾವರ ಮಠಾಧೀಶರಾದ ಶ್ರೀ ವಿಶ್ವೇಶತೀರ್ಥರ ಮೂಲಕ ಈ ಯೋಜನೆಯತ್ತ ಸರ್ಕಾರದ ಗಮನ ಸೆಳೆದರು. ಇದನ್ನು ಅರಿತ ಅಂದಿನ ಮುಖ್ಯಮಂತ್ರಿಗಳೂ, ಅನಂತರ ಭಾರತದ ಪ್ರಧಾನಮಂತ್ರಿಗಳೂ ಆಗಿದ್ದ ಸನ್ಮಾನ್ಯ ಶ್ರೀ ಹೆಚ್. ಡಿ. ದೇವೇಗೌಡರು ಮುಧೋಳದಲ್ಲಿ (೧೯೯೫) ಜರುಗಿದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ, "ಸರ್ಕಾರವು ಸಮಗ್ರ

ದಾಸಸಾಹಿತ್ಯವನ್ನು ಪ್ರಕಟಿಸಲು ಒಪ್ಪಿಕೊಂಡಿದೆ" ಎಂದು ಘೋಷಿಸಿದರು. ಅದರಂತೆ, ಸರ್ಕಾರವು ಒಂಬತ್ತು ಜನರ ಸಂಪಾದಕ ಮಂಡಳಿಯನ್ನು ರಚಿಸಿತು. ಅದರಲ್ಲಿ ಡಾ. ಶ್ರೀನಿವಾಸ ಹಾವನೂರ, ಡಾ. ಟಿ.ಎನ್. ನಾಗರತ್ನ ಮತ್ತು ಪ್ರೊ. ವಸಂತ ಕುಷ್ಟಗಿ ಅವರನ್ನು ಸಮಿತಿಯ ಕಾರ್ಯನಿರ್ವಾಹಕ ಸಂಪಾದಕರೆಂದು ನಿಯಮಿಸಿತು. ಜೊತೆಗೆ ಈ ಮೊದಲು ಇಂಥ ಕಾರ್ಯವನ್ನು ಯಶಸ್ವಿಯಾಗಿ ಮಾಡಿದ ಅನುಭವಿ ಡಾ. ಎಂ. ಎಂ. ಕಲಬುರ್ಗಿ, ದಾಸಸಾಹಿತ್ಯದಲ್ಲಿ ನುರಿತ ವಿದ್ವಾಂಸರುಗಳಾದ ಪ್ರೊ. ಎಂ. ರಾಜಗೋಪಾಲಾಚಾರ್ಯ, ಡಾ. ಕೃಷ್ಣ ಕೊಲ್ಹಾರ ಕುಲಕರ್ಣಿ, ಡಾ. ಮಂದಾಕಿನಿ, ಪ್ರೊ. ಸುಧಾಕರ ಮತ್ತು ಡಾ. ಬಸವರಾಜ ಸಬರದ ಅವರನ್ನು ಸಂಪಾದಕ ಮಂಡಳಿಯ ಸದಸ್ಯರನ್ನಾಗಿ ನಿಯಮಿಸಿತು. ಅವರುಗಳ ನಿರಂತರ ಪರಿಶ್ರಮದ ಫಲವೇ ಈ ಸಮಗ್ರ ದಾಸಸಾಹಿತ್ಯದ ಪ್ರಕಟಣಾ ಕಾರ್ಯ. ಈ ಪ್ರಕಟಣಾ ಕಾರ್ಯದಲ್ಲಿ ಅವರುಗಳೊಂದಿಗೆ ೩೫ ಸಂಪುಟಗಳನ್ನು ಸಿದ್ಧಪಡಿಸುವಲ್ಲಿ ಸರ್ವಶ್ರೀ ಡಾ. ಅರಳುಮಲ್ಲಿಗೆ ಪಾರ್ಥಸಾರಥಿ, ಡಾ. ಡಿ. ಆರ್. ಪಾಂಡುರಂಗ, ಡಾ. ಅನಂತಪದ್ಮನಾಭರಾವ್, ಪ್ರೊ. ಬಿ. ಆರ್. ಕುಲಕರ್ಣಿ, ಡಾ. ಕೆ. ಜಿ. ವೆಂಕಟೇಶ್, ಪ್ರೊ. ಜಿ. ಅಶ್ವತ್ಥನಾರಾಯಣ, ಡಾ. ಕೆ. ಗೋಕುಲನಾಥ, ಡಾ. ಕೆ. ಎಂ. ಕೃಷ್ಣರಾವ್, ಶ್ರೀ ಹಣಮಂತ ತಾಸಗಾಂವಕರ್, ಪ್ರೊ. ನಾ. ಗೀತಾಚಾರ್ಯ, ಡಾ. ಸ್ವಾಮಿರಾವ್ ಕುಲಕರ್ಣಿ. ಶ್ರೀ ಹನುಮನಗೌಡ, ಶ್ರೀ ಎ. ಎನ್. ಅನಂತಸ್ವಾಮಿರಾವ್, ಡಾ. ನಾರಾಯಣಾಚಾರ್ಯ ಧೂಳಖೇಡ, ಶ್ರೀ ಶಾಶ್ವತಸ್ವಾಮಿ ಮುಕ್ಕುಂದಿಮಠ, ಶ್ರೀ ಕೆ. ಎಸ್. ವೆಂಕಟೇಶ್ ಮತ್ತು ಶ್ರೀ ಎಚ್. ಎಸ್. ಶ್ರೀನಿವಾಸಮೂರ್ತಿ ಅವರುಗಳು ಹಾಗೂ ಶ್ರೀಮತಿಯರಾದ ನಳಿನಿ ವೆಂಕಟೇಶ್, ಮೀನಾರಾವ್, ಲೀಲಾವತಿ ಎಸ್. ರಾವ್, ಡಾ. ಜಯಲಕ್ಷ್ಮಿ ಮಂಗಳಮೂರ್ತಿ, ಡಾ. ಅಕ್ಕಮಹಾದೇವಿ, ಶೀಲಾ ದಾಸ್, ಡಾ. ರಮಾ ಕಲ್ಲೂರಕರ, ಡಾ. ಸೀತಾ ಗುಡೂರ ಕುಲಕರ್ಣಿ, ಹೆಚ್. ಎಸ್. ಪದ್ಮಾ ಮೂರ್ತಿ, ಮತ್ತು ರುಕ್ಮಿಣಿ ಗಿರಿಮಾಜಿ ಅವರುಗಳು ತುಂಬ ಶ್ರಮವಹಿಸಿ ಸಂಪುಟಗಳನ್ನು ಸಿದ್ಧಪಡಿಸಿಕೊಟ್ಟಿದ್ದಾರೆ. ಅವರುಗಳಿಗೆ ಸಂಪಾದಕ ಮಂಡಳಿಯು ಕೃತಜ್ಞತೆಗಳನ್ನು ಸಲ್ಲಿಸುತ್ತದೆ. ಈ ಮಧ್ಯೆ ಸಂಪಾದಕ ಸಮಿತಿಯ ಸದಸ್ಯರಲ್ಲೊಬ್ಬರಾದ ಪ್ರೊ. ಎಂ. ರಾಜಗೋಪಾಲಾಚಾರ್ಯರು ಮತ್ತು ಡಾ. ಮಂದಾಕಿನಿ ಹಾಗೂ ಸಂಪುಟ ಸಂಪಾದಕರಲ್ಲಿ ಒಬ್ಬರಾದ ಶ್ರೀ ಎಚ್. ಎಸ್. ಶ್ರೀನಿವಾಸಮೂರ್ತಿ, ಡಾ. ಕೆ.ಎಂ. ಕೃಷ್ಣರಾವ್, ಶ್ರೀಮತಿ ಪದ್ಮಾ ಮೂರ್ತಿ ಹಾಗೂ ಶ್ರೀ ಹನುಮನಗೌಡ ಮಾನ್ವಿ ಅವರು ನಮ್ಮನ್ನು ಅಗಲಿದ್ದು ದುಃಖದ ವಿಷಯವಾಗಿದೆ.

ಆಯಾ ಕಾಲದಲ್ಲಿ ಈ ಯೋಜನೆಗೆ ಸಹಕರಿಸಿದ ಹಾಗೂ ಈ ಯೋಜನೆಯ ಪರಿಕಲ್ಪನೆ ಯಶಸ್ವಿಯಾಗಿ ಕಾರ್ಯಾನುಷ್ಠಾನಕ್ಕೆ ಬರುವ ದಿಸೆಯಲ್ಲಿ ಸಹಕರಿಸಿದ ಈ ಹಿಂದಿನ ಸರ್ಕಾರದ ಮಾನ್ಯ ಮುಖ್ಯಮಂತ್ರಿಗಳಿಗೆ ಹಾಗೂ ವಿಶೇಷವಾಗಿ ಇಂದಿನ ಮುಖ್ಯಮಂತ್ರಿಗಳಾದ ಸನ್ಮಾನ್ಯ ಶ್ರೀ ಎಸ್. ಎಂ. ಕೃಷ್ಣ ಅವರಿಗೆ, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಚಿವೆ ಶ್ರೀಮತಿ ರಾಣಿ ಸತೀಶ್ ಅವರಿಗೆ, ಇಲಾಖೆಯ ಹಿಂದಿನ ಕಾರ್ಯದರ್ಶಿಗಳಾದ ಶ್ರೀ ಚಂದ್ರಹಾಸ ಗುಪ್ತ ಮತ್ತು ಈಗಿನ ಕಾರ್ಯದರ್ಶಿಗಳಾದ ಶ್ರೀ ಸಿ. ಎಸ್. ಕೇದಾರ್ ಅವರಿಗೆ ನಮ್ಮ ನಮನಗಳು ಸಲ್ಲುತ್ತವೆ. ಈ ಕಾರ್ಯದಲ್ಲಿ ಈ ಯೋಜನೆಗೆ ನೆರವಾದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಹಿಂದಿನ ನಿರ್ದೇಶಕರುಗಳು ಹಾಗೂ ಈಗಿನ ನಿರ್ದೇಶಕರಾದ ಶ್ರೀ ವೈ. ಕೆ. ಮುದ್ದುಕೃಷ್ಣ, ಜಂಟಿ ನಿರ್ದೇಶಕರಾದ ಶ್ರೀ ಕಾ. ತ. ಚಿಕ್ಕಣ್ಣ, ಸಹಾಯಕ ನಿರ್ದೇಶಕರಾದ ಶ್ರೀಮತಿ ವೈ.ಎಸ್. ವಿಜಯಲಕ್ಷ್ಮಿ ಮತ್ತು ಡಾ. ಮಂಜುಳಾ ಅವರಿಗೆ ನಮ್ಮ ವಂದನೆಗಳು ಸಲ್ಲುತ್ತವೆ. ಈ ಕಾರ್ಯದಲ್ಲಿ ನೆರವಾದ ಎಂ. ಎಸ್. ಐ. ಎಲ್. ಸಂಸ್ಥೆಯ ಅಧಿಕಾರಿ ಹಾಗೂ ಸಿಬ್ಬಂದಿವರ್ಗಕ್ಕೆ, ವಿಶೇಷವಾಗಿ ಶ್ರೀ ಎಂ. ರವಿಶಂಕರ್, ವಿಶೇಷಾಧಿಕಾರಿ, ಅವರಿಗೆ ನಮ್ಮ ವಂದನೆಗಳು ಸಲ್ಲುತ್ತವೆ.

ಇದು ಒಂದು ದೊಡ್ಡ ಯೋಜನೆ. ಇದರ ಸಂಪಾದನೆಯ ಸಮಸ್ಯೆಗಳು ದೊಡ್ಡವು. ಪಾಠಾಂತರ, ರೂಪಾಂತರ, ಪ್ರಕ್ಷಿಪ್ತತೆ ಇತ್ಯಾದಿಗಳ ಗೊಂದಲಕ್ಕೆ ಗುರಿಯಾಗುತ್ತ ಬಂದ ವ್ಯಾಪಕ ಪ್ರಮಾಣದ ಈ ದಾಸಸಾಹಿತ್ಯವನ್ನು ಒಂದೆಡೆ ಸಂಗ್ರಹಿಸುವುದು, ಪುನರುಕ್ತಿಗಳನ್ನು ಗುರುತಿಸುವುದು, ಅಂಕಿತ ಪಲ್ಲಟಗಳನ್ನು ಸರಿಪಡಿಸುವುದು, ಪ್ರಕ್ಷಿಪ್ತಗಳನ್ನು ದೂರೀಕರಿಸುವುದು, ಕೊನೆಯದಾಗಿ ಕೀರ್ತನೆಗಳನ್ನು ಶುದ್ಧೀಕರಿಸುವುದು ಎಂಥವರನ್ನೂ ಧೈರ್ಯಗೆಡಿಸುವ ಕೆಲಸ. ಹೀಗಿದ್ದೂ ದಾಸಸಾಹಿತ್ಯದ ಮೇಲಿನ ಗೌರವ ಪ್ರೀತಿಗಳು ನಮ್ಮಿಂದ ಈ ಕೆಲಸ ಮಾಡಿಸಿವೆ. ನಮ್ಮ ಶಕ್ತಿಗೆ ಮೀರಿ ಉಳಿದಿರಬಹುದಾದ ದೋಷಗಳನ್ನು ಮನ್ನಿಸಬೇಕೆಂದು ಕೋರುತ್ತೇವೆ. ಈ ಮೂವತ್ತೈದು ಸಂಪುಟಗಳನ್ನು ಸಹೃದಯ ಲೋಕಕ್ಕೆ ಅರ್ಪಿಸುತ್ತಿದ್ದೇವೆ. ಸಮಗ್ರ ದಾಸಸಾಹಿತ್ಯವು ಸುಲಭ ಬೆಲೆಯಲ್ಲಿ ಕನ್ನಡಿಗರ ಮನೆ–ಮನಗಳಲ್ಲಿ ಬೆಳಗಲೆಂದು ಹಾರೈಸುತ್ತೇವೆ.

ಸಂಪಾದಕ ಮಂಡಳಿ

# ಪರಿವಿಡಿ

# ಪ್ರಸ್ತಾವನೆ

## ಮುದ್ದುಮೋಹನವಿಠಲದಾಸರು

(ದೊಡ್ಡಬಳ್ಳಾಪುರದ ಶ್ರೀ ರಾಘವೇಂದ್ರದಾಸರು)

ಕ್ರಿ. ಶ. ಹತ್ತೊಂಬತ್ತನೇ ಶತಮಾನದ ಪೂರ್ವ ಭಾಗದಲ್ಲಿ ದಕ್ಷಿಣ ಕರ್ನಾಟಕದಲ್ಲಿ ಹರಿದಾಸ ಪಂಥವು ಶಿಥಿಲವಾಗಿದ್ದು, ಅದನ್ನು ಪುನರುಜ್ಜೀವನ-ಗೊಳಿಸಿ ಸುಭದ್ರ ತಳಹದಿಯ ಮೇಲೆ ನಿಲ್ಲಿಸಬೇಕಾದ ಅವಶ್ಯಕತೆಯಿತ್ತು. ಈ ಸಮಯದಲ್ಲೇ ಶ್ರೀಮುದ್ದುಮೋಹನದಾಸರ ಅವತಾರವಾಯಿತು.

ಬೆಂಗಳೂರು ಜಿಲ್ಲೆಯ ದೊಡ್ಡಬಳ್ಳಾಪುರವೆಂಬ ಊರಿನಲ್ಲಿ ಮಾಧ್ವ ವೈಷ್ಣವ ಷಾಷ್ಠಿಕ ವಂಶದಲ್ಲಿ "ಹುಲುಬಂಡೆ" ಮನೆತನಕ್ಕೆ ಸೇರಿದ ವಸಿಷ್ಠ ಗೋತ್ರೋತ್ಪನ್ನರಾದ ರಾಘವೇಂದ್ರಪ್ಪ ದಂಪತಿಗಳು ವಾಸಿಸುತ್ತಿದ್ದರು. ರಾಘವೇಂದ್ರಪ್ಪನು ಮೈಸೂರು ರಾಜ್ಯಕ್ಕೆ ಮೊದಲನೆ ರೆಸಿಡೆಂಟ್ ಆಗಿ ನೇಮಕವಾಗಿದ್ದ ಕ್ಲೋಸ್ ಸಾಹೇಬನಿಗೆ ಆಪ್ತ ಕಾರಕೂನನಾಗಿದ್ದಂತೆ ತೋರುತ್ತದೆ. ನಂತರ ಜನಗಣತಿಯ ಮುಖ್ಯಾಧಿಕಾರಿಯಾಗಿ ನೇಮಿಸಲ್ಪಟ್ಟ ಕ್ಲೋಸ್ ಸಾಹೇಬನು ರಾಘವೇಂದ್ರಪ್ಪನನ್ನು ತನ್ನ ಆಪ್ತ ಅಧಿಕಾರಿಯಾಗಿ ನೇಮಿಸಿಕೊಂಡನು. ತನ್ನ ಸರ್ಕಾರಿ ಕಾರ್ಯನಿಮಿತ್ತ ರಾಘವೇಂದ್ರಪ್ಪನು ಮೂರು ಬಾರಿ ಭಾರತದಲ್ಲಿ ಸಂಚಾರ ಮಾಡಿ ಅನೇಕ ಗ್ರಂಥಗಳನ್ನು ಸಂಗ್ರಹಿಸಿ ತನ್ನ ಪ್ರವಾಸದ ದಿನಚರಿಯನ್ನೂ, 'ಸಾರಸ್ವತಪರಿಣಯ' ವೆಂಬ ಕಾವ್ಯವನ್ನೂ ರಚಿಸಿದ್ದಾನೆಂದು ತಿಳಿದು ಬರುತ್ತದೆ. ಅದೇ ವಂಶದಲ್ಲಿ ಸುಮಾರು ಕ್ರಿ.ಶ.೧೮೩೦ರಲ್ಲಿ ಜನಿಸಿದವರು ರಾಘವೇಂದ್ರದಾಸರು. ಇವರ ಮಾತಾಪಿತೃಗಳ ವಿವರ ತಿಳಿಯದು. ರಾಘವೇಂದ್ರಪ್ಪನು ವಿದ್ಯಾಭ್ಯಾಸ,

ಶಾಸ್ತ್ರಾಧ್ಯಯನಾದಿ ಸಂಸ್ಕಾರಗಳನ್ನು ತಮ್ಮ ವಂಶದ ಯೋಗ್ಯತೆಗೆ ತಕ್ಕಂತೆ ಪಡೆದಿದ್ದನೆನ್ನಬಹುದು. ಹರಿದಾಸರುಗಳ ಕೃತಿಗಳಿಂದ ಪ್ರಭಾವಿತನಾಗಿ ದೇವರನಾಮಗಳನ್ನೂ ಸಹ ಸುಶ್ರಾವ್ಯವಾಗಿ ಹಾಡುತ್ತಿದ್ದನೆಂದು ತಿಳಿದುಬರುತ್ತದೆ.

ರಾಘವೇಂದ್ರಪ್ಪನಿಗೆ ಸುಮಾರು ಹದಿನೆಂಟು ವರ್ಷವಾಗಿದ್ದಾಗ ಮಾತಾ ಪಿತೃಗಳು ತೀರಿಹೋದರು. ಸುಮಾರು ಹನ್ನೆರಡು ವರ್ಷ ವಯಸ್ಸಿನ ವೆಂಕಟ-ರಾಯನೆಂಬ ತಮ್ಮನನ್ನು ಸಾಕುವ ಜವಾಬ್ದಾರಿ ಅವನ ಮೇಲೆ ಬಿತ್ತು. ಗೊತ್ತು ಗುರಿಗಳಿಲ್ಲದೆ ಅಲೆಯುತ್ತಿದ್ದ ರಾಘಣ್ಣನಿಗೆ ವಿವಾಹ ಮಾಡಿಸಬೇಕೆಂದು ಅವರ ಅನುಬಂಧಿಗಳು ಅವರಲ್ಲೇ ಇದ್ದ ಒಬ್ಬ ಕನ್ಯೆಯನ್ನು ಗೊತ್ತು ಮಾಡಿದರು. ರಾಘಣ್ಣನು ವೈರಾಗ್ಯಶಾಲಿಯಾಗಿದ್ದು ಹುಟ್ಟು ಕುರುಡಿಯಾದ ಅಕ್ಕಣ್ಣಮ್ಮನೆಂಬ ಕನ್ಯೆಯನ್ನು ಕೇವಲ ಕನ್ಯಾಸೆರೆ ಬಿಡಿಸುವ ಸದುದ್ದೇಶದಿಂದ ವಿವಾಹವಾದನು. ಹೆಂಡತಿಯು ಹುಟ್ಟು ಕುರುಡಿಯಾದರೂ ಆಕೆಯನ್ನು ಯಾವ ಕಾಲಕ್ಕೂ ರಾಘಣ್ಣ ಕಡೆಗಣಿಸಲಿಲ್ಲ. ಆದರೆ ನಿಸ್ಸಂಗಿಯಾಗಿ ಕೊನೆವರೆಗೂ ಬ್ರಹ್ಮಚರ್ಯದಿಂದಲೇ ಇದ್ದ. ಇದಕ್ಕೆ ಪತ್ನಿಯ ಸಹಕಾರವೂ ದೊರೆತಂತೆ ತೋರುತ್ತದೆ.

ರಾಘಣ್ಣನ ಪತ್ನಿ ಅಕ್ಕಣ್ಣಮ್ಮನ ತಂಗಿಯು ಒಂದು ಸತ್ಕುಟುಂಬಕ್ಕೆ ಸೊಸೆಯಾಗಿ ಹೋಗಿದ್ದು, ಕುರುಡಿಯಾದ ಅಕ್ಕಣ್ಣಮ್ಮನಿಗೆ ಒಬ್ಬ ಹೆಣ್ಣು ಮಗಳ ನೆರವಿನ ಅವಶ್ಯಕತೆ ಇದ್ದುದ್ದರಿಂದ, ರಾಘಣ್ಣ ದಂಪತಿಗಳೂ ವೆಂಕಟರಾಯನೂ ಆ ಕುಟುಂಬದ ಆಶ್ರಯ ಪಡೆದರು.

ಪತ್ನಿಗೆ ತಂಗಿಯ ಜೊತೆ ದೊರೆತ ಮೇಲೆ ರಾಘಣ್ಣನಿಗೆ ಸಂಚಾರ ಮಾಡಲು ಇದ್ದ ಅಡ್ಡಿಗಳ ನಿವಾರಣೆಯಾದಂತಾಗಿ ತಮ್ಮನ ಜೊತೆಯಲ್ಲಿ ತೀರ್ಥಕ್ಷೇತ್ರ ಯಾತ್ರೆ ಮಾಡಲು ಪ್ರಾರಂಭಿಸಿದನು. ಆ ಕಾಲದಲ್ಲಿ ಬಹಳಮಟ್ಟಿಗೆ ಕಾಲು ನಡಿಗೆಯಲ್ಲೇ ಸಂಚಾರ ಮಾಡಬೇಕಾಗಿತ್ತು.

ಸಹೋದರರು ತಮ್ಮ ಪ್ರಥಮ ಪ್ರವಾಸದಲ್ಲಿ ಉತ್ತರ ಕರ್ನಾಟಕ, ಆಂಧ್ರ, ಮಧ್ಯಪ್ರದೇಶ, ಉತ್ತರಪ್ರದೇಶ, ಬಂಗಾಳ, ಒರಿಸ್ಸಾ ಇತ್ಯಾದಿಗಳಲ್ಲಿ ಸುಮಾರು

ಎರಡು ವರ್ಷ ಕಾಲ ತೀರ್ಥಯಾತ್ರೆ ಮಾಡಿ ತಮ್ಮೂರಿಗೆ ಹಿಂತಿರುಗಿದರು. ತಮ್ಮ ಎರಡನೇ ಪ್ರವಾಸದಲ್ಲಿ ಉಡುಪಿ ಮತ್ತು ಸುತ್ತಮುತ್ತಲಿನ ಕ್ಷೇತ್ರಗಳನ್ನು ಸಂದರ್ಶಿಸಿ ಎರಡು ತಿಂಗಳ ನಂತರ ಹಿಂತಿರುಗಿದರು.

ಉಡುಪಿ ಯಾತ್ರೆ ಮುಗಿಸಿ ಬಂದ ನಂತರ ಕೆಲವು ತಿಂಗಳ ಕಾಲ ರಾಘಣ್ಣನು ಪತ್ನಿಯೊಡನಿದ್ದು ನಂತರ ವಿಜಯರಾಯರ ಕಟ್ಟೆ ಇರುವ ಚಿಪ್ಪಗಿರಿ ಮತ್ತು ಮಂತ್ರಾಲಯಗಳನ್ನು ಸಂದರ್ಶಿಸಲು ಹೊರಟನು.

ಚಿಪ್ಪಗಿರಿಯಲ್ಲಿ ವಿಜಯದಾಸರ ಆರಾಧನಾ ನಿಮಿತ್ತ ಸಾಂಪ್ರದಾಯಿಕವಾಗಿ ಹರಿದಾಸ ಪೀಳಿಗೆಯಲ್ಲಿ ಬಂದಿದ್ದ ಶ್ರೀವರವಿಠಲದಾಸರೆಂಬುವರಿಂದ ಹರಿಕಥಾ ಕಾಲಕ್ಷೇಪ ನಡೆಯುತ್ತಿತ್ತು. ದಾಸರು ಅಂಕಿತದ ಮಹತ್ವವನ್ನು ವಿವರಿಸಿದ್ದನ್ನು ಕೇಳಿ ರಾಘಣ್ಣನಿಗೂ ಅಂಕಿತ ಪಡೆಯಬೇಕೆಂಬ ಅಪೇಕ್ಷೆ ಉಂಟಾಯಿತು. ದಾಸರ ಲೌಕಿಕ ಹೆಸರು ಸೌದಿ ರಾಮಚಂದ್ರಪ್ಪ ಎಂದಿದ್ದು, ಶ್ರೀನಿಧಿವಿಠಲದಾಸರಿಂದ ಅನುಗ್ರಹಿತರಾಗಿ ಅಂಕಿತೋಪದೇಶ ಪಡೆದಿದ್ದರು. ಅವರೂ ಸಹ ಒಬ್ಬ ಯೋಗ್ಯ ಶಿಷ್ಯನ ಅನ್ವೇಷಣೆಯಲ್ಲಿದ್ದರು. ಹರಿಕಥಾಸ್ವಾದನೆಯಲ್ಲಿ ತಲ್ಲೀನನಾಗಿದ್ದ ರಾಘಣ್ಣನನ್ನು ಕಂಡ ದಾಸರು ತಮಗೆ ಯೋಗ್ಯ ಶಿಷ್ಯ ದೊರೆತನೆಂದು ಭಾವಿಸಿದರು.

ಕಥಾಕಾಲಕ್ಷೇಪವಾದ ನಂತರ ರಾತ್ರಿ ಬಿಡಾರದಲ್ಲಿ ಮಲಗಿದ್ದ ರಾಘಣ್ಣನಿಗೆ ಬೆಳಗಿನ ಜಾವದಲ್ಲಿ ವಿಜಯದಾಸರು ಸ್ವಪ್ನದಲ್ಲಿ ಕಾಣಿಸಿಕೊಂಡು ಅದೃಶ್ಯರಾದರು. ಈ ಶುಭಸೂಚನೆಯಿಂದ ಉತ್ತೇಜಿತನಾದ ರಾಘಣ್ಣನು ಮಾರನೆ ದಿನ ಏಕಾದಶಿ ಪ್ರಾತಃವಿಧಿಗಳನ್ನು ತೀರಿಸಿಕೊಂಡು ದಾಸರಿದ್ದಲ್ಲಿಗೆ ಬಂದು ನಮಸ್ಕರಿಸಿ ಉದ್ಧರಿಸಬೇಕೆಂದು ಪ್ರಾರ್ಥಿಸಿದನು. ಗುರುಶಿಷ್ಯತ್ವಕ್ಕೆ ಬೇಕಾದ ಪರಸ್ಪರ ಪರೀಕ್ಷೆಗಳು ಇಷ್ಟು ಹೊತ್ತಿಗೆ ತಾವಾಗಿಯೇ ನಡೆದು ಹೋಗಿದ್ದು ದಾಸರು ರಾಘವೇಂದ್ರಪ್ಪನಿಗೆ ವಿಧ್ಯುಕ್ತವಾಗಿ ಅಂಕಿತೋಪದೇಶ ಮಾಡಿ ದಾಸಪೀಳಿಗೆಯನ್ನು ಬೆಳೆಸಲು ಆದೇಶವಿತ್ತರು. ಅಂಕಿತನಾಮ ಈರೀತಿ ಇದೆ.

ಮುದ್ದು ಮೋಹನವಿಟ್ಠಲ ಸಲಹೋ ಇವನಾ ಪ

ಸಿರಿ ಮನೋಹರ ನಿನ್ನ ಪ್ರಾರ್ಥಿಸುವೆ ನಿರುತ ಅ.ಪ

ಶಿರಿ ಬೊಮ್ಮ ಮೊದಲಾದ ಸುರರಿಂದ ಸೇವಿತನೆ
ಪರಮ ಕರುಣಾಳು ಹರಿ ಕರಿವರದನೇ
ನಿರುತದಲಿ ನಿನ್ನ ನಾಮ ಸ್ಮರಣೆಯನಿತ್ತು
ಕರುಣದಲಿ ರಕ್ಷಿಸೋ ಪರಮ ಪಾವನನೇ ೧

ಗುರು ಹಿರಿಯರಲಿ ಭಕುತಿ ವಿಷಯದಲಿ ವಿರುಕುತೀ
ಪಿರಿದಾದ ಪಂಚಭೇದವನು ಅರುಪೀ
ಕರಿವರದನೇ ನಿನ್ನ ನಾಮಾಮೃತಸಾರ ಉಣಿಸೀ
ದುರಿತಗಳ ಪರಿಹರಿಸೋ ಪರಮಪಾವನನೇ ೨

ನಾನು ನನ್ನದು ಎಂಬದುರಭಿಮಾನವನು ಬಿಡಿಸೀ
ಸಾನುರಾಗದಲಿ ತಾರತಮ್ಯಗಳ ತಿಳಿಸೋ
ಮಾನನಿಧಿ ನೀನೆ ಸರ್ವೋತ್ತಮಾನೆಂಬಂಥ
ಜ್ಞಾನದಾಯಕನಾಗೋ ಶ್ರೀ ವರವಿಟ್ಠಲಾ ೩

ಅಂದು ರಾತ್ರಿ ದಾಸರು ತಮ್ಮ ನೂತನ ಶಿಷ್ಯ ಮತ್ತು ಅವನ ತಮ್ಮ ವೆಂಕಟರಾಯನೊಂದಿಗೆ ಜಾಗರೋತ್ಸವ ನಡೆಸಿ ಮಾರನೆ ದಿನ ದ್ವಾದಶಿ ವಿಜಯದಾಸರ ಉತ್ತರಾರಾಧನ ಕಾರ್ಯಕ್ರಮಗಳಲ್ಲಿ ಭಾಗವಹಿಸಿ ತಮ್ಮ ಪ್ರಯಾಣವನ್ನು ಮುಂದುವರೆಸಿದರು.

ಈ ರೀತಿ ರಾಘವೇಂದ್ರಪ್ಪನು ಮುದ್ದುಮೋಹನವಿಠಲದಾಸನೆಂದು ದೀಕ್ಷಾವಂತನಾಗಿ ತಮ್ಮನೊಂದಿಗೆ ಪಂಡರಾಪುರದ ಕಡೆಗೆ ಹೊರಟನು. ಮಾರ್ಗದಲ್ಲಿ ಒಂದು ತಂಬೂರಿ ಖರೀದಿ ಮಾಡಿ ಗೆಜ್ಜೆ, ತಾಳ, ಚಿಟಿಕೆ ಗೋಪಾಳ ಬುಟ್ಟಿ ಮೊದಲಾದವುಗಳನ್ನು ಹವಣಿಸಿಕೊಂಡನು. ತಂಬೂರಿಗೆ ಐದು

ತಂತಿಗಳಿದ್ದು ಪ್ರಯಾಣದಲ್ಲಿ ಹೆಗಲಿಗೆ ಸುಲಭವಾಗಿ ತೂಗಿ ಹಾಕಿಕೊಳ್ಳುವಂತೆ ಎರಡು ಕಡೆಗಳಲ್ಲಿ ಕಬ್ಬಿಣದ ಬಳೆಗಳನ್ನು ಅಳವಡಿಸಿ ದ್ವಾದಶನಾಮ ಇತ್ಯಾದಿ ಅನೇಕ ವೈಷ್ಣವ ಚಿಹ್ನೆಗಳಿಂದ ಅದನ್ನು ಅಲಂಕರಿಸಿದ್ದರಂತೆ. ಆ ತಂಬೂರಿಯು ಮುಂದೆ ಅದೇ ಪೀಳಿಗೆಯಲ್ಲೇ ಬಂದ ಶ್ರೀ ಗುರುಗೋವಿಂದವಿಠಲದಾಸರ ವಂಶಸ್ಥರಲ್ಲಿ ಈಗಲೂ ಇದೆ.

ಪಂಡರಾಪುರದ ನಂತರ ಮುದ್ದುಮೋಹನದಾಸರು ಮುಂದೆ ಪ್ರಯಾಗ, ವಾರಣಾಸಿ, ಗಯಾ ಇತ್ಯಾದಿ ಕ್ಷೇತ್ರಗಳನ್ನು ಸಂದರ್ಶಿಸಿ ಅಲ್ಲಲ್ಲಿ ಕ್ಷೇತ್ರವಿಧಿಗಳನ್ನು ಆಚರಿಸಿ ಮಂತ್ರಾಲಯದ ಮೂಲಕ ತಮ್ಮೂರಿಗೆ ಹಿಂತಿರುಗಿದರು.

ದಾಸರು ಸಂಚಾರಾಭಿಲಾಷಿಗಳಾಗಿದ್ದು, ಮೂರು ಮತ್ತು ನಾಲ್ಕನೆ ಬಾರಿ ಕಾಶೀಯಾತ್ರೆಯನ್ನು ಮಾಡಿದರು. ತಮ್ಮ ನಾಲ್ಕನೆಯ ಕಾಶೀಯಾತ್ರೆಯಿಂದ ಹಿಂತಿರುಗುವಾಗ ವಿಶ್ವನಾಥನ ಸನ್ನಿಧಿಯಿಂದ ಒಂದು ಲಿಂಗವನ್ನು ತಂದರು. ಆ ಸಮಯಕ್ಕೆ ದಾಸರಿಗೆ ಸುಮಾರು ನಲವತ್ತೈದು ವರ್ಷ ವಯಸ್ಸಾಗಿತ್ತು. ಪ್ರತಿ ವರ್ಷವೂ ತಿರುಪತಿಗೆ ಹೋಗಿಬರುತ್ತಿದ್ದು ಆಗಾಗ ಚಿಪ್ಪಗಿರಿ, ಮಂತ್ರಾಲಯ, ಉಡುಪಿ ಮೊದಲಾದ ಕ್ಷೇತ್ರಗಳಿಗೂ ಹೋಗಿಬರುತ್ತಿದ್ದರು. ದಾಸರು ಶಿವಮೊಗ್ಗಾ ಮಾರ್ಗವಾಗಿ ಉಡುಪಿಗೆ ಹೋಗುವಾಗ ತಮ್ಮ ಶಿಷ್ಯರಾದ ಪಾವಗಡದ ಗೋಪಾಲರಾವ್ ಎಂಬುವರಲ್ಲಿ ಇಳಿದುಕೊಳ್ಳುತ್ತಿದ್ದರಂತೆ. ಶ್ರೀಗುರುಗೋವಿಂದ-ವಿಠಲದಾಸರು ಕ್ರಿ.ಶ.೧೯೪೨ರಲ್ಲಿ ಸುಮಾರು ೬೫ ವರ್ಷಗಳಾಗಿದ್ದ ಗೋಪಾಲರಾಯರಿಂದ ಸಂಸ್ಕೃತ ಲಿಪಿಯಲ್ಲಿ ಬರೆದಿದ್ದ ದಾಸರ ಕೆಲವು ದೇವರನಾಮಗಳನ್ನು ಸಂಗ್ರಹಿಸಿದ್ದಾರೆ. ಉಡುಪಿಯ ಕೃಷ್ಣನ ಸನ್ನಿಧಿಯಲ್ಲಿ ದಾಸರು ರಚಿಸಿ ಸ್ವಹಸ್ತಾಕ್ಷರದಲ್ಲೇ ಬರೆದಿಟ್ಟಿರುವ ಒಂದು ಉಗಾಭೋಗವನ್ನು ಸಹ ಗೋಪಾಲರಾಯರಿಂದ ಪಡೆದಿದ್ದಾರೆ.

ಮುದ್ದುಮೋಹನದಾಸರು ವಯಸ್ಸಾದ ನಂತರ ಪ್ರವಾಸಗಳನ್ನು ಕಡಿಮೆ ಮಾಡಿ ಸಮೀಪದಲ್ಲಿದ್ದ ದೇವರಾಯನದುರ್ಗಕ್ಕೆ ರಥೋತ್ಸವ ಕಾಲದಲ್ಲಿ ಮಾತ್ರ ಹೋಗಿ ಬರುತ್ತಿದ್ದಂತೆ ಕಾಣುತ್ತದೆ.

ದಾಸರು ಅನೇಕ ಶಿಷ್ಯರುಗಳನ್ನು ಪಡೆಯುವುದಕ್ಕಿಂತ, ಸಮರ್ಥರಾದ ಕೆಲವೇ ಶಿಷ್ಯರನ್ನು ಹೊಂದಿ ಅವರ ಮೂಲಕ ವ್ಯಾಪಕವಾಗಿ ದಾಸಧರ್ಮವನ್ನು ಪ್ರಚಾರ ಮಾಡುವ ಉದ್ದೇಶವುಳ್ಳವರಾಗಿದ್ದರೆಂದು ತೋರುತ್ತದೆ. ದೊರೆತಿರುವ ಮಾಹಿತಿ ಪ್ರಕಾರ ಶಿಷ್ಯರ ಸಂಖ್ಯೆ ಕೇವಲ ೧೧ ಮಾತ್ರವಿದೆ. ಅವರುಗಳಲ್ಲಿ ಅತಿ ಮುಖ್ಯರಾದವರು, ದೇವರಾಯನದುರ್ಗದ "ಪರಮಪ್ರಿಯ" ಸುಬ್ಬರಾಯದಾಸರು. ಇವರು ಅತ್ಯಂತ ಪ್ರಸಿದ್ಧರಾಗಿದ್ದು ವ್ಯಾಪಕವಾಗಿ ದಾಸ ಪಂಥವನ್ನು ಪ್ರಚಾರ ಮಾಡಿದರು. ಅವರಿಗೆ ದಾಸರಿಂದ ಅಂಕಿತವಾದ ಸನ್ನಿವೇಶವನ್ನೂ ಅವರ ಕಾರ್ಯಸಾಧನೆಗಳನ್ನೂ ಇದೇ ಸಂಪುಟದಲ್ಲಿ ಅವರಿಗೆ ಸಂಬಂಧಪಟ್ಟ ಭಾಗದಲ್ಲಿ ಕಾಣಬಹುದು. ಉಳಿದ ಶಿಷ್ಯರುಗಳಲ್ಲಿ ಬಾಲಕೃಷ್ಣದಾಸರು, ಕರಿವರದವಿಠಲದಾಸರು ಮತ್ತು ಕರುಣಾಕರವಿಠಲದಾಸರು ಹರಿಕಥಾ ಪ್ರಸಂಗ ಇತ್ಯಾದಿಗಳನ್ನು ನಡೆಸುವುದರ ಮೂಲಕವೂ, ಪದಗಳನ್ನು ರಚಿಸುವುದರ ಮೂಲಕವೂ ದಾಸ ಧರ್ಮದ ಪ್ರಚಾರ ಮಾಡಿದರು.

ದಾಸರ ಕಾರ್ಯಚಟುವಟಿಕೆಗಳಿಗೆ ಒಂದು ಗೊತ್ತಾದ ಸ್ಥಳದ ಅವಶ್ಯಕತೆಯಿತ್ತು. ಅದಕ್ಕಾಗಿ ಒಂದು ನಿವೇಶನವನ್ನು ಸಂಪಾದಿಸಿ ವಿಠಲನ ಪ್ರತಿಮೆಯೊಂದನ್ನು ಪ್ರತಿಷ್ಠಿಸಬೇಕೆಂದು ಸಂಕಲ್ಪಿಸಿದರು. ಭಕ್ತಾದಿಗಳು ಸ್ವಪ್ರೇರಣೆಯಿಂದ ಕೊಡುವ ಹಣವನ್ನು ಅದಕ್ಕಾಗಿ ಸಂಗ್ರಹಿಸಿಡಲು ಪ್ರಾರಂಭಿಸಿದರು.

ಈ ಸಂದರ್ಭದಲ್ಲಿ ಕೆಲವು ಶಿಷ್ಯರುಗಳ ಅಪೇಕ್ಷೆಯ ಪ್ರಕಾರ ದಾಸರು ಅವರೊಂದಿಗೆ ತಮ್ಮನಾದ ವೆಂಕಟರಾಯನನ್ನು ಕೂಡಿ ಉಡುಪಿ ಯಾತ್ರೆ ಮಾಡಲು ಹೊರಟರು. ಮಾರ್ಗದಲ್ಲಿ ತುಮಕೂರಿನಲ್ಲಿ ದಿವಾನ್ ಪೂರ್ಣಯ್ಯನವರ ವಂಶಸ್ಥರೂ ಜಿಲ್ಲಾಧಿಕಾರಿಗಳೂ ಆಗಿದ್ದ ಸರ್ ಪಿ ಎನ್ ಕೃಷ್ಣಮೂರ್ತಿಗಳನ್ನು ಸಂಪರ್ಕಿಸಿ ವಿಠ್ಠಲ ದೇವಸ್ಥಾನದ ಬಗ್ಗೆ ಪ್ರಸ್ತಾಪಿಸಿ ಉಚಿತ ಸಹಾಯದ ವಾಗ್ದಾನ ಪಡೆದು ಉಡುಪಿಗೆ ಪ್ರವಾಸ ಮುಂದುವರೆಸಿದರು. ದಾಸರು ಉಡುಪಿ ಯಾತ್ರೆ ಮುಗಿಸಿ ದೊಡ್ಡಬಳ್ಳಾಪುರಕ್ಕೆ ಹಿಂತಿರುಗುವಾಗ ಪುನಃ ತುಮಕೂರಿಗೆ ಬಂದು ವಾಗ್ದಾನದ ಪ್ರಕಾರ ಕೃಷ್ಣಮೂರ್ತಿಗಳಿಂದ ವಿಠ್ಠಲ ಮಂದಿರದ ನಿರ್ಮಾಣಕ್ಕೆ ಸಹಾಯ ಪಡೆಯಲು ಪ್ರಯತ್ನಿಸಿದರು. ಏತನ್ಮಧ್ಯೆ ಕೃಷ್ಣಮೂರ್ತಿಗಳು

ತಮ್ಮ ಒಬ್ಬನೇ ಮಗನ ಉಪನಯನವನ್ನು ವಿಜೃಂಭಣೆಯಿಂದ ಆಚರಿಸಲು ಸಿದ್ಧತೆಗಳನ್ನು ಮಾಡುತ್ತಿದ್ದಾಗ ಹಠಾತ್ತಾಗಿ ರೋಗಪೀಡಿತನಾಗಿ ಮಗನು ಮೃತಪಟ್ಟಿದ್ದನು. ಈ ಸನ್ನಿವೇಶದಲ್ಲಿ ಕೃಷ್ಣಮೂರ್ತಿಗಳು ಉದಾಸೀನರಾಗಿದ್ದು ದಾಸರಿಗೆ ಉಚಿತ ಮರ್ಯಾದೆ ಸಿಗದೆ ಖಿನ್ನರಾಗಿ ದೊಡ್ಡಬಳ್ಳಾಪುರದ ಕಡೆಗೆ ಹೊರಟರು. ಮಾರ್ಗದಲ್ಲಿ ತರಬನಹಳ್ಳಿ ಎಂಬಲ್ಲಿನ ವೀರಾಂಜನೇಯ ಸ್ವಾಮಿಯ ಸನ್ನಿಧಿಯಲ್ಲಿ ತಮ್ಮ ಸಂಕಲ್ಪ ಸಿದ್ಧಿಗಾಗಿ ಪ್ರಾಯೋಪವೇಶಕ್ಕೆ ಕುಳಿತರು. ಈ ಸಮಯಕ್ಕೆ ಸರಿಯಾಗಿ ತುಮಕೂರಿನಲ್ಲಿ ಕೃಷ್ಣಮೂರ್ತಿಯವರಿಗೆ ತಾವು ದಾಸರಿಗೆ ಮಾಡಿದ್ದ ವಾಗ್ದಾನದ ನೆನಪುಂಟಾಗಿ ತಮ್ಮಲ್ಲಿಗೆ ದಾಸರು ಬಂದಿದ್ದಾಗ ಉಚಿತ ಮರ್ಯಾದೆ ಮಾಡದಿದ್ದಕ್ಕಾಗಿ ಪಶ್ಚಾತ್ತಾಪ ಪಟ್ಟರು. ದಾಸರು ತರಬನ ಹಳ್ಳಿಯಲ್ಲಿ ಬಿಡಾರ ಮಾಡಿರುವುದನ್ನು ತಿಳಿದು ಕೂಡಲೇ ಪರಿವಾರದವರೊಂದಿಗೆ ಧಾವಿಸಿ ದಾಸರಲ್ಲಿ ಕ್ಷಮೆಯಾಚಿಸಿ ಪ್ರಾಯೋಪವೇಶ ನಿಲ್ಲಿಸಲು ಪ್ರಾರ್ಥನೆ ಮಾಡಿ ದಾಸರಿಗೆ ಪಾರಣೆ ಮಾಡಿಸಿದರು.

ನಂತರ ವಿಠ್ಠಲ ಮಂದಿರ ನಿರ್ಮಾಣಕ್ಕೆ ತಮ್ಮ ಕಾಣಿಕೆ ಹಣ ಸಲ್ಲಿಸಿ ಹಿಂತಿರುಗಿದರು. ದಾಸರು ತರಬನ ಹಳ್ಳಿಯ ಭಕ್ತಾದಿಗಳಿಂದ ಮಂದಿರ ನಿರ್ಮಾಣಕ್ಕಾಗಿ ಕಾಣಿಕೆ ಇತ್ಯಾದಿಗಳನ್ನು ಪಡೆದು ದೊಡ್ಡಬಳ್ಳಾಪುರಕ್ಕೆ ಹಿಂತಿರುಗಿದರು.

ದೇವಸ್ಥಾನದ ನಿವೇಶನದ ಬಗ್ಗೆ ಪರಿಶೀಲನೆಗಳು ನಡೆದು ದಾಸರು ಕೊನೆಗೆ ತಮಗೆ ಕನ್ಯಾ ಸ್ವೀಕಾರ ಕಾಲದಲ್ಲಿ ಮಾವನವರಿಂದ ಬಳುವಳಿಯಾಗಿ ಬಂದಿದ್ದ ಖಾಲಿ ನಿವೇಶನದಲ್ಲೇ ದೇವಸ್ಥಾನ ಕಟ್ಟಿಸಿ ಕ್ರಿ.ಶ. ಸುಮಾರು ೧೮೮೮ರಲ್ಲಿ ಒಂದು ಶುಭದಿನ ಮೊದಲೇ ಸಿದ್ಧಪಡಿಸಿಟ್ಟಿದ್ದ ವಿಠ್ಠಲ ಪ್ರತೀಕವನ್ನು ಪ್ರತಿಷ್ಠಾಪಿಸಿದರು. ಜೊತೆಗೆ ತಾವು ಹಿಂದೆಯೇ ಕಾಶಿಯಿಂದ ತಂದಿದ್ದ ಶಿವಲಿಂಗವನ್ನೂ ವಿಠ್ಠಲನ ಎಡಭಾಗದಲ್ಲಿ ಪ್ರತಿಷ್ಠಿಸಿದರು. ಅಲ್ಲಿಂದ ಮುಂದೆ ದಾಸರ ನಿರ್ಯಾಣದವರೆಗೆ ವಿಠ್ಠಲ ಮಂದಿರವೇ ದಾಸರ ಭಜನೆ ಆರಾಧನಾದಿ ಚಟುವಟಿಕೆಗಳ ಕೇಂದ್ರ ಸ್ಥಾನವಾಯಿತು.

ದಾಸರು ಆಜಾನುಬಾಹುಗಳಾಗಿದ್ದು. ದುಂಡು ಮುಖ, ಕಪ್ಪುಮಿಶ್ರಿತ ಕೆಂಪು ಬಣ್ಣದ ದೇಹವುಳ್ಳವರಾಗಿದ್ದರು. ದಟ್ಟ ಮತ್ತು ನೀಳವಾದ ಗಡ್ಡವಿದ್ದು ಜಟಾಧಾರಿಗಳಾಗಿದ್ದರು. ಮೊಣಕಾಲಿನವರಿಗೆ ಪಂಚೆ, ಕೊರಳಲ್ಲಿ ತುಳಸಿ ಮತ್ತು ಕಮಲಾಕ್ಷಿ ಮಾಲೆಗಳು, ಹಣೆಯಲ್ಲಿ ಎದ್ದು ಕಾಣುವಂತೆ ಅಂಗಾರ ಅಕ್ಷತೆಗಳನ್ನು ಧರಿಸಿ ಕಾವಿ ಶಾಟಿ ಹೊದ್ದಿರುತ್ತಿದ್ದು ಋಷಿಗಳಂತೆ ಕಾಣಿಸುತ್ತಿದ್ದರು.

ದಾಸರು ಗೃಹಸ್ಥಾಶ್ರಮಿಗಳಾಗಿದ್ದು, ಯತಿಗಳಂತೆ ಆಚರಣೆ ಇಟ್ಟುಕೊಂಡಿದ್ದು ಸ್ವಯಂಪಾಕ ನಿಯಮ ಉಳ್ಳವರಾಗಿದ್ದರು. ತಮ್ಮನಾದ ವೆಂಕಟರಾಯನೇ ಅಡುಗೆ ಮಾಡುತ್ತಿದ್ದನು. ಇಲ್ಲವಾದಲ್ಲಿ ತಾವೇ ಮಾಡಿಕೊಳ್ಳುತ್ತಿದ್ದರು. ಒಪ್ಪತ್ತು ಮಾತ್ರ ಊಟ ಮಾಡಿ ರಾತ್ರಿ ಉಪಾಹಾರ ಮಾತ್ರ ಸ್ವೀಕರಿಸುತ್ತಿದ್ದರು. ಶಾಸ್ತ್ರೋಕ್ತವಾಗಿ ಪೂಜಾದಿ ನಿಯಮಗಳನ್ನು ಆಚರಿಸುತ್ತಿದ್ದರು. ಪೂಜಾ ಕಾಲದಲ್ಲಿ ತುತ್ತೂರಿ, ಶಂಖ, ನಗಾರಿ ಇತ್ಯಾದಿ ವಾದ್ಯಗಳನ್ನು ವೊಳಗಿಸುವಂತೆ ಏರ್ಪಡಿಸಿದ್ದರು. ಪ್ರತಿದಿನ ಸಂಜೆ ಭಜನೆ ಮಾಡಿ ರಾತ್ರಿ ಪೂಜಾದಿಗಳನ್ನು ಮಾಡುತ್ತಿದ್ದರು.

ಸಂಚಾರ ಕಾಲದಲ್ಲಿ ಸೊಂಟಮಟ್ಟಕ್ಕೆ ಬರುವ ಕೃಷ್ಣಾಜಿನದ ಕಸೆ ಅಂಗಿ, ಕೃಷ್ಣಾಜಿನದ್ದೇ ಕುಲಾವಿ, ತಲೆಗೆ ಕಾವಿ ಶಾಟಿಯ ಮುಂಡಾಸು ಇತ್ಯಾದಿಗಳನ್ನು ಧರಿಸಿ ಕೊನೆಗಳಲ್ಲಿ ಕಬ್ಬಿಣದ ಬಳೆಗಳನ್ನು ಜೋಡಿಸಿ ಹೆಗಲಿಗೆ ತೂಗಿಹಾಕಿಕೊಳ್ಳುವಂತೆ ಏರ್ಪಡಿಸಿದ್ದ ಐದು ತಂತಿಗಳ ತಂಬೂರಿ, ತಾಳ, ಚಿಟಿಕೆ, ಕಾಲಿನಲ್ಲಿ ಗೆಜ್ಜೆ ಮೊದಲಾದವುಗಳನ್ನು ಧರಿಸಿರುತ್ತಿದ್ದರು. ವಯಸ್ಸಾದ ಮೇಲೆ ಸಂಚಾರದಲ್ಲಿ ಕುದುರೆಯ ಮೇಲೆ ಕುಳಿತು ಹೋಗುತ್ತಿದ್ದರು.

### ಮೊದಲಕಲ್ಲು ಶೇಷದಾಸರೊಂದಿಗೆ ಸಂಪರ್ಕ

ದಾಸರ ಶಿಷ್ಯರಲ್ಲೊಬ್ಬರಾದ ಕರಿವರದವಿಠಲಾಂಕಿತರಾದ ರಾಮದಾಸರೆಂಬು– ವರ ಹೇಳಿಕೆಯ ಪ್ರಕಾರ ದಾಸರಿಗೂ ಉತ್ತರ ಕರ್ನಾಟಕದಲ್ಲಿದ್ದ ಮೊದಲಕಲ್ಲು ಶೇಷದಾಸರಿಗೂ (ಕ್ರಿ.ಶ.೧೮೦೧_೧೮೮೫) ನಿಕಟ ಸಂಪರ್ಕವಿದ್ದು ದಾಸರು ಅನೇಕ

ಬಾರಿ ಮೊದಲಕಲ್ಲಿಗೆ ಹೋಗಿ ಶೇಷದಾಸರನ್ನು ಸಂದರ್ಶಿಸಿ ಸೇವೆ ಸಲ್ಲಿಸಿ ಬಂದಿದ್ದಾರೆ.

ವೃದ್ಧಾಪ್ಯದಲ್ಲಿ ದಾಸರಿಗೆ, ಹುಟ್ಟು ಕುರುಡಿಯಾದರೂ ಪತಿವ್ರತಾಶಿರೋಮಣಿಯಾಗಿದ್ದ ಪತ್ನಿಯೂ, ಆಜನ್ಮ ಬ್ರಹ್ಮಚಾರಿಯಾಗಿ ಅಣ್ಣ ಮತ್ತು ಅತ್ತಿಗೆಯರ ಸೇವೆಗಾಗಿಯೇ ತನ್ನ ಜೀವನವನ್ನು ಮುಡುಪಾಗಿಟ್ಟಿದ್ದ ವೆಂಕಟರಾಯನೂ ಸೇವೆ ಸಲ್ಲಿಸುತ್ತಿದ್ದರು. ಹೀಗಿರುವಾಗ ಒಂದು ಕಾಲಕ್ಕೆ ವೆಂಕಟರಾಯನು ತೀರಿಕೊಂಡನು. ನಂತರ ದಾಸರ ಶಿಷ್ಯವೃತ್ತಿಯಲ್ಲಿದ್ದ ಊದುಕಡ್ಡಿ ಹನುಮಂತರಾಯರೆಂಬುವರು ದಾಸರ ಸೇವೆಯ ಭಾರವನ್ನು ವಹಿಸಿಕೊಂಡರು. ವಿಠ್ಠಲನ ಪೂಜೆಯನ್ನು ಮಾತ್ರ ಯಾರಿಗೂ ವಹಿಸದೆ ದಾಸರೇ ಮಾಡುತ್ತಿದ್ದರು.

ಕ್ರಿ.ಶ.೧೮೯೮ರಲ್ಲಿ ದೊಡ್ಡಬಳ್ಳಾಪುರದಲ್ಲಿ ಪ್ಲೇಗ್ ಉಪದ್ರವ ತಲೆದೋರಿ ಜನರೆಲ್ಲಾ ಊರಿನ ಹೊರಗೆ ಹೋಗಿ ಬಿಡಾರ ಮಾಡಿದರು. ಆದರೆ ದಾಸರು ಮಾತ್ರ ವಿಠ್ಠಲನ ಪೂಜೆಯನ್ನು ನಿಲ್ಲಿಸಲು ಇಷ್ಟಪಡದೆ ಊರಿನಲ್ಲೇ ಉಳಿದರು. ಈ ಸಂದರ್ಭದಲ್ಲಿ ಒಂದು ದಿನ ಊದುಕಡ್ಡಿ ಹನುಮಂತರಾಯರನ್ನು ಕರೆಸಿ ತಮ್ಮ ಅವಸಾನ ಕಾಲ ಸಮೀಪಿಸುತ್ತಿರುವುದಾಗಿ ಸೂಚಿಸಿ ಪುತ್ರಸಂತಾನವಿಲ್ಲದ ತಮಗೆ ಅವರು ಅಂತ್ಯ ಸಂಸ್ಕಾರಗಳನ್ನು ನಡೆಸಲು ಮಾತು ತೆಗೆದುಕೊಂಡರು.

ಕೆಲವೇ ದಿನಗಳಲ್ಲಿ ದಾಸರಿಗೆ ದೇಹಾಲಸ್ಯ ಉಂಟಾಯಿತು. ಹಾಗೆಯೇ ಸ್ನಾನ-ಪೂಜಾದಿಗಳನ್ನು ಮಾಡುತ್ತಿದ್ದರು. ಶಾಲಿವಾಹನ ಶಕ ೧೮೨೦ (ಕ್ರಿ.ಶ.೧೮೯೮) ವಿಳಂಬಿನಾಮ ಸಂವತ್ಸರದ ಕಾರ್ತಿಕ ಬಹುಳ ಚತುರ್ದಶಿ ಬೆಳಿಗ್ಗೆ, ವಿಠಲನ ಅರ್ಚನೆ, ನೈವೇದ್ಯ, ಮಂಗಳಾರತಿಗಳನ್ನು ಮುಗಿಸಿ ಪ್ರತಿಮೆಗಳನ್ನು ವಿಸರ್ಜಿಸುವುದಕ್ಕೆ ಮುಂಚೆ ಅತ್ಯಂತ ಆಯಾಸಗೊಂಡು ಇನ್ನು ಗರ್ಭಗುಡಿಯಲ್ಲಿರುವುದು ಸೂಕ್ತವಲ್ಲವೆಂದು ತೀರ್ಮಾನಿಸಿ ತೆವಳಿಕೊಂಡು ದೇವಸ್ಥಾನದ ಹೊರಾಂಗಣಕ್ಕೆ ಬಂದರು. ಅಲ್ಲಿ ತಮ್ಮಿಂದಲೇ ರಚಿಸಿ ಕಲ್ಲಿನಲ್ಲಿ ಕೆತ್ತಲ್ಪಟ್ಟಿದ್ದ ದ್ವಾದಶದಳಾತ್ಮಕ ಕಮಲದ ಮೇಲೆ ಕುಳಿತುಕೊಂಡು ನಾರಾಯಣ ಸ್ಮರಣೆ ಮಾಡುತ್ತ ಸುಮಾರು ಹನ್ನೊಂದು ಕಾಲು ಘಂಟೆಗೆ ದೇಹತ್ಯಾಗ ಮಾಡಿದರು. ಮಾತು

ಕೊಟ್ಟಿದ್ದಂತೆ ಊದುಕಡ್ಡಿ ಹನುಮಂತರಾಯರು ಇತರ ಶಿಷ್ಯರು ಮತ್ತು ಊರಿನ ಜನಗಳಿಂದ ಕೂಡಿ ಅಂತ್ಯ ಸಂಸ್ಕಾರಗಳನ್ನು ನೆರವೇರಿಸಿದರು. ಸ್ಥಳೀಯ ಜನರ ಅಲಕ್ಷ್ಯದಿಂದಾಗಿ ಆ ಕಮಲ ಕೆತ್ತಿದ್ದ ಕಲ್ಲು ಈಗ ಕಾಣದಾಗಿದೆ.

ದಾಸರ ಪ್ರಶಿಷ್ಯರಾದ ಶ್ರೀಗುರುಗೋವಿಂದವಿಠಲದಾಸರು ಮುದ್ದುಮೋಹನ ದಾಸರ ಜೀವನ ಚರಿತ್ರೆಯನ್ನು ಈ ಮುಂದಿನ ಪದದಲ್ಲಿ ಸರಳವಾಗಿಯೂ, ಸುಂದರವಾಗಿಯೂ, ಸಮಗ್ರವಾಗಿಯೂ ನಿರೂಪಿಸಿದ್ದಾರೆ.

**(ವೆಂಕಟೇಶಭವ_ಎಂಬಂತೆ)**

ಮುದದಿ ಪಾಲಿಸೋ ಮುದ್ದು ಮೋಹನ ರಾಯಾ
ಮದ್ಗುರುವರ ಪ್ರೀಯಾ ಪ

ಮಧ್ವೇಶನ ಪದಪದುಮ ಪೂಜಿಪ ಮಧುಪಾ
ಪರಿಹರಿಸೆಲೊ ತಾಪಾ ಅ.ಪ

ಜನುಮಪೊತ್ತೆ ನೀ ದೊಡ್ಡ ಬಳ್ಳಾಪುರದೀ ।
ಅನುನಯದಲಿ ಓದೀ ।
ಗುಣವಂತೆಯು ಕನ್ಯೆಯತಾ ಸ್ವೀಕರಿಸೀ ।
ಕನ್ಯಾ ಸೆರೆಬಿಡಿಸೀ
ವನಜನಾಭನನು ಕಾಣಲು ಮನಮಾಡೀ
ಶ್ರೀವರನನು ಬೇಡೀ
ಗಾನಲೋಲ ಮುದ್ದು ಮೋಹನ ವಿಟ್ಠಲನಾ
ಘನನಾಮಪೊತ್ತೆ ನಿನ್ನಾ ೧

ಅಂಗಜಗಳುಕದಲರ್ಧಾಂಗಿಯ ನಾಳೀ ।
ಯಾತ್ರೆಗೆ ಮನತಾಳೀ ॥
ಗಂಗೆಯಾತ್ರೆ ಮೂರೊಂದುಬಾರಿ ಮಾಡೀ ।

ಉಡುಪಿಗೆ ಬಲುಬಾರೀ ।
ತುಂಗಮಹಿಮ ನಮ್ಮ ವೆಂಕಟ ನಿಲಯನ್ನಾ ।
ತುಂಗೆ ತೀರಗನನ್ನಾ ।
ಭಂಗವಿಲ್ಲದಾನೇಕಬಾರಿ ನೋಡೀ ।
ಮಂಗಳಾಂಗನ ಪಾಡೀ ೨

ತರಮನ್ವಳ್ಳಿ ಹನುಮಪ್ಪನ ತಾ ವಲಿಸೀ ।
ನಿರಶನವ್ರತಚರಿಸೀ ।
ಸಿರಿವಿಜಯ ವಿಟ್ಠಲನ ನಿಜಪುರದಲ್ಲೀ ।
ಸಂಸ್ಥಾಪಿಸುತಲ್ಲೀ ।
ಪರಮಶಿಷ್ಯರೀ ಗುಪದೇಶಗಳನ್ನಾ ।
ವಿರಚಿಸಿದಿಯೊ ಘನ್ನಾ ।
ಪರಿಸರಮತ ಸರ್ವೋತ್ತಮ ವೆಂದೂ ।
ಸಾರಿದೆ ದಯಾಸಿಂಧೂ ೩



ಬುದ್ಧಿಪೇಳುತಲಿ ತಿದ್ದಿದೆ ಸುಜನರನೂ ।
ನಡೆನುಡಿಗಳಲಿನ್ನೂ ।
ಮದ್ಗುರುಸಿರಿ ತಂದೆ ಮುದ್ದುಮೋಹನರಾ ।
ಉದ್ಧರಿಸಿದ ಧೀರಾ ।
ಮಧ್ವಮತಾಗಮ ಸದ್ವನಧಿವಿಹಾರಾ ।
ಬುಧಜನರಘಹರಾ ।
ವಿದ್ವದಾರ್ಯ ಶ್ರೀ ಮುದ್ದು ಮೋಹನ ರಾಯಾ
ಮುದಬೇಡುವೆ ಜೀಯಾ ೪

ಕೃತನಿತ್ಯಾಹ್ನಿಕನಾಗಿ ತೆವಳಿಬಂದೂ ।
ಚಕ್ರದಿ ಕುಳಿತಂದೂ ।
ವತ್ಸರ ವಿಳಂಬಿವಧ್ಯ ಕಾರ್ತಿಕದೀ ।

ಚತುರ್ದಶಿ ನಡುದಿನದಿ ।
ಅತುಳ ಮಹಿಮಗುರು ಗೋವಿಂದ ವಿಠಲನ್ನ ।
ಹೃದಯಾಬ್ಜದಿಪವನಾ ।
ಆತುಮಾಂತರದಿ ಕಾಣುತಲವನಾ ।
ಕಿತ್ತೊಗೆದೆಯೊ ತನುವಾ ೫

ಮುದ್ದುಮೋಹನದಾಸರು ಅನೇಕರಿಂದ ಪಂಗನಾಮ ತಿಮ್ಮಣ್ಣದಾಸರ (ವೇಣು ಗೋಪಾಲವಿಠಲದಾಸರ) ಪರಂಪರೆಗೆ ಸೇರಿದವರೆಂಬುದಾಗಿ ಪರಿಗಣಿಸಲ್ಪಟ್ಟಿದ್ದಾರೆ. ಆದರೆ ಇವರು ಮೋಹನದಾಸರ ಪರಂಪರೆಯವರೆಂದೂ ಒಂದು ಪಕ್ಷವಿದೆ. ಈ ಬಗ್ಗೆ ಹೆಚ್ಚಿನ ವಿವರಗಳನ್ನು ಇದೇ ಸಂಪುಟದ ಶ್ರೀ ಬಾಗೇಪಲ್ಲಿ ಶೇಷದಾಸರ ಭಾಗದಲ್ಲಿ ಕಾಣಬಹುದು.

ಅಂಕಿತ ಪದಗಳನ್ನು ಬಿಟ್ಟು ಉಪಲಬ್ಧವಿರುವುದು ದಾಸರ ಏಳು ಕೃತಿಗಳು ಮಾತ್ರ ಅವುಗಳಲ್ಲಿ ಕೇವಲ ನಾಲ್ಕು ಮಾತ್ರ ಶ್ರೀಹರಿ ಸಂಕೀರ್ತನೆಗೆ ಸಂಬಂಧಪಟ್ಟಿದ್ದು, ಮಿಕ್ಕ ಮೂರರಲ್ಲಿ ಒಂದೊಂದು ಲಕ್ಷ್ಮೀ, ರುದ್ರ ಮತ್ತು ಶ್ರೀ ಶ್ರೀಪಾದರಾಜರ (ಯತಿ ಕಕ್ಷೆ) ಪರವಾಗಿವೆ. ಶ್ರೀಹರಿ ಪರವಾಗಿ ಎರಡು ಉಗಾಭೋಗಗಳು, ಒಂದು ಕೀರ್ತನೆ ಮತ್ತು ಒಂದು ಸುಳಾದಿಯಿದ್ದು ದಾಸರಿಗೆ ಈ ಎಲ್ಲ ಪ್ರಕಾರದ ಕಾವ್ಯ ರಚನೆಯಲ್ಲೂ ಪರಿಶ್ರಮವಿತ್ತೆಂದು ಊಹಿಸಬಹುದಾಗಿದೆ. ಹಾಗೆಯೇ ಲಕ್ಷ್ಮೀ–ರುದ್ರರನ್ನು ಒಳಗೊಂಡು ಇತರ ದೇವತೆಗಳ ಪರವಾಗಿಯೂ ಶ್ರೀ ಶ್ರೀಪಾದರಾಜರನ್ನೊಳಗೊಂಡು ಇತರ ಯತಿ_ದಾಸರುಗಳ ಪರವಾಗಿಯೂ ಇನ್ನೂ ಅನೇಕ ಸ್ತೋತ್ರ ಪದಗಳನ್ನು ರಚಿಸಿದ್ದು ಅವುಗಳು ಉಪಲಬ್ಧವಿಲ್ಲ. ದಾಸರ ಶೈಲಿಯು ಸರಳವಾಗಿದ್ದು ಕೃತಿಗಳು ಸುಲಭವಾಗಿ ಅರ್ಥವಾಗುವಂತಿವೆ.

ಶ್ರೀ ಮುದ್ದುಮೋಹನದಾಸರು ಮಂತ್ರಾಲಯದ ಶ್ರೀ ರಾಘವೇಂದ್ರ ಸ್ವಾಮಿಗಳ ಅಂಶದವರೆಂದು ಕೆಲವರಲ್ಲಿ ನಂಬಿಕೆಯಿದೆ.

ಇತ್ತೀಚೆಗೆ ದೇವರಾಯನದುರ್ಗದ ದಾಸಕೂಟ ಸಭಾ ಶತಮಾನೋತ್ಸವ ಸಮಿತಿಯವರು ಸಮರ್ಪಿಸಿರುವ ಶ್ರೀದಾಸರ ಸ್ಮಾರಕಶಿಲಾ ಪ್ರತೀಕವನ್ನು ದೊಡ್ಡಬಳ್ಳಾಪುರದ ಶ್ರೀ ವಿಜಯವಿಠ್ಠಲನ ಗುಡಿಯಲ್ಲಿ ಸ್ಥಾಪಿಸಲಾಗಿದೆ.

ಈ ಸಂಪುಟದ ಈ ಭಾಗವನ್ನು ತಯಾರಿಸುವುದರಲ್ಲಿ ಶ್ರೀ ಗುರುಗೋವಿಂದ ವಿಠಲ ದಾಸರು ಬರೆದು ಪ್ರಕಾಶಿಸಿರುವ "ದೊಡ್ಡಬಳ್ಳಾಪುರದ ಶ್ರೀ ಮುದ್ದು ಮೋಹನ ದಾಸರು" (೧೯೬೫) ಎಂಬ ಪುಸ್ತಕದ ನೆರವು ಪಡೆಯಲಾಗಿದೆ. ಅದಕ್ಕಾಗಿ ತಮ್ಮ ಅನುಮತಿಯಿತ್ತು ಸಹಕರಿಸಿದ ಗುರುಕೃಪಾ ಗ್ರಂಥಮಾಲೆಯ ವ್ಯವಸ್ಥಾಪಕರಿಗೆ, ಕೃತಜ್ಞತಾಪೂರ್ವಕ ವಂದನೆಗಳು.

## ತಂದೆಮುದ್ದುಮೋಹನವಿಠಲದಾಸರು

(ಪರಮಪ್ರಿಯ ಸುಬ್ಬರಾಯದಾಸರು)

ಕ್ರಿ.ಶ.೧೯ನೇ ಶತಮಾನದ ಉತ್ತರಾರ್ಧದಲ್ಲಿ ಅಂಧಕಾರವಡರುವಂತಿದ್ದ ಹರಿದಾಸ ಪಂಥದ ಬಾನಿನಲ್ಲಿ ಪ್ರಖರ ಸೂರ್ಯನಂತೆ ಉದಯಿಸಿದವರು ದೇವರಾಯನದುರ್ಗದ "ಪರಮಪ್ರಿಯ" ಸುಬ್ಬರಾಯದಾಸರು.

ತುಮಕೂರಿನ ಬಳಿಯಿರುವ ಕರಿಗಿರಿ ಕ್ಷೇತ್ರವೆಂದು ಪ್ರಸಿದ್ಧವಾದ ದೇವ-ರಾಯನದುರ್ಗದ ಸಮೀಪ ನರಸೀಪುರ ಗ್ರಾಮದಲ್ಲಿ ಸತ್ಕುಲ ಪ್ರಸೂತರೂ, ಮಾಧ್ವ ವೈಷ್ಣವ ಷಾಷ್ಠಿಕ ವಂಶೀಕರೂ, ಭಾರದ್ವಾಜ ಗೋತ್ರೋತ್ಪನ್ನರೂ, ಶ್ರೀ ಅಬ್ಬೂರು ಕುಂದಾಪುರ ಶ್ರೀ ವ್ಯಾಸರಾಜ ಮಠದ ಶಿಷ್ಯರೂ ಆದ ಶೇಷಪ್ಪ ಮತ್ತು ಲಕ್ಷ್ಮೀದೇವಮ್ಮ (ವೆಂಕಟನರಸಮ್ಮನೆಂದೂ ಸಹ ಹೆಸರಿತ್ತು) ಎಂಬ ದಂಪತಿಗಳು ಸತ್ಕರ್ಮನಿರತರಾಗಿ ವಾಸಿಸುತ್ತಿದ್ದರು. ಬಹುಕಾಲ ಪುತ್ರ ಸಂತಾನವಿಲ್ಲದೆ, ದೊಡ್ಡಬಳ್ಳಾಪುರದ ಸಮೀಪದ ಘಾಟಿ ಸುಬ್ರಹ್ಮಣ್ಯನ ಸೇವೆಯ ನಂತರ ಶಾ.ಶ.೧೭೮೭ (ಕ್ರಿ.ಶ.೧೮೬೫) ಕ್ರೋಧನ ಸಂವತ್ಸರದ ಶ್ರಾವಣ ಶುದ್ಧ ಚತುರ್ಥಿ ಭಾನುವಾರ ಶ್ರವಣ ನಕ್ಷತ್ರದಲ್ಲಿ ಪುತ್ರ ಸಂತಾನವಾಯಿತು. ಶಿಶುವಿಗೆ

ಸುಬ್ಬರಾಯನೆಂದು ನಾಮಕರಣವಾಯಿತು. ಇವರ ಭವಿಷ್ಯವು ಉಜ್ವಲವಾಗಿರು–ವುದೆಂಬುದರ ದ್ಯೋತಕವೋ ಎಂಬಂತೆ ಶಿಶುವಿನ ತೊಟ್ಟಿಲಿನ ಮೇಲೆ ಘಟ ಸರ್ಪವೊಂದು ಹೆಡೆಯಾಡಿಸಿ ಹೋಯಿತಂತೆ.

ಸುಬ್ಬರಾಯರು ಬಾಲ್ಯದಿಂದಲೇ ಎತ್ತರ ದೇಹವುಳ್ಳವರೂ, ದೃಢಕಾಯರೂ, ಆಜಾನುಬಾಹುಗಳೂ ಆಗಿ ಬೆಳೆಯುತ್ತಿದ್ದರು. ಮಾತಾಪಿತೃಗಳು, ಶಿವಮೊಗ್ಗದಲ್ಲಿ ಬಿಡಾರ ಮಾಡಿದ್ದ ತಮ್ಮ ಗುರುಗಳಾದ ಶ್ರೀ ಲಕ್ಷ್ಮೀಪ್ರಿಯಶ್ರೀಪಾದಂಗಳವರಲ್ಲಿಗೆ ಹೋಗಿ ಬಾಲಕನಿಗೆ ಅಕ್ಷರಾಭ್ಯಾಸ ಇತ್ಯಾದಿ ಸಂಸ್ಕಾರಗಳನ್ನು ಮಾಡಿಸಿದರು. ಶ್ರೀಗಳವರು ಬಾಲಕನ ಚಟುವಟಿಕೆಯನ್ನು ಮೆಚ್ಚಿ ಕೆಲಕಾಲ ಅವನನ್ನು ತಮ್ಮ ಸಣ್ಣಪುಟ್ಟ ಸೇವಾಕಾರ್ಯಗಳಲ್ಲಿ ತೊಡಗಿಸಿದರು. ಕೆಲವು ಕಾಲದ ನಂತರ ಸಂಚಾರಾರ್ಥ ಶ್ರೀ ಪಾದಂಗಳವರು ಶಿವಮೊಗ್ಗಾದಿಂದ ಶ್ರೀ ಚೆನ್ನಕೇಶವ ಕ್ಷೇತ್ರವಾದ ಬೇಲೂರಿಗೆ ತೆರಳಿ ಅಲ್ಲಿ ವಾಸ್ತವ್ಯ ಮಾಡಿದರು. ಜೊತೆಯಲ್ಲೇ ಇದ್ದ ಶೇಷಪ್ಪ ದಂಪತಿಗಳು ಬಾಲಕನಿಗೆ ಎಂಟನೇ ವರ್ಷವಾಗುತ್ತಿರಲು ಶ್ರೀಗಳವರ ಆದೇಶದಂತೆ ಅವರ ಸನ್ನಿಧಿಯಲ್ಲೇ ಉಪನಯನ ಸಂಸ್ಕಾರವನ್ನು ಮುಗಿಸಿಕೊಂಡು ತಮ್ಮೂರಾದ ನರಸೀಪುರಕ್ಕೆ ಹಿಂತಿರುಗಿದರು.

ಸುಬ್ಬರಾಯರು ಪ್ರಾಥಮಿಕ ವಿದ್ಯಾಭ್ಯಾಸ ಮಾಡುತ್ತಿದ್ದಾಗ ಜೊತೆಯಲ್ಲಿ ವಿವಿಧ ಆಟಗಳಲ್ಲಿ ಸಹ ಪಟುತ್ವ ಪಡೆದಿದ್ದರು. ಒಂದೆರಡು ವರ್ಷಗಳು ಹೀಗೆ ಕಳೆದ ಮೇಲೆ ತಮ್ಮ ಸಂಬಂಧಿಕರಿದ್ದ ಕಾನಕಾನಹಳ್ಳಿಗೆ ಹೋಗಿ ಅಲ್ಲಿ ತಮ್ಮ ವಿದ್ಯಾಭ್ಯಾಸ ಮುಂದುವರೆಸಿದರು.

ಲೌಕಿಕ ವಿದ್ಯೆಯಲ್ಲಿ ಮುಂದುವರಿದು, ಯೌವ್ವನದಲ್ಲಿ ಕಾಲಿಡುವ ವೇಳೆಗೆ ಸುಬ್ಬರಾಯರು ತಮ್ಮೂರಾದ ನರಸೀಪುರಕ್ಕೆ ಹಿಂತಿರುಗಿದರು. ಸುಮಾರು ೧೪ ವರ್ಷ ವಯಸ್ಕರಾಗಿದ್ದ ಅವರಿಗೆ, ತಂದೆ ತಾಯಿಗಳು ಊರಿನಲ್ಲಿದ್ದ ಒಬ್ಬ ಅನುರೂಪಳಾದ ಅಚ್ಚಮ್ಮ ಎಂಬ ಕನ್ಯೆಯನ್ನು ತಂದು ವಿವಾಹ ಮಾಡಿದರು. ಗೃಹಸ್ಥರಾದ ಮೇಲೆ ಸುಬ್ಬರಾಯರು ಒಂದೆರಡು ವರ್ಷಗಳು ನರಸೀಪುರದಲ್ಲೇ

ಇದ್ದು ಆಗಿನ ಕಾಲದ ಕೂಲಿಮಠ ಇತ್ಯಾದಿಗಳಲ್ಲಿ ಚಿಕ್ಕಮಕ್ಕಳಿಗೆ ಪಾಠ ಹೇಳಿ ಕೊಡುತ್ತಿದ್ದರು. ಈ ಸಮಯದಲ್ಲಿ ಅವರ ಮನಸ್ಸು ಆಧ್ಯಾತ್ಮದ ಕಡೆ ಒಲಿಯಿತು. ಇದರ ಪರಿಣಾಮವಾಗಿ ಅವರ ವರ್ತನೆಯೂ ಬದಲಾಯಿಸತೊಡಗಿತು.

ಶ್ರೀ ಜಗನ್ನಾಥದಾಸರು ತಮ್ಮ "ರಂಗ ನಿನ್ನ ಕೊಂಡಾಡುವ ಮಂಗಳಾತ್ಮರ" ಎಂಬ ಪದದಲ್ಲಿ ಸೂಚಿಸಿರುವ "ನಗುವರೋ ರೋದಿಸುವರೋ ನಾಟ್ಯವಾಡುವರೊ" ಎಂಬಿತ್ಯಾದಿ ಭಾಗವತ ಲಕ್ಷಣಗಳು ಸುಬ್ಬರಾಯರಲ್ಲಿ ಕಂಡುಬರಲಾರಂಭಿಸಿದವು. ಅವಧೂತನಂತೆ ಕಾಡು ಬೆಟ್ಟಗಳಲ್ಲಿ ತಿರುಗುವುದು, ದೇಹ ಆಹಾರ ಇತ್ಯಾದಿಗಳ ಬಗ್ಗೆ ಉದಾಸೀನಭಾವ-ಹೀಗೆ ಹುಚ್ಚನಂತೆ ನಡೆದುಕೊಳ್ಳುತ್ತಿದ್ದರು.

ಕಾಲಕ್ರಮದಲ್ಲಿ ಸುಬ್ಬರಾಯರಿಗೆ ಶಾಸ್ತ್ರಜ್ಞಾನ ಸಂಪಾದಿಸಬೇಕೆಂಬ ಹಂಬಲ ಉಂಟಾಗಿ ತಮ್ಮ ೧೭ನೇ ವಯಸ್ಸಿನಲ್ಲಿ ಬೆಂಗಳೂರಿಗೆ ಬಂದು ಚಾಮರಾಜಪೇಟೆಯಲ್ಲಿದ್ದ ಶಾಸ್ತ್ರಸಂಪನ್ನರೆಂದು ಹೆಸರಾಂತ ಶ್ರೀ ಚಿಂಚೋಳಿ ವೆಂಕಣ್ಣಾಚಾರ್ಯರೆಂಬುವರಲ್ಲಿ ಶಾಸ್ತ್ರಾಭ್ಯಾಸ ಆರಂಭಿಸಿ ಯಾಯವಾರದಿಂದ ಜೀವಿಸುತ್ತಿದ್ದರು. ಶಾಸ್ತ್ರಾಭ್ಯಾಸ ಮುಗಿದ ನಂತರ ಕೆಲವು ಕಾಲ ಬೆಂಗಳೂರು, ಮೈಸೂರು, ನಂಜನಗೂಡು ಇತ್ಯಾದಿಗಳಲ್ಲಿ ಸಂಚಾರ ಮಾಡಿ ನರಸೀಪುರಕ್ಕೆ ಹಿಂತಿರುಗಿದರು.

ಸ್ವಗ್ರಾಮಕ್ಕೆ ಹಿಂತಿರುಗಿದ ನಂತರ ಅವರ ಅವಧೂತ ಚರ್ಯೆ ಪ್ರಬಲ-ವಾಗತೊಡಗಿತು. ಶ್ರೀ ವಿಜಯದಾಸಾದಿ ಅಪರೋಕ್ಷ ಜ್ಞಾನಿಗಳ ಚರಿತ್ರೆಯಿಂದ ಪ್ರಭಾವಿತರಾಗಿ ಆತ್ಮೋನ್ನತಿ ಪಡೆಯಲು ಆಶಿಸಿದರು. ಗುಡ್ಡಗಾಡುಗಳಲ್ಲಿ ಹುಚ್ಚನಂತೆ ಅಲೆಯುವುದು, ನಿದ್ರಾಹಾರಗಳಿಲ್ಲದೆ ದಿನಗಟ್ಟಲೆ ಧ್ಯಾನಾಸಕ್ತನಾಗಿರುವುದು, ಎಲ್ಲಿ ಏನು ಸೊಪ್ಪು, ಗೆಡ್ಡೆ ಗೆಣಸು ಹಣ್ಣು ಸಿಕ್ಕರೆ ಅದನ್ನೇ ತಿಂದುಕೊಂಡಿರುವುದು, ಕೌಪೀನ ಧರಿಸಿ ತಲೆಯನ್ನು ಜಟೆಯಾಗಿಸಿ, ಭಸ್ಮಧಾರಿಗಳಾಗಿ, ಬೀದಿ ಬೀದಿ ಅಲೆಯುವುದು ಇತ್ಯಾದಿಗಳು ಪ್ರಾರಂಭವಾದವು. ಹೀಗಿರಲು ಯುವಕನ ನಡವಳಿಕೆಯನ್ನು ಬದಲಿಸುವ ಉದ್ದೇಶದಿಂದ

ತಂದೆತಾಯಿಗಳು ನಿಷೇಕ ಮುಹೂರ್ತ ನಡೆಸಿ ದಂಪತಿಗಳನ್ನು ಸೇರಿಸಿದರು. ಆದರೂ ಸುಬ್ಬರಾಯರು ಅತಿಮಿತ ಆಸಕ್ತರಾಗಿದ್ದು ಗೃಹಸ್ಥಾಶ್ರಮವನ್ನು ಪಾಲಿಸುತ್ತಿದ್ದರು.

ಈ ಸಮಯದಲ್ಲಿ ಸುಬ್ಬರಾಯರಿಗೆ ದಾಸದೀಕ್ಷೆ ಪಡೆಯಬೇಕೆಂದೂ ತದಂಗವಾಗಿ ಒಂದು ತಂಬೂರಿ ಸಂಪಾದಿಸಬೇಕೆಂದೂ ಆಸೆ ಆಯಿತು. ತಂದೆಯವರಿಂದ ಆ ಅಭಿಪ್ರಾಯಕ್ಕೆ ಪುರಸ್ಕಾರ ಧನ ಸಹಾಯಗಳು ದೊರೆಯದೆ ಪ್ರಾಸಂಗಿಕವಾಗಿ ಒಬ್ಬ ಪರಿಚಿತ ಮಹಿಳೆಯಿಂದ ದೊರೆತ ಆಭರಣ ಒಂದನ್ನು ಒತ್ತೆಯಿಟ್ಟು ಒಂದು ತಂಬೂರಿಯನ್ನು ಕೊಂಡುಕೊಂಡರು.

ಕರಿಗಿರಿ ಕ್ಷೇತ್ರವೆಂದು ಪ್ರಸಿದ್ಧವಾದ ದೇವರಾಯನದುರ್ಗದಲ್ಲಿ ಶ್ರೀ ನರಸಿಂಹ ದೇವರ ರಥೋತ್ಸವ ನಡೆಯುವ ಶ್ರೀ ಫಾಲ್ಗುಣ ಮಾಸ. ಸುಬ್ಬರಾಯರು ಸಹ ಉತ್ಸವದಲ್ಲಿ ಭಾಗವಹಿಸಲು ತಂಬೂರಿ ಸಹಿತ ಯಾತ್ರಿಕರಾಗಿ ಹೊರಟರು. ರಥೋತ್ಸವ ಕಾಲದಲ್ಲಿ ಒಬ್ಬ ಬ್ರಾಹ್ಮಣನ ಸಮಾಗಮವಾಗಿ, ಇದುವರೆಗೆ ಅಂಕಿತ ಪ್ರಾಪ್ತಿ ಇಲ್ಲದ ಸುಬ್ಬರಾಯರಿಗೆ ದೊಡ್ಡಬಳ್ಳಾಪುರದ ದಾಸರೆಂದು ಪ್ರಸಿದ್ಧರಾಗಿ ಕ್ಷೇತ್ರ ಪರ್ಯಟನೆಯಲ್ಲಿರುವ ಮಹಿಮಾವಂತರೇ ಗುರುಗಳೆಂತಲೂ, ಅವರು ದೊರೆತಲ್ಲಿ ಅವರಿಂದ ಅಂಕಿತೋಪದೇಶ ಪಡೆಯಬೇಕೆಂತಲೂ ಸೂಚಿಸಿ ನಂತರ ಅವನು ಕಾಣದಾದನು. ರಥೋತ್ಸವವು ಮುಗಿದು ಅಲ್ಲಿಂದ ಮುಂದೆ ಗುರುಗಳ ಅನ್ವೇಷಣೆ ಪ್ರಾರಂಭವಾಯಿತು.

ಇದೇ ಸಮಯದಲ್ಲಿ ಸುಬ್ಬರಾಯರ ಪತ್ನಿಯ ಸೀಮಂತ ಸಂಸ್ಕಾರದ ಕಾರ್ಯಕ್ರಮಗಳು ಜರುಗುತ್ತಿದ್ದು ದೊಡ್ಡಬಳ್ಳಾಪುರದ ರಾಘವೇಂದ್ರದಾಸರು ನರಸೀಪುರಕ್ಕೆ ಸಂಚಾರ ಕ್ರಮದಲ್ಲಿ ಆಗಮಿಸಿದರು. ಅವರು ಇಬ್ಬರು ಶಿಷ್ಯರ ಸಮೇತ ಕುದುರೆಯ ಮೇಲೆ ಬಂದಿದ್ದು ಕೃಷ್ಣಾಜಿನದ ಕಸೆ ಅಂಗಿ, ಕೃಷ್ಣಾಜಿನದ್ದೇ ಕುಲಾವಿ, ಹೆಗಲ ಮೇಲೆ ತಗಲು ಹಾಕಿಕೊಳ್ಳಲು ಅನುಕೂಲವಾಗುವಂತೆ ಕೊನೆಗಳಲ್ಲಿ ಕಬ್ಬಿಣದ ಬಳೆಗಳನ್ನು ಜೋಡಿಸಿದ್ದ ಐದು ತಂತಿಗಳ ತಂಬೂರಿ ಇವುಗಳನ್ನು ಧರಿಸಿದ್ದರು. ಸುಬ್ಬರಾಯರು ತಮಗೆ ಗುರುಗಳು ದೊರಕಿದರೆಂದು

ಆನಂದಪುಳಕಿತರಾಗಿ ಅಂಕಿತೋಪದೇಶವನ್ನೂ, ದಾಸ ದೀಕ್ಷೆಯನ್ನೂ ದಯಪಾಲಿಸಬೇಕೆಂದು ಪ್ರಾರ್ಥಿಸಿದರು. ಗುರುಗಳ ಸೇವೆ ಮಾಡಿದ ನಂತರವೇ ಉಚಿತ ಕಾಲದಲ್ಲಿ ಅದು ದೊರೆಯುವುದೆಂದು ದಾಸರು ಸುಬ್ಬರಾಯರನ್ನು ಸಮಾಧಾನಗೊಳಿಸಿ ಅವರಲ್ಲಿ ಆ ದಿನ ಆದರಾತಿಥ್ಯಗಳನ್ನು ಪಡೆದು ಮಾರನೆಯ ಬೆಳಿಗ್ಗೆ ಸಂಚಾರ ಮುಂದುವರಿಸಲು ಸಿದ್ಧರಾದರು. ದಾಸರು ಕುದುರೆಯನ್ನೇರಿ ಶಿಷ್ಯರೊಂದಿಗೆ ಹೊರಟಾಗ ಸುಬ್ಬರಾಯರು ದಾರಿ ತೋರಿಸಲು ಜೊತೆಯಲ್ಲಿ ಹೊರಟರು. ಹೆದ್ದಾರಿ ತಲುಪಿದ ಕೂಡಲೇ ದಾಸರು ಸುಬ್ಬರಾಯರಿಗೆ ಇನ್ನು ಹಿಂತಿರುಗಬಹುದೆಂದು ಸೂಚಿಸಿದರು. ಸುಬ್ಬರಾಯರು ಅತೀವ ವೇದನೆಯಿಂದ ದೀಕ್ಷಾರ್ಥವಾಗಿ ದಾಸರನ್ನು ಅಂಗಲಾಚಿ ಬೇಡಿಕೊಂಡರು. ದಾಸರು ಸಮಾಧಾನ ಮಾಡಲು ಕುದುರೆಯಿಂದಿಳಿದ ಕೂಡಲೇ ಸುಬ್ಬರಾಯರು ದಾಸರ ಕಾಲನ್ನು ಗಟ್ಟಿಯಾಗಿ ಹಿಡಿದು ಕಂಬನಿಗರೆದು ಶಿಷ್ಯತ್ವ ಬೇಡಿದರು. ಹಿಂದಿನ ರಾತ್ರಿ ಮಾರ್ಗಾಯಾಸ ಪರಿಹಾರಾರ್ಥ ತಮ್ಮ ಪಾದಸೇವೆ ಮಾಡಿ ಈಗಾಗಲೇ ಅರ್ಹತೆಯನ್ನು ಸಂಪಾದಿಸಿದ್ದ ಸುಬ್ಬರಾಯರನ್ನು ಇನ್ನು ಹೆಚ್ಚು ಪರೀಕ್ಷೆಗೆ ಒಳಪಡಿಸಲಿಚ್ಛಿಸದೆ, ಮಾರನೆ ದಿನ ತುಮಕೂರಿನ ವ್ಯಾಸರಾಯ ಮಠಕ್ಕೆ ಬರಬೇಕಾಗಿ ಆದೇಶಿಸಿ ಪ್ರಯಾಣ ಮುಂದುವರೆಸಿದರು.

ಆದೇಶದಂತೆ ಬಂದ ಸುಬ್ಬರಾಯರಿಗೆ ಶ್ರೀ ಮುದ್ದುಮೋಹನದಾಸರು ಶುಭ ಮುಹೂರ್ತದಲ್ಲಿ ವಿಧ್ಯುಕ್ತವಾಗಿ ತತ್ವೋಪದೇಶ ಮಾಡಿ "ತಂದೆ ಮುದ್ದುಮೋಹನವಿಠಲ" ಎಂಬ ಅಂಕಿತ ಪ್ರದಾನ ಮಾಡಿದರು. ಅಂಕಿತನಾಮ ಈ ರೀತಿ ಇದೆ.

ತಂದೆ ಮುದ್ದು ಮೋಹನ ವಿಠಲ ಸಲಹಬೇಕಿವನ ಪ

ಕಂದುಗೊರಳನ ಪ್ರಿಯನೆ ಅಭಿವಂದಿಪೆನೊ ಸತತ ಅ.ಪ

ಶೋಕನಾಶನ ವಿಗತ ಶೋಕನಯ್ಯ ನೀ ವೇಗ
ವಾಕ್ಕು ಮೊದಲಾದ ಸರ್ವೇಂದ್ರಿಯಗಳಲಿ ನಿಂತು

ಲೋಕದೊಳಗೆ ಇವಗೆ ಬೇಕಾದ ವರಗಳನಿತ್ತು
ಲೌಕಿಕ ಮಾರ್ಗವನೆ ಬಿಡಿಸೊ ನಾಕಜನ ಪಿತನೆ ೧

ಜ್ಞಾನ ಭಕ್ತಿ ವೈರಾಗ್ಯಗಳನೆಲ್ಲವೂ ಇತ್ತು
ಜ್ಞಾನಿಗಳ ಸಹವಾಸದೊಳಗೆ ರತಿಯನೆ ಕೊಟ್ಟು
ಹಾನಿ ವೃದ್ಧಿಗಳು ಏನೇನು ಬಂದರೂ
ಆನಂದವನೆ ಕೊಟ್ಟು ರಕ್ಷಿಸೊ ನರಹರೇ ೨

ಕಾಮ ಕ್ರೋಧ ಮದ ಮತ್ಸರಗಳ ಕಡಿದು
ನಾಮೋಚ್ಚಾರಣೆ ಎಂಬ ವಜ್ರಕವಚವನೆ ತೊಡಿಸಿ
ತಾಮರಸವಂದ್ಯ ಶಿರಿ ಮುದ್ದುಮೋಹನವಿಠಲ
ಕಾಮಿತಾರ್ಥವ ಕೊಡೊ ಹೃತ್ಪದ್ಮದೊಳಗೆ ಪೊಳೆದು ೩

ಈ ರೀತಿ ಅಂಕಿತೋಪದೇಶ ಪಡೆದು ನರಸೀಪುರದ ಸುಬ್ಬರಾಯರು ತಂದೆಮುದ್ದುಮೋಹನವಿಠಲದಾಸರಾಗಿ ಶಿಷ್ಯ ಸಂಪತ್ತನ್ನು ಬೆಳೆಸಲು ತಮ್ಮ ಗುರುಗಳಿಂದ ಆದೇಶ ಪಡೆದರು.

ಇನ್ನು ಮುಂದೆ ಉಪದೇಶ ಸಿದ್ಧಿಗಾಗಿ ದಾಸರ ತಪಶ್ಚರ್ಯೆ ಪ್ರಾರಂಭವಾಯಿತು. ದೇವರಾಯನ ದುರ್ಗದ ಸುತ್ತಮುತ್ತಲಿನ ಬೆಟ್ಟ ಗುಡ್ಡ ಗುಹೆಗಳಲ್ಲಿ ಧ್ಯಾನಾಸಕ್ತರಾಗಿರಲು ಪ್ರಾರಂಭಿಸಿದರು. ಶ್ರೀ ಲಕ್ಷ್ಮೀನರಸಿಂಹ ದೇವರಿಗೆ ಅಭಿಮುಖವಾಗಿರುವ ರಾಮದೇವರ ಬೆಟ್ಟದಲ್ಲಿರುವ ರಾಮಗುಹೆಯಲ್ಲಿ ದಾಸರಿಗೆ ತಪಸಿದ್ಧಿಯಾದಂತೆ ತೋರುತ್ತದೆ.

ದಾಸರ ಅವಧೂತ ಚರ್ಯೆ ದೀಕ್ಷಾ ನಂತರ ಇನ್ನೂ ಉತ್ಕಟವಾಯಿತು. ವೈರಾಗ್ಯದ ಲಕ್ಷಣಗಳು ಎದ್ದು ಕಾಣಲು ಪ್ರಾರಂಭಿಸಿದವು. ದಾಸರಿಗೆ ಸುಮಾರು ೩೪–೩೫ ವಯಸ್ಸಿದ್ದಾಗ ತಂದೆಯವರು ತೀರಿಕೊಂಡರು. ಸ್ವಲ್ಪಕಾಲದ ನಂತರ ತಾಯಿಯವರೂ ತೀರಿಕೊಂಡರು. ಈ ಸಮಯಕ್ಕೆ ದಾಸರಿಗೆ ಇಬ್ಬರು ಹೆಣ್ಣು ಮಕ್ಕಳು ಮತ್ತು ಇಬ್ಬರು ಗಂಡುಮಕ್ಕಳಾಗಿದ್ದರು.

ತಂದೆಯವರು ಕಾಲವಾದ ನಂತರ ದಾಸರು ಪಿತ್ರಾರ್ಜಿತ ಆಸ್ತಿಯ ಆಧಾರದ ಮೇಲೆ ಉದರಂಭರಣಕ್ಕಾಗಿ ಕೆಲವು ಕಾಲ ನರಸೀಪುರದಲ್ಲೇ ಲೇವಾದೇವಿ, ಚಿಕ್ಕಪುಟ್ಟ ವ್ಯಾಪಾರ ಇತ್ಯಾದಿಗಳಲ್ಲಿ ತೊಡಗಿದರು. ಈ ಸಂಬಂಧದಲ್ಲಿ ಬೆಂಗಳೂರು ಪಟ್ಟಣಕ್ಕೆ ಹೋಗಿ ಬಂದು ಮಾಡುತ್ತಿದ್ದರು. ಸ್ವಲ್ಪ ಕಾಲದ ನಂತರ ಬೆಂಗಳೂರು ಮಂಡೀಪೇಟೆಯಲ್ಲೇ ಒಂದು ದಿನಸಿ ಅಂಗಡಿ ತೆರೆದರು. "ವ್ಯಾಪಾರಿ ಬುದ್ಧಿ" ಇಲ್ಲದ ಇವರ ವಿಚಿತ್ರ ವಹಿವಾಟುಗಳ ಕಾರಣದಿಂದ ಕೆಲವು ಕಾಲದ ನಂತರ ದಿನಸಿ ವ್ಯಾಪಾರ ನಿಲ್ಲಿಸಬೇಕಾಯಿತು. ನಂತರ ಜವಳಿ, ಹೊಗೆಸೊಪ್ಪು ಅಡಿಕೆ ಇತ್ಯಾದಿ ವ್ಯಾಪಾರಗಳಲ್ಲಿ ತೊಡಗಿ ಎಲ್ಲದರಲ್ಲೂ ನಷ್ಟ ಅನುಭವಿಸಿದರು. ಏತನ್ಮಧ್ಯೆ ಇಬ್ಬರು ಹೆಣ್ಣು ಮಕ್ಕಳ ಲಗ್ನಗಳನ್ನು ಮಾಡಿದರು.

ದಾಸರು ಬೆಂಗಳೂರಿಗೆ ಬಂದು ನೆಲೆಸಿದ ನಂತರವೂ ಪ್ರತಿ ವರ್ಷವೂ ತಪ್ಪದೆ ದೇವರಾಯನದುರ್ಗದ ಶ್ರೀಲಕ್ಷ್ಮೀನರಸಿಂಹನ ರಥೋತ್ಸವಕ್ಕೆ ಹೋಗಿಬರುತ್ತಿದ್ದರು.

ರಥೋತ್ಸವ ಕಾಲದಲ್ಲಿ ದಾಸ ದೀಕ್ಷಾ ವೇಷ-ಭೂಷಣಗಳಿಂದ ಅಲಂಕೃತರಾಗಿ ತಂಬೂರಿ, ತಾಳ, ಚಿಟಿಕೆಗಳನ್ನು ಹಿಡಿದು ಭಾವಪರವಶರಾಗಿ ನರ್ತನ ಸೇವೆ ಸಲ್ಲಿಸುವ ದಾಸರು ಒಬ್ಬ ವಿಭೂತಿಪುರುಷರಾಗಿ ಕಾಣುತ್ತಿದ್ದು ಅವರಿಗೆ ಅನೇಕರು ಅಭಿಮಾನಿಗಳಾದರು. ದಾಸ ಪಂಥವನ್ನು ಪುನರುಜ್ಜೀವನಗೊಳಿಸಿ ಪ್ರಬಲಗೊಳಿಸಬೇಕೆಂದಿದ್ದ ದಾಸರು ಅಭಿಮಾನಿಗಳ ಇಷ್ಟ ಪ್ರಕಾರ, ಭಕ್ತರೊಬ್ಬರು ದೇವರಾಯನದುರ್ಗದ ಕರಿಗಿರಿ ಕ್ಷೇತ್ರದ ಶ್ರೀ ಭೋಗಾನರಸಿಂಹನ ದೇವಸ್ಥಾನಕ್ಕೆ ಸಮೀಪದಲ್ಲಿ ದಾನವಾಗಿ ಕೊಟ್ಟ ನಿವೇಶನವನ್ನು ಪಡೆದು ಕ್ರಿ.ಶ.೧೯೦೦ ವಿಕಾರಿ ಸಂವತ್ಸರದಲ್ಲಿ "ಶ್ರೀಮತ್ಸಮೀರ ಸಮಯಾನುಪ್ರವೃತ್ತಿ ಸಭಾ" ಅಥವಾ "ದ್ವೈತಮತ ಸಿದ್ಧಾಂತೋನ್ನಾಹಿನಿ ಸಭಾ" ಎಂಬ ಸಂಸ್ಥೆಯನ್ನು ಸ್ಥಾಪಿಸಿದರು. ಕಾಲಕ್ರಮದಲ್ಲಿ ಇದು "ದೇವರಾಯನ ದುರ್ಗದ ದಾಸಕೂಟ ಸಭಾ" ಎಂದು ಪ್ರಸಿದ್ಧವಾಯಿತು.

ಇನ್ನು ಮುಂದೆ ದಾಸರಾಯರ ದಾಸಪಂಥದ ಕಾರ್ಯ ಚಟುವಟಿಕೆಗಳಿಗೆ ಕರಿಗಿರಿ ಕ್ಷೇತ್ರವೇ ಕೇಂದ್ರವಾಯಿತು. ಕರಿಗಿರಿ ಕ್ಷೇತ್ರವು ಪುರಾಣ ಪ್ರಸಿದ್ಧವಾಗಿದ್ದು ಶ್ರೀ ಗುರುಪುರಂದರದಾಸರು ಸಹ ಈ ಕ್ಷೇತ್ರದ ಮಹಿಮೆಯನ್ನು ತಮ್ಮ ಒಂದು ಪದದಲ್ಲಿ ಕೊಂಡಾಡಿದ್ದಾರೆ.

ರಥೋತ್ಸವ ಕಾಲದಲ್ಲಿ ಬರುವ ಭಕ್ತಾದಿಗಳಿಗೆ ಅನ್ನೋದಕಗಳ ದಾನ ಮಾಡಲು ಇತರ ಅನೇಕ ಮಹನೀಯರುಗಳಂತೆ ದಾಸರೂ ಸಹ ತಮ್ಮದೇ ಆದ "ದಾಸರ ಕೊಪ್ಪಲ"ನ್ನು ಸ್ಥಾಪಿಸಿದರು.

ರಥೋತ್ಸವಕ್ಕೆ ಸುಮಾರು ಒಂದು ತಿಂಗಳು ಮುಂಚಿತವಾಗಿ, ಒಂದು ದಿನ ಬಾಗೇಪಲ್ಲಿಯ ಹೆಸರಾಂತ ಹರಿಕಥಾ ಕೀರ್ತನಕಾರರಾದ ಶೇಷದಾಸರು ಸಂಚಾರ ಮಾರ್ಗವಾಗಿ ದೇವರಾಯನದುರ್ಗಕ್ಕೆ ಬಂದರು. ಅವರ ಅಸಾಧಾರಣ ವ್ಯಕ್ತಿತ್ವವನ್ನು ಅರಿತಿದ್ದ ಸುಬ್ಬರಾಯದಾಸರು ಇವರೇ ತಮ್ಮ ಪ್ರಪ್ರಥಮ ಶಿಷ್ಯರಾಗಲು ಅತ್ಯಂತ ಯೋಗ್ಯರೆಂದು ನಿರ್ಣಯಿಸಿ ಶೇಷದಾಸರಿಗೆ ಅಂಕಿತೋಪದೇಶವಾಗಿಲ್ಲವೆಂಬುದನ್ನು ವಿಚಾರಿಸಿ ಉಪದೇಶ ಪಡೆಯಬೇಕಾಗಿ ಸೂಚಿಸಿದರು. ಶೇಷದಾಸರು ಹಾಗೆ ಅಂಕಿತೋಪದೇಶ ಕೊಡುವ ಯೋಗ್ಯ ಗುರುಗಳನ್ನು ತೋರಿಸಿದಲ್ಲಿ ತಾವು ಸಿದ್ಧರಿರುವುದಾಗಿ ತಿಳಿಸಿ ಸುಬ್ಬರಾಯದಾಸರ ಮಹತ್ವವನ್ನರಿತು ಅವರಿಂದಲೇ ಉಪದೇಶ ಯಾಚಿಸಿದರು.

ಮಾರನೆಯ ದಿನ ಎಂದರೆ ಪ್ಲವನಾಮ ಸಂವತ್ಸರದ ಮಾಘ ಶುದ್ಧ ದಶಮಿ ಸೋಮವಾರ ಶುಭ ಮುಹೂರ್ತದಲ್ಲಿ ರಾಮಗುಹೆಯಲ್ಲಿ ಶೇಷದಾಸರಿಗೆ ಶ್ರೀ ತಂದೆ ಮುದ್ದುಮೋಹನದಾಸರಿಂದ "ಪ್ರಾಣನಾಥ ವಿಠಲ" ಎಂಬ ಅಂಕಿತವು ವಿಧ್ಯುಕ್ತವಾಗಿ ಕೊಡಲ್ಪಟ್ಟಿತು. ಅಂಕಿತನಾಮವನ್ನು ಇದೇ ಸಂಪುಟದ ಶ್ರೀ ಬಾಗೇಪಲ್ಲಿ ಶೇಷದಾಸರ ಪದಗಳು ಎಂಬ ಭಾಗದಲ್ಲಿ ಕಾಣಬಹುದು. ಶ್ರೀ ಶೇಷದಾಸರು ಇದಕ್ಕೆ ಮುಂಚಿತವಾಗಿಯೇ 'ಶೇಷವಿಠಲ' ಎಂಬ ಮುದ್ರಿಕೆಯಿಂದ ಅನೇಕ ಪದಗಳನ್ನು ರಚಿಸಿದ್ದರು.

ಶ್ರೀ ಶೇಷದಾಸರ ಅಂಕಿತ ಸ್ವೀಕಾರದಿಂದ ಪ್ರಭಾವಿತರಾಗಿ ಅವರ ಭಾವಮೈದುನರಾದ ವೆಂಕಟರಮಣದಾಸರೂ ಸಹ ಸುಬ್ಬರಾಯ ದಾಸರಲ್ಲಿ ಪ್ರಾರ್ಥನೆ ಮಾಡಿ "ಸರ್ವೇಶವಿಠಲ" ಎಂಬ ಅಂಕಿತ ಪಡೆದರು. ಮುಂದಿನ ತಿಂಗಳಿನಲ್ಲೇ ಜರುಗಿದ ರಥೋತ್ಸವದಲ್ಲಿ ಸುಬ್ಬರಾಯ ದಾಸರು "ದಾಸಕೂಟ ಸಭೆ"ಯನ್ನು ನೂತನ ಶಿಷ್ಯರಿಂದಲೂ, ಭಕ್ತವೃಂದದಿಂದಲೂ ಕೂಡಿ ನೆರವೇರಿಸಿದರು.

ದಾಸರು ದಾಸಧರ್ಮದ ಪ್ರಸಾರ ಮತ್ತು ಶಿಷ್ಯ ಸಂಗ್ರಹಣೆಗಾಗಿ ಅನೇಕ ಪ್ರವಾಸಗಳನ್ನು ಕೈಗೊಂಡರು. ಮೊದಲ ಪ್ರವಾಸವನ್ನು ನರಸೀಪುರಕ್ಕೆ ಸಮೀಪದಲ್ಲಿದ್ದು ತಮ್ಮ ಅನೇಕ ಶಿಷ್ಯರು ಮತ್ತು ತಮ್ಮ ಅಭಿಮಾನಿಗಳಿದ್ದ ಕೊಡಿಗೇಹಳ್ಳಿಯಿಂದ ಪ್ರಾರಂಭಿಸಿದರು. ದಾಸರಿಂದ ಈ ಮೊದಲೇ "ಆನಂದಪೂರ್ಣವಿಠಲ" ಎಂಬ ಅಂಕಿತವನ್ನು ಪಡೆದಿದ್ದ ನರಸಪ್ಪನವರು ಆ ಊರಿನ ಗಣ್ಯರಲ್ಲೊಬ್ಬರು. ಅವರು ತಮ್ಮ ಮನವನ್ನು ಕಾಡುತ್ತಿದ್ದ ಚಾತುರ್ಥಿಕ ಚಳಿಯನ್ನು ನಿವಾರಿಸುವಂತೆ ದಾಸರನ್ನೂ ಪ್ರಾರ್ಥಿಸಿದರು. ದಾಸರು ಆಗತಾನೆ ಕರೆದ ಒಂದು ತಂಬಿಗೆ ಹಾಲನ್ನು ತರುವಂತೆ ಹೇಳಿ ತಾವೇ ಕುಡಿದರು. ಚಳಿರೋಗವನ್ನು ನಿವಾರಿಸಿದರು. ನಂತರ ಕೊಡಿಗೇಹಳ್ಳಿಯ ಭಕ್ತರು ಕೊಟ್ಟ ಲೋಹದ ಒಂದು ಪ್ರಾಣ ದೇವರ ಪ್ರತಿಮೆಯನ್ನು ಪಡೆದು ದಾಸರು ತಮ್ಮ ಪ್ರವಾಸವನ್ನು ಮುಂದುವರೆಸಿದರು.

ಪ್ರವಾಸಕಾಲದಲ್ಲಿ ಪ್ರತಿದಿನ ದಾಸದೀಕ್ಷೆಯ ಬಾಹ್ಯಾಲಂಕಾರಗಳಿಂದ ಎಂದರೆ ತಲೆಗೆ ಕಾವಿ ಶಾಟಿಯನ್ನು ಸುತ್ತಿ, ಕಾಲಿಗೆ ಗೆಜ್ಜೆ ಕಟ್ಟಿಕೊಂಡು ಕೈಯಲ್ಲಿ ತಂಬೂರಿ, ತಾಳ, ಚಿಟಿಕೆಗಳನ್ನು ಹಿಡಿದು ಬೀದಿ ಬೀದಿಗಳಲ್ಲಿ ಭಜನೆ ಮಾಡುತ್ತ ಹೋಗುವುದು ದಾಸರ ಯಾಯವಾರದ ಕ್ರಮವಾಗಿತ್ತು. ಶಿಷ್ಯನೊಬ್ಬನು ಕೊಡಿಗೇಹಳ್ಳಿಯಲ್ಲಿ ದೊರೆತಿದ್ದ ಪ್ರಾಣದೇವರ ಪ್ರತೀಕವನ್ನು ಎದೆಯ ಮೇಲೆ ತಗಲು ಹಾಕಿಕೊಂಡು ಮುಂದೆ ಹೋಗುತ್ತಿದ್ದು, ಮಿಕ್ಕವರೆಲ್ಲರೂ ಹಿಂದೆ, ದಾಸರ ಜೊತೆಯಲ್ಲಿ ಭಜನೆ ಮಾಡುತ್ತ ಹೋಗುತ್ತಿದ್ದರು. ಭಕ್ತಾದಿಗಳು ಸ್ವಪ್ರೇರಣೆಯಿಂದ ತಂದುಕೊಟ್ಟ

ಧಾನ್ಯ ಮೊದಲಾದವುಗಳನ್ನು ಮಾತ್ರ ಸ್ವೀಕರಿಸುತ್ತಿದ್ದರು. ಯಾಯವಾರ ಮುಗಿದ ನಂತರ ಬಿಡಾರಕ್ಕೆ ಬಂದು ಸ್ನಾನ ಪೂಜಾದಿಗಳನ್ನು ಮುಗಿಸಿ ಭಕ್ತಜನರಿಗೆ, ಭೋಜನ ಮಾಡಿಸಿದ ನಂತರವೇ ತಾವು ಊಟ ಮಾಡುತ್ತಿದ್ದರು. ಸಾಂತ್ವನವನ್ನು ಅರಸಿ ಬಂದ ಭಕ್ತರಿಗೆ ತಾವು ನೇರವಾಗಿ ಏನನ್ನೂ ಹೇಳದೆ ಪ್ರಾಣ ಪ್ರತೀಕವನ್ನು ಹೊತ್ತ ಶಿಷ್ಯನ ಮೂಲಕವೇ ತಿಳಿಸಬೇಕಾದ್ದನ್ನು ತಿಳಿಸಿ ಅನುಗ್ರಹಿಸುತ್ತಿದ್ದರು. ಈ ರೀತಿ ಆರ್ತರಿಗೆ ನೆರವು ನೀಡಿದ ಅನೇಕ ಪ್ರಸಂಗಗಳು ಪವಾಡಗಳೆಂಬಂತೆ ಪ್ರಚಲಿತವಾಗಿವೆ. ದಾಸರು ಕ್ರಿ.ಶ.೧೯೦೪ ರಿಂದ ೧೯೧೨ರವರೆಗೆ ಬೇರೆ ಬೇರೆ ಹಂತಗಳಲ್ಲಿ ಕರ್ನಾಟಕ, ಆಂಧ್ರ ಮೊದಲಾದ ಪ್ರದೇಶಗಳಲ್ಲಿ ಪ್ರವಾಸ ಮಾಡಿ ದಾಸ ಧರ್ಮಪ್ರಚಾರ, ಶಿಷ್ಯ ಸಂಗ್ರಹಣೆ ಮತ್ತು ಜಾತಿ ಮತಗಳನ್ನು ಪರಿಗಣಿಸದೆ ಅರಸಿ ಬಂದವರೆಲ್ಲರಿಗೂ ಅಂಕಿತೋಪದೇಶ ಇತ್ಯಾದಿಗಳನ್ನು ಮಾಡಿದರು.

ದಾಸರು ಶಿವಮೊಗ್ಗಾ, ಉಡುಪಿ ಮುಂತಾದ ಊರುಗಳಲ್ಲಿ ಸಹ ಮನಃಪೂರ್ವಕವಾಗಿ ಮೆಚ್ಚುವಂತೆ ಶ್ರೀ ಜಗನ್ನಾಥದಾಸರ ಹರಿಕಥಾಮೃತಸಾರದ ಅನುವಾದ ಮಾಡಿದರು. ಉಡುಪಿಯಲ್ಲಿ ಅಷ್ಟಮಠದ ಯತಿಗಳಿಂದ ಸನ್ಮಾನಿತರಾದರು. ಹೊಸಪೇಟೆಯಲ್ಲಿ ವಿಶೇಷವಾಗಿ ಹರಿಕಥಾ ಪ್ರಸಂಗಗಳು ಜರುಗಿದವು. ಅವರು ಧಾರ್ಮಿಕ ಉಪನ್ಯಾಸಗಳಲ್ಲಿ ಶಿವಶರಣರ ಸಾಹಿತ್ಯ, ಕುರಾನ್, ಬೈಬಲ್ ಇವುಗಳಿಂದಲೂ ಸಹ ವಿಷಯಗಳನ್ನು ಉಲ್ಲೇಖಿಸುತ್ತಿದ್ದದ್ದು ಒಂದು ವೈಶಿಷ್ಟ್ಯವಾಗಿತ್ತು.

ಕ್ರಿ.ಶ.೧೯೧೯ರ ಕಾರ್ತೀಕ ಬಹುಳ ಚತುರ್ದಶಿ ತಮ್ಮ ಗುರುಗಳಾದ ಮುದ್ದುಮೋಹನದಾಸರ ಆರಾಧನೆಯನ್ನು ಗುರುಸ್ಥಾನವಾದ ದೊಡ್ಡಬಳ್ಳಾಪುರದಲ್ಲಿ ಆಚರಿಸಿ ಅಲ್ಲಿಂದ ತಿರುಪತಿ ಕ್ಷೇತ್ರಕ್ಕೆ ತೆರಳಿದರು. ಅಲ್ಲಿ "ಇಂದಿರೇಶ ವಿಠಲ"ಅಂಕಿತರಾದ ಪಾಂಡುರಂಗೀ ಹುಚ್ಚಾಚಾರ್ಯರೆಂಬ ಪ್ರಸಿದ್ಧ ಹರಿದಾಸರು ಅನ್ನಸತ್ರಾದಿಗಳನ್ನು ನಡೆಸಿಕೊಂಡು ಶ್ರೀ ಶ್ರೀನಿವಾಸನ ಸೇವೆಯಲ್ಲಿ ನಿರತರಾಗಿದ್ದರು. ದಾಸರು ಅವರನ್ನು ಸಂದರ್ಶಿಸಿ ಅವರಿಂದ ಆದರಾತಿಥ್ಯಗಳನ್ನು ಸ್ವೀಕರಿಸಿದರು.

ಕ್ರಿ.ಶ.೧೯೧೨ರ ಸುಮಾರಿನಲ್ಲಿ ಕೊಡಿಗೇಹಳ್ಳಿಗೆ ಶಿಷ್ಯರ ಆಹ್ವಾನದ ಮೇರೆಗೆ ಬಂದರು. ಈ ಸಂದರ್ಭದಲ್ಲಿ ಅದೇ ಊರಿನವರಿಂದಲೇ ಹಿಂದೆ ಕೊಡಲ್ಪಟ್ಟಿದ್ದ ಪ್ರಾಣದೇವರ ಪ್ರತಿಮೆಯು ಹಿಂದಿನ ದಿನ ಪೂಜೆ ಮಾಡಿಟ್ಟಿದ್ದು ಮಾರನೆ ದಿನ ಕಾಣದಾಯಿತು. ತಮ್ಮ ಸಂಚಾರಗಳನ್ನು ನಿಲ್ಲಿಸಲು ಇದು ಭಗವಂತನ ಸೂಚನೆಯೆಂದು ತಿಳಿದು ದಾಸರು ಹಿಂದಿನಂತೆ ಪ್ರವಾಸ ಮಾಡುವುದನ್ನು ನಿಲ್ಲಿಸಿ ತಮ್ಮ ಸ್ವಗ್ರಾಮವಾದ ನರಸೀಪುರಕ್ಕೆ ಹಿಂತಿರುಗಿದರು. ಪ್ರವಾಸಗಳಲ್ಲಿ ಸಂಗ್ರಹಿಸಿದ ಹಣದ ಒಂದು ಭಾಗವನ್ನು ಮುದುವಟ್ಟಾಗಿ ಇಟ್ಟು ಕರಿಗಿರಿ ಶ್ರೀ ಲಕ್ಷ್ಮೀ ನರಸಿಂಹನಿಗೆ ನಿರಂತರವಾಗಿ ಪ್ರತಿ ಶನಿವಾರ ದಾಸಕೂಟ ಸಭಾ ಹೆಸರಿನಲ್ಲಿ ಒಂದು ಸೇವೆ ನಡೆಯುವಂತೆ ಮಾಡಿದರು.

ದಾಸರು ತಮ್ಮ ದಾಸ ಪಂಥ ಪುನರುಜ್ಜೀವನ ಕಾರ್ಯವನ್ನು ನರಸೀಪುರಕ್ಕಿಂತ ಬೆಂಗಳೂರು ನಗರದಲ್ಲಿದ್ದು ಹೆಚ್ಚು ವ್ಯಾಪಕವಾಗಿ ನಡೆಸ-ಬಹುದೆಂದು ತೀರ್ಮಾನಿಸಿ ತಮ್ಮ ಅಳಿದುಳಿದ ಆಸ್ತಿ ಪಾಸ್ತಿಗಳನ್ನು ವಿಲೇವಾರಿ ಮಾಡಿ ಕ್ರಿ.ಶ.೧೯೧೨ರಲ್ಲಿ ಬೆಂಗಳೂರು ಪಟ್ಟಣ ಸೇರಿದರು. ಈ ಹೊತ್ತಿಗಾಗಲೇ ಅವರಿಗೆ ಬೆಂಗಳೂರಿನ ಗಣ್ಯವ್ಯಕ್ತಿಗಳೂ ಭಗವದ್ಭಕ್ತರುಗಳೂ ಆದ ರಾಜಸಭಾ-ಭೂಷಣ ಕರ್ಪೂರ ಶ್ರೀನಿವಾಸರಾಯರು, ದೇಶಮುಖಿ ರಾಮರಾಯರು, ಬಿ.ಡಿ. ರಾಘವೇಂದ್ರರಾಯರು, ಬೇಲಿ ಶ್ರೀನಿವಾಸರಾಯರು, ಅಣ್ಣು ರಾಮರಾಯರು ಮುಂತಾದವರ ಪರಿಚಯವಾಗಿತ್ತು.

ಕರ್ಪೂರ ಶ್ರೀನಿವಾಸರಾಯರು ಚಾಮರಾಜಪೇಟೆಯಲ್ಲಿ ತಮ್ಮ ಮನೆಯ ಒಂದು ಭಾಗವನ್ನು ದಾಸರಿಗೆ ವಾಸಕ್ಕೆ ಬಿಟ್ಟುಕೊಟ್ಟರು. ಸಮೀಪದಲ್ಲಿಯೇ ದಾಸರ ವಿದ್ಯಾಗುರುಗಳಾಗಿದ್ದ ಚಿಂಚೋಳಿ ವೆಂಕಣ್ಣಾಚಾರ್ಯರಿಂದ ಸ್ಥಾಪಿಸಲ್ಪಟ್ಟ ಪ್ರಾಣದೇವರ ಗುಡಿಯಿದ್ದು ದಾಸರು ಪ್ರತಿ ದಿನ ಸಂಜೆ ಶ್ರೀ ಹರಿಕಥಾಮೃತಸಾರದ ಅನುವಾದ ಮತ್ತು ಇತರ ಪುರಾಣ ಪ್ರವಚನಗಳನ್ನು ಅಲ್ಲಿ ನಡೆಸುತ್ತಿದ್ದರು. ಅವರ ಪ್ರವಚನಗಳು ಅಖಂಡ ಶಾಸ್ತ್ರಸಾರಗಳಾಗಿರುತ್ತಿದ್ದು ಪಂಡಿತರಿಂದಲೂ, ಪಾಮರರಿಂದಲೂ ಏಕರೀತಿಯಲ್ಲಿ ಮಾನ್ಯವಾಗಿದ್ದವು. ಅನೇಕ ಭಕ್ತರುಗಳು

ಇವರನ್ನು ತಮ್ಮ ಮನೆಗಳಿಗೆ ಕರೆಸಿ ಪುರಾಣ ಪ್ರವಚನ ಮಾಡಿಸುತ್ತಿದ್ದರು. ಚಾಮರಾಜಪೇಟೆಯಲ್ಲಿಯೇ ದಾಸರು ವಾಸಗೃಹಗಳನ್ನು ಅನೇಕ ಸಲ ಬದಲಾಯಿಸಿದರು. ಬೆಂಗಳೂರಿನ ಅನೇಕ ಬಡಾವಣೆಗಳಲ್ಲಿ ಸುಮಾರು ಹತ್ತು ವರ್ಷಕಾಲ ಪುರಾಣ ಪ್ರವಚನಗಳನ್ನು ಮುಂದುವರೆಸಿದರು.

ಇದೇ ಕಾಲದಲ್ಲಿ ಅನೇಕ ದ್ವೈತ ಸಿದ್ಧಾಂತ ಗ್ರಂಥಗಳನ್ನು ಶೇಖರಿಸುವುದರ ಜೊತೆಗೆ ಜಿಜ್ಞಾಸೆಗೆ ಅನುಕೂಲವಾಗುವ ಅನೇಕ ಅನ್ಯಮತ ಗ್ರಂಥಗಳನ್ನೂ ಸಹ ಸಂಗ್ರಹಿಸಿ ಅಧ್ಯಯನ ಮಾಡಿದರು.

ದಾಸರು ಆಗಾಗ್ಗೆ ತಿರುಪತಿಗೆ ಹೋಗುತ್ತಿದ್ದು ಒಂದು ಸಲ ಅಲ್ಲಿ ಮಧ್ವಸಿದ್ಧಾಂತೋನ್ನಾಹಿನೀ ಸಭೆಯಲ್ಲಿ ದಾಸ ಸಾಹಿತ್ಯದ ವಿಷಯವಾಗಿ ಪರೀಕ್ಷೆಗೆ ಒಳಗಾಗಲು ಹೋಗಿದ್ದರು. ಪರೀಕ್ಷಕರು, ದಾಸರಿಂದ "ಹರಿದಾಮೋದರವಿಠಲ" ಎಂಬ ಅಂಕಿತ ಪಡೆದ ಮುಳಬಾಗಿಲಿನ ಅಚ್ಚಪ್ಪದಾಸರೆಂಬುವರಾಗಿದ್ದರು. ಗುರುಗಳನ್ನು ನೋಡಿ ಪರೀಕ್ಷಕರಿಗೆ ದಿಕ್ಕು ತೋರದಂತಾಯಿತು. ಶಿಷ್ಯರು ದಾಸರಿಗೆ ನಮಸ್ಕಾರ ಮಾಡಿ ತಮ್ಮ ಸ್ಥಾನವನ್ನು ಬಿಟ್ಟುಕೊಟ್ಟು ಅದನ್ನು ಅಲಂಕರಿಸಬೇಕೆಂದು ಪ್ರಾರ್ಥಿಸಿದರು. ದಾಸರು ಒಪ್ಪದೆ ಪರೀಕ್ಷಕರು ತಮಗೆ ನಿಯತವಾದ ಕಾರ್ಯವನ್ನು ನಡೆಸಬೇಕೆಂದು ತಿಳಿಸಿದರು. ವಿಷಯವು ಸಭೆಗಾಗಿ ದಯಮಾಡಿಸಿದ್ದ ಉತ್ತರಾದಿ ಮಠಾಧೀಶರಾದ ಶ್ರೀ ಸತ್ಯಧ್ಯಾನ ತೀರ್ಥ ಶ್ರೀಪಾದಂಗಳವರ ಗಮನಕ್ಕೆ ಹೋಯಿತು. ಶ್ರೀಪಾದಂಗಳವರು ಹಿಂದೊಮ್ಮೆ ಒಂದು ಜಿಜ್ಞಾಸಾಸ್ಪದವಾದ ಪ್ರಮೇಯದ ಬಗ್ಗೆ ದಾಸರು ಅನೇಕ ಶಾಸ್ತ್ರ ಗ್ರಂಥಗಳನ್ನೂ ಶ್ರೀವಿಜಯದಾಸರ ವಚನಗಳನ್ನೂ ಎಡೆತಡೆಯಿಲ್ಲದೆ ಉದಾಹರಿಸುತ್ತಾ ಪಂಡಿತರುಗಳು ಕೂಡ ಒಪ್ಪುವಂತೆ ಉಪನ್ಯಾಸ ಮಾಡಿದ್ದನ್ನು ಪ್ರತ್ಯಕ್ಷ ಕೇಳಿ ಮೆಚ್ಚಿಕೊಂಡಿದ್ದರು. ಆದ್ದರಿಂದ ಪ್ರಸಕ್ತ ಪ್ರಸಂಗವು ಅವರ ಗಮನಕ್ಕೆ ಬಂದ ಕೂಡಲೆ ದಾಸರನ್ನು ಸಭೆಯ ದಾಸ ಸಾಹಿತ್ಯ ಪರೀಕ್ಷೆಗೆ ಅಧ್ಯಕ್ಷರನ್ನಾಗಿಯೂ ಸಭೆಯ ಧರ್ಮದರ್ಶಿಗಳಾಗಿಯೂ ನೇಮಿಸಿದರು. ದಾಸರು ಕ್ರಿ.ಶ.೧೯೩೨ರವರೆಗೆ ಈ ರೀತಿ ಧರ್ಮದರ್ಶಿಗಳಾಗಿದ್ದರು.

ದಾಸರ ಅಳಿಯಂದಿರಾದ ಕೃಷ್ಣಮೂರ್ತಿರಾಯರೆಂಬುವರು ಬೆಂಗಳೂರು ವಿಶ್ವೇಶ್ವರಪುರದ ರಾಮಐಯ್ಯಂಗಾರ್ ರಸ್ತೆಯಲ್ಲಿ ಹೊಸ ಮನೆ ಕಟ್ಟಿಸಿದ್ದು ಅಲ್ಲಿ ವಾಸಿಸುವಂತೆ ದಾಸರನ್ನು ಪ್ರಾರ್ಥಿಸಿ ತಾವು ಕೆಲಸದ ಪ್ರಯುಕ್ತ ಬೇರೆ ಊರಿಗೆ ಹೋದರು. ದಾಸರು ಆ ಮನೆಗೆ "ಆನಂದ ನಿಲಯ"ವೆಂದು ನಾಮಕರಣ ಮಾಡಿ ಮುಂದೆ ತಮ್ಮ ಎಲ್ಲಾ ಚಟುವಟಿಕೆಗಳಿಗೂ ಅದನ್ನು ಕೇಂದ್ರ ಸ್ಥಾನವನ್ನಾಗಿ ಮಾಡಿಕೊಂಡರು.

ದಾಸರ ಸರಳತೆ, ಸಾರ್ವಜನಿಕರಿಗೆ ಒಪ್ಪಿಗೆಯಾಗುವಂಥ ಬೋಧನ ಕ್ರಮ ಇವುಗಳನ್ನು ಗುರುತಿಸಿ ಬೆಂಗಳೂರು ಸೆಂಟ್ರಲ್ ಜೈಲಿನ ಅಧಿಕಾರಿಗಳು ಇವರನ್ನು ಖೈದಿಗಳ ಉದ್ಧಾರಕ್ಕಾಗಿ ವಾರಕೊಮ್ಮೆ ಧರ್ಮ, ನೀತಿ ಇತ್ಯಾದಿಗಳ ಬಗ್ಗೆ ಉಪನ್ಯಾಸ ಮಾಡಲು ನೇಮಿಸಿದರು. ಇದು ಕ್ರಿ.ಶ.೧೯೨೬ರಿಂದ ದಾಸರು ಅಂತ್ಯಕಾಲದಲ್ಲಿ ಬೆಂಗಳೂರು ಬಿಟ್ಟು ದೇವರಾಯದುರ್ಗಕ್ಕೆ ಹೋಗುವವರೆಗೆ ನಡೆಯಿತು. ಅನೇಕ ಖೈದಿಗಳು ದಾಸರ ಉಪದೇಶದಿಂದ ಉದ್ಧಾರವಾಗಿದ್ದಾರೆ.

ದಾಸರು ಅನೇಕ ಅಭಿಮಾನಿಗಳ ಮತ್ತು ಭಕ್ತರ ಅಪೇಕ್ಷೆಯಂತೆ ತಮ್ಮ ಉಪದೇಶವು ಹೆಚ್ಚು ವ್ಯಾಪಕವಾಗಿ ಊರೂರಿಗೂ ಮುಟ್ಟುವಂತೆ ಒಂದು ಅತ್ಯಲ್ಪ ಬೆಲೆಯ ಮಾಸ ಪತ್ರಿಕೆಯನ್ನು ಸ್ಥಾಪಿಸಲಿಚ್ಛಿಸಿ ಪ್ರಪ್ರಥಮವಾಗಿ ಪ್ರಭವನಾಮ ಸಂವತ್ಸರದ (ಕ್ರಿ.ಶ.೧೯೨೭) ಚೈತ್ರ ಶುದ್ಧ ಪ್ರತಿಪದೆ ದಿನ "ಪರಮಾರ್ಥ ಚಂದ್ರೋದಯ" ಎಂಬ ಮಾಸಪತ್ರಿಕೆ ಹೊರತಂದರು. ಪತ್ರಿಕೆಯಲ್ಲಿ ಎಲ್ಲ ಮತದವರಿಗೂ ಉಪಯುಕ್ತವಾದ ಲೇಖನಗಳು ಪ್ರಕಟವಾಗುತ್ತಿದ್ದವು.

ಕ್ರಿ.ಶ. ೧೯೨೭–೨೮ರಲ್ಲಿ ಬೆಂಗಳೂರು ಗುಂಡೋಪಂತ ಛತ್ರದಲ್ಲಿ ಬಿಡಾರ ಮಾಡಿದ್ದ ಉಡುಪಿಯ ಶ್ರೀ ಪುತ್ತಿಗೆಮಠದ ಶ್ರೀ ಸುಧೀಂದ್ರತೀರ್ಥ ಶ್ರೀಪಾದಂಗಳವರು ದಾಸರ ಹರಿಕಥಾಮೃತಸಾರದ ಅನುವಾದ ಕೇಳಿ ಸಂತೋಷಪಟ್ಟು "ಪರಮಪ್ರಿಯ" ಎಂಬ ಬಿರುದನ್ನು ದಯಪಾಲಿಸಿದರು. ದಾಸರು ಇಂದಿನವರೆಗೂ ಆ ಬಿರುದಿನಿಂದಲೇ ಗುರುತಿಸಲ್ಪಡುವವರಾಗಿದ್ದಾರೆ.

ಕಾರ್ಯ ವಿಸ್ತರಣೆಗಾಗಿ ದಾಸರು ಪುನಃ ಸಂಚಾರ ಕೈಗೊಂಡು ಹೋದಲ್ಲೆಲ್ಲಾ ಶಿಷ್ಯರನ್ನು ಕೂಡಿಸಿ ಅಂಕಿತೋಪದೇಶ ನೀಡಿದರು. ಹೀಗೆ ಅರಸೀಕೆರೆ, ಶಿವಮೊಗ್ಗ, ಉಡುಪಿ ಇವುಗಳಿಗೆ ಭೇಟಿಯಿತ್ತರು. ಉಡುಪಿಯಲ್ಲಿ ಅಷ್ಟ ಮಠಾಧೀಶರುಗಳಿಂದ ಸನ್ಮಾನಿತರಾದರು. ಹಿಂದೆ ಬಿರುದನ್ನು ದಯಪಾಲಿಸಿದ್ದ ಶ್ರೀ ಪುತ್ತಿಗೆ ಮಠದ ಶ್ರೀ ಪಾದಂಗಳವರು ಇತರ ಯತಿಗಳಿಗೆ ದಾಸರನ್ನು ಪರಿಚಯಿಸಿ ಬೀಳ್ಕೊಡುವಾಗ ಜ್ಞಾಪಕಾರ್ಥವಾಗಿ ಒಂದು ದಂಡವನ್ನು ಪೂಜೆಗಾಗಿ ಕೊಟ್ಟರು. ಆ ದಂಡವು ವಿಶೇಷ ಮಹಿಮೆಯುಳ್ಳದ್ದೆಂದು ಅನೇಕರ ಅನುಭವಕ್ಕೆ ಬಂದಂತಿದೆ.

ದಾಸರು ಉಡುಪಿಯಿಂದ ಬೆಂಗಳೂರಿಗೆ ಹಿಂತಿರುಗಿದ ಒಂದು ವರ್ಷದ ನಂತರ ಚಿತ್ರದುರ್ಗದ ಕಡೆಗೆ ಹೊರಟರು.

ಚಿತ್ರದುರ್ಗದ ಸದಾಚಾರ ಸಂಪನ್ನರಾದ ಭಜನೆ ಶ್ರೀನಿವಾಸರಾಯರು ನಾರ್ಮಲ್ ಸ್ಕೂಲ್‌ನ ನಿವೃತ್ತ ಉಪಾಧ್ಯಾಯರು. ತಿರುಪತಿ ಶ್ರೀನಿವಾಸನ ಭಕ್ತರು. ಏಕಾದಶಿ ಜಾಗರಣೆ ಇತ್ಯಾದಿಗಳನ್ನು ಆಚರಿಸುತ್ತಿದ್ದರು. "ವೆಂಕಟೇಶ" ಮುದ್ರಿಕೆಯಿಂದ ನೂರಾರು ದೇವರ ನಾಮಗಳನ್ನು ರಚಿಸಿದ್ದರು. ದಾಸರು ತಮ್ಮ ಕಾರ್ಯವನ್ನು ಮುಂದುವರೆಸಲು ತಮಗೆ ಸರಿಯಾದ ಉತ್ತರಾಧಿಕಾರಿಯೆಂದು ಗುರುತಿಸಿ ಶ್ರೀನಿವಾಸರಾಯರನ್ನು ನೋಡಲು ತಾವೇ ಅವರ ಮನೆಗೆ ಹೋಗಿ ಅಂಕಿತೋಪದೇಶ ಮಾಡಲು ಬಂದಿರುವುದಾಗಿ ತಿಳಿಸಿದರು. ಆದರೆ ಶ್ರೀನಿವಾಸರಾಯರು ಕೂಡಲೆ ಸಮ್ಮತಿಸಲಿಲ್ಲ. ಹಿಂದೆಂದೂ ಪರಿಚಯವಿರದ ದಾಸರು, ಶ್ರೀನಿವಾಸರಾಯರು ಬಹಳ ಹಿಂದೆ ತಮ್ಮ ಪದವೊಂದರಲ್ಲಿ ಜ್ಞಾನಗುರು ಮತ್ತು ಅಂಕಿತಗಳ ಪ್ರಾಪ್ತಿಗಾಗಿ ಹಂಬಲಿಸಿರುವುದನ್ನು ನೆನಪಿಸಲು ಆಶ್ಚರ್ಯಭರಿತರಾಗಿ, ದಾಸರು ಅಪರೋಕ್ಷ ಜ್ಞಾನಿಗಳೇ ಆಗಿರಬೇಕೆಂದು ತೀರ್ಮಾನಿಸಿ ಅವರ ಪೀಳಿಗೆಯ ಬಗ್ಗೆ ವಿವರಗಳನ್ನು ಪಡೆದ ನಂತರ ಅಂಕಿತ ಪಡೆಯಲು ಒಪ್ಪಿ ಒಂದು ಶುಭ ಮುಹೂರ್ತದಲ್ಲಿ "ಉರಗಾದ್ರಿವಾಸವಿಠಲ" ಎಂಬ ಅಂಕಿತ ಪಡೆದರು. ಅಂಕಿತನಾಮವನ್ನು "ಉರಗಾದ್ರಿವಾಸ ವಿಠಲ ದಾಸ"ರ ಸಂಪುಟದಲ್ಲಿ ಕಾಣಬಹುದು. ಶ್ರೀ ಶ್ರೀನಿವಾಸರಾಯರು ಈ ಸಂದರ್ಭದಲ್ಲಿ ಮಾಡಿದ ಗುರುಸ್ತೋತ್ರವನ್ನೂ ಅದೇ ಸಂಪುಟದಲ್ಲಿ ಕಾಣಬಹುದು.

ದಾಸರು ೧೧-೯-೧೯೩೨ರಂದು ಚಿತ್ರದುರ್ಗದಲ್ಲಿ "ಪರಮ ಪ್ರಿಯ ದಾಸ ಮಂಡಳಿ" ಎಂಬ ಸಂಘವನ್ನು ಸ್ಥಾಪಿಸಿದರು. ಶ್ರೀ ಶ್ರೀನಿವಾಸರಾಯರು ತಮ್ಮ ಗುರುಗಳ ಆದೇಶದಂತೆ ದಾಸ ಪೀಳಿಗೆಯನ್ನು ಬೆಳೆಸಲು ಗುರು ಸೇವಾರ್ಥ ನೂರಾರು ಶಿಷ್ಯರುಗಳಿಗೆ ಅಂಕಿತೋಪದೇಶ ಮಾಡಿ ತುಂಬು ಜೀವನ ನಡೆಸಿ ತಮ್ಮ ೯೩ನೇ ವಯಸ್ಸಿನಲ್ಲಿ ಕ್ರೋಧಿನಾಮ ಸಂವತ್ಸರದ ಕಾರ್ತೀಕ ಬಹುಳ ದ್ವಾದಶಿ ಸೋಮವಾರ (ಕ್ರಿ.ಶ. ೩೦-೧೧-೧೯೬೪) ದೇಹಬಿಟ್ಟರು.

ಸುಬ್ಬರಾಯದಾಸರು ಚಿತ್ರದುರ್ಗದಿಂದ ಹೊರಟು ಹರಿಹರದಲ್ಲಿ ಅನೇಕ ಭಕ್ತರಿಗೆ ಅಂಕಿತೋಪದೇಶ ಮಾಡಿ ರಾಣಿಬೆನ್ನೂರು ಸಮೀಪದ ಕದರುಮಂಡಲಗಿಗೆ ಬಂದರು. ಕದರುಮಂಡಲಗಿಯಲ್ಲಿ ಜನಮೇಜಯನಿಂದ ಪ್ರತಿಷ್ಠಿತವೆಂದು ಪ್ರತೀತಿಯಿದ್ದು, ಕಾಂತೇಶನೆಂದು ಪ್ರಸಿದ್ಧವಾಗಿರುವ ಎತ್ತರವಾದ ಒಂದು ಪ್ರಾಣದೇವರ ಶಿಲಾ ಪ್ರತೀಕವಿರುವ ದೇವಸ್ಥಾನ ಇದೆ. ಇದು ಮಹಾ ಜಾಗ್ರತ ಸ್ಥಳವೆನಿಸಿದೆ. ಕಾಂತೇಶನು ಅನೇಕ ಹರಿದಾಸರುಗಳಿಂದ ಸ್ತೋತ್ರ ಮಾಡಿಸಿಕೊಂಡಿದ್ದಾನೆ.

ದಾಸರು ಕಾರ್ತೀಕ ಶುದ್ಧ ದಶಮಿ ದಿನ ವಿಜಯದಾಸರ ಆರಾಧನೆಯನ್ನು ಆಚರಿಸಿ ಮಾರನೆಯದಿನ ಜಾತಿ ಮತ ಭೇದವಿಲ್ಲದೆ ಭಕ್ತರುಗಳಿಗೆ ಅಂಕಿತೋಪದೇಶ ಮಾಡಿ ರಾತ್ರಿ ಭಜನೆ. ಜಾಗರ ಮರುದಿನ ಉತ್ಥಾನದ್ವಾದಶಿ ಉತ್ಸವಗಳನ್ನು ಆಚರಿಸಿದರು. ಈ ಕಾರ್ಯಕ್ರಮಗಳಲ್ಲಿ ಸ್ಥಳೀಯ ಮುಖಂಡರಾಗಿ ಭಾಗವಹಿಸಿದವರಲ್ಲಿ ದಾಸರ ಶಿಷ್ಯರಾದ "ಮಾರುತೀಶವಿಠಲ" ಅಂಕಿತರಾದ ವಡವಿ ಭೀಮಾಚಾರ್ಯರು ಮುಖ್ಯರು. ದಾಸರು ತಮ್ಮ ಕದರುಮಂಡಲಗಿಯ ಭೇಟಿಯ ನೆನಪಿಗಾಗಿ ದೇವಸ್ಥಾನದಲ್ಲಿ ಶಿಲಾ ಸ್ತಂಭ ಸ್ಥಾಪಿಸಿ ನಿರಂತರ ದೀವಿಗೆ ಬೆಳಗುವಂತೆ ಏರ್ಪಾಡು ಮಾಡಿ ಬೆಂಗಳೂರಿಗೆ ಹಿಂತಿರುಗಿದರು.

ಶಿಷ್ಯರಾದ ರಮಾಕಾಂತ ದಾಸರಿಗೆ ಬಹಳ ಕಾಲದ ನಂತರ ಕಾಂತೇಶನ ದಯ ಮತ್ತು ಗುರುಗಳ ಪರಮಾನುಗ್ರಹದಿಂದ ಪುತ್ರೋತ್ಸವವಾಗಿದ್ದು ಅವರ

ಪ್ರಾರ್ಥನೆಯ ಮೇರೆಗೆ ದಾಸರು ಕದರುಮಂಡಲಗಿಗೆ ಎರಡನೇ ಸಲ ಭೇಟಿಯಿತ್ತು ಮಗುವಿನ ನಾಮಕರಣಾದಿಗಳಲ್ಲಿ ಭಾಗವಹಿಸಿದರು.

ಕಾಂತೇಶನಿಂದ ಪ್ರಭಾವಿತರಾದ ದಾಸರು ಅದೇ ಸ್ಥಳದಿಂದ ಒಂದು ಪ್ರಾಣದೇವರ ಪ್ರತೀಕವನ್ನು ತಮ್ಮ ಸ್ಥಳಕ್ಕೆ ತೆಗೆದುಕೊಂಡು ಹೋಗಬೇಕೆಂದು ಬಯಸಿ ಮೂರನೆ ಬಾರಿ ಕದರುಮಂಡಲಗಿಗೆ ಹೋದರು. ಅಲ್ಲಿ ಭರಮಣ್ಣನೆಂಬ ಶಿಷ್ಯನ ಮೂಲಕ ಸುತ್ತಮುತ್ತಲಿರುವ ಗುಡ್ಡಗಾಡುಗಳಲ್ಲಿ ಹುಡುಕಿಸಿ ಸುಮಾರು ೨ ಅಡಿ ಎತ್ತರವಿರುವ ಪ್ರಾಣದೇವರ ಒಂದು ಶಿಲಾ ಪ್ರತೀಕವನ್ನು ತರಿಸಿ ಅದನ್ನು ಬೆಂಗಳೂರಿನ 'ಆನಂದನಿಲಯ'ಕ್ಕೆ ತಂದರು.

ದಾವಣಗೆರೆ ಸಮೀಪದ ಆನಗೋಡಿನ ಶಾನಭೋಗರೂ ದಾಸರ ಶಿಷ್ಯರೂ ಆದ ಸುಖತೀರ್ಥರಾಯರಿಗೆ ಪುರಂದರದಾಸರು ತಮ್ಮೂರಿಗೆ ಸಂಚಾರಾರ್ಥವಾಗಿ ಬಂದು ಹೋಗಿದ್ದರೆಂದು ಸ್ವಪ್ನಸೂಚನೆಯಾಗಿದ್ದರಿಂದ ಪುರಂದರದಾಸರ ಪುಣ್ಯದಿನವನ್ನು ಪ್ರಮಾಥಿ ಸಂವತ್ಸರದ ಪುಷ್ಯ ಬಹುಳ ಅಮಾವಾಸ್ಯೆ ೨೦-೧-೧೯೩೯ರಂದು ಆಚರಿಸಲು ದಾಸರನ್ನು ಆಹ್ವಾನಿಸಿ ಕರೆಸಿದರು. ದಾಸರು ಅನೇಕ ಕುರುಹುಗಳನ್ನು ತೋರಿಸುವುದರ ಮೂಲಕ ಹಿಂದೆ ಪುರಂದರದಾಸರು ವಿಜಯನಗರದ ರಾಜರು ಮತ್ತು ಆನೆಯ ಸೈನ್ಯದೊಂದಿಗೆ ಆನಗೋಡಿಗೆ ಬಂದಿದ್ದರೆಂದೂ ಅದೇ ಕಾರಣದಿಂದಲೇ ಊರಿಗೆ ಆ ಹೆಸರಾಯಿತೆಂದು ಖಚಿತಪಡಿಸಿದರು. ಅಲ್ಲದೆ ಆನಗೋಡಿನ ಮಾರಿಕಾಂಬಾಯೆಂದು ಪೂಜಿಸಲ್ಪಡುತ್ತಿದ್ದ ಪ್ರತೀಕದ ಅಲಂಕಾರಗಳನ್ನು ತೆಗೆಸಿ ದಾಸರು ಅದು ಗಣೇಶನ ಪ್ರತೀಕವೆಂದು ತೋರಿಸಿದರು.

ಆನಗೋಡಿನ ಪುರಂದರದಾಸರ ಆರಾಧನಾ ಮಹೋತ್ಸವದಲ್ಲಿ ಭಾಗ-ವಹಿಸಿದವರಲ್ಲಿ ದಾಸರ ಪ್ರಶಿಷ್ಯರಾದ ಚಿತ್ರದುರ್ಗದ ಶ್ರೀ. ಆರ್. ರಾಮಚಂದ್ರ-ರಾಯರು (ತಂದೆವೆಂಕಟೇಶವಿಠಲಾಂಕಿತರು) ಒಬ್ಬರು. ತಮ್ಮ ಗುರುಗಳ ಜೊತೆಗೆ ತಿರುಪತಿ ಯಾತ್ರೆಗೆ ಹೋಗುವುದು ತಪ್ಪಿ ಹೋಗಿ ಆನಗೋಡಿಗೆ ಬಂದರು. ರಾಮಚಂದ್ರರಾಯರಿಗೆ ತಮ್ಮ ಪರಮ ಗುರುಗಳ ಪರಿಚಯ ಅಷ್ಟೇನು

ಇಲ್ಲವಾಗಿದ್ದರೂ ಸಹ ಬಂದ ತಕ್ಷಣವೇ ದಾಸರು ಅವರನ್ನು ಪೂರ್ಣಾನುಗ್ರಹದ ದ್ಯೋತಕವಾಗಿ ಗಾಢಾಲಿಂಗನ ಮಾಡಿಕೊಂಡು "ಇದೇ ನಿನಗೆ ತಿರುಪತಿ ಯಾತ್ರೆ, ಶ್ರೀನಿವಾಸನನ್ನು ಇಲ್ಲಿಯೇ ಚೆನ್ನಾಗಿ ನೋಡುವವನಾಗು" ಎಂದು ಹೇಳಿದಾಗ ರಾಮಚಂದ್ರರಾಯರಿಗೆ ರೋಮಾಂಚನವಾಗಿ ದೇಹದಲ್ಲಿ ವಿದ್ಯುತ್ ಪ್ರವಾಹವಾದಂತಾಯಿತಂತೆ. ನಂತರ ದಾಸರು ಆ ದಿನ ಭೋಜನ ಸಮಯದಲ್ಲಿ ಊಟ ಮುಗಿಯುವುದರೊಳಗೆ ಒಂದು ಸ್ತೋತ್ರವನ್ನು ರಚಿಸಿ ಅರ್ಪಿಸಬೇಕೆಂದು ಆಜ್ಞೆ ಮಾಡಿದಾಗ ರಾಮಚಂದ್ರರಾಯರು ಈ ಮುಂದಿನ ಸ್ತೋತ್ರವನ್ನು ರಚಿಸಿ ಹಾಡಿದರು.

**ರಾಗ – ಮಧ್ಯಮಾವತಿ   ತಾಳ – ಆದಿ**

ತಂದೆಮುದ್ದು ಮೋಹನ್ನಾ । ಅಸ್ಮದ್ಗುರೋರ್ಗುರು ।
ಪೊಂದಿದೆನೊ ನಾ ನಿನ್ನಾ । ಪಾವನ್ನಚರಣಾರ ।
ವಿಂದಯುಗ್ಮಗಳನ್ನಾ । ಭವಗಹನವಿಪಿನದೊ ।
ಳಂಧನಹೆ ಪೊರೆಯೆನ್ನಾ । ಸಜ್ಜನಶರಣ್ಯ ಪ

ಬಂಧಭವಮೃತಿ ಭವಣೆ ವಿಸ್ಮೃತಿ । ಯಿಂದ ಚತುರಾಸೀತಿಲಕ್ಷದ ।
ದಂದುಗಾನ್ವಿತ ಯೋನಿಯೊಳು ಮನ । ಗುಂದಿದೆನೊ
ನಿನ ಕಂದನನು ಪೊರೆ ಅ.ಪ

ಮೋಹನ್ನವಿಠಲರ ವಂಶ । ದೊಳಗುದ್ಭವಿಸಿ ಹೃ ।
ದ್ಗೇಹದೊಳು ಗುರ್ವಂಶ । ಧರಿಸುತ ತತ್ತ್ವಾಮೃತ ।
ದೋಹನದಿ ಮಧುಧ್ವಂಸ । ಪಾದಾಬ್ಜಯುಗದೊಳು ।
ನೇಹ ಕರುಣಿಸಿ ಸಂಶ । ಯಾಪಹ ಸುಹಂಸ ।
ಸಹಿಸಿ ವಂದನೆ ನಿಂದನೆಗಳೆ । ಲ್ಲಹಿಶಯನನಂಘ್ರಿಗಳಿಗರ್ಪಿಸಿ ।
ಅಹಿಕ ಪಾರತ್ರಿಕವ ಕರುಣಿಸಿ ।
ಮಹಿಯೊಳ್ಚರಿಸುವ ಅಹಿನಾಮಾಭಿಧ ೧

ಜ್ಞಾನಭಕ್ತಿಗೆ ಸಿಂಧು । ಸುಖತೀರ್ಥಭಕ್ತನ ।
ಜ್ಞಾನ ಬೆಳೆಸಬೇಕೆಂದು । ತೈಜಸನ ಸೂಚನೆ ।
ಮಾನಿಸಲು ಮನದಂದು । ಸತಿಸಹಿತ ದಯದಲಿ ।
ದೀನಜನನಿಜಬಂಧೂ । ದ್ವೈತಾಬ್ಧಿಗಿಂದೂ ।
ಧ್ಯಾನಕಾಗಿ ಪುರಂದರಾರ್ಯರು ।
ಆನೆಗೋಡ್ಡೊರಬಾಹೆಯೊಳಗಿರೆ ।
ನಾನಾ ಸೂಚನೆಯಿಂದ ಕಂಡು ।
ವಿಧಾನದಿಂದನಲ್ಲಿ ಮೆರೆಸಿದ ೨

ದಾಸದೀಕ್ಷೆಯ ಧರಿಸೀ । ಅಹರಹರನಿಶಿಯೊಳು ।
ಕ್ಲೇಶಿತರನುದ್ಧರಿಸೀ । ಅಂಕಿತಸುಪದ್ಧತಿ ।
ದೇಶದೇಶದಿ ಬೆಳಸೀ । ಹರಿಶ್ರೀಕಥಾಮೃತ ।
ಭೂಸುರರಿಗುಣಬಡಸೀ । ಭಕ್ತರಘ ಹರಿಸೀ ।
ದಾಸಜನಹೃದ್ವಾಸ ತಂದೆವೆಂಕ ।
ಟೇಶವಿಠಲನ ಹೃದ್ಗುಹದಿ ನಿಧಿ ।
ಧ್ಯಾಸನದಿ ಕಾಣುತಲಿ ಹಿಗ್ಗ ವಾ ।
ತಾಶನಾಖ್ಯ ವಿಪಶ್ಚಿತಾರ್ಯನೆ ೩

ಸುಬ್ಬರಾಯದಾಸರು ಆನಗೋಡಿನ ಪ್ರವಾಸವನ್ನು ಯಶಸ್ವಿಯಾಗಿ ಮುಗಿಸಿ ಬೆಂಗಳೂರಿಗೆ ಹಿಂತಿರುಗಿದರು.

ದಾಸರು ಕದರುಮಂಡಲಗಿಯಿಂದ ತಂದ ಪ್ರಾಣದೇವರ ಪ್ರತೀಕವನ್ನು ಬೆಂಗಳೂರಿನಲ್ಲಿ ಪ್ರತಿಷ್ಠಿಸಬೇಕೆಂದು ನಗರಸಭೆಯಿಂದ ಒಂದು ನಿವೇಶನವನ್ನು ಪಡೆದು ನಿಬಂಧನೆಗಳು ಪ್ರತಿಕೂಲವಾದ್ದರಿಂದ ದೇವರಾಯನದುರ್ಗದಲ್ಲೇ ಪ್ರತಿಷ್ಠೆ ಮಾಡುವುದೆಂದು ನಿರ್ಣಯಿಸಿ ಪ್ರಮಾಥಿ ಸಂವತ್ಸರದ ಫಾಲ್ಗುಣ ಮಾಸದಲ್ಲಿ ಬೆಂಗಳೂರು ಬಿಟ್ಟು ದೇವರಾಯನದುರ್ಗ ತಲುಪಿದರು. ಫಾಲ್ಗುಣ ಬಹುಳ ಪಾಡ್ಯ ಭಾನುವಾರ ದಾಸರ ಪ್ರಶಿಷ್ಯರಾದ ಆರ್. ರಾಮಚಂದ್ರರಾಯರ ಉತ್ತೇಜನ

ಮತ್ತು ಶಿಫಾರಸುಗಳ ಮೇರೆಗೆ ಬಂದ ಶ್ರೀ ಎಮ್.ಆರ್. ಗೋವಿಂದರಾಯರಿಗೆ ೧೧೬೫ನೆಯದಾದ "ಗುರುಗೋವಿಂದವಿಠಲ" ಎಂಬ ಅಂಕಿತವನ್ನಿತ್ತು ಅದೇ ಕೊನೆಯ ಅಂಕಿತವೆಂದು ಸೂಚಿಸಿದರು.

ಕ್ರಿ.ಶ ೧೯೪೦ರ ಫಾಲ್ಗುಣ ಬಹುಳ ಪಂಚಮಿ ಗುರುವಾರ ಪ್ರಾಣದೇವರಿಗೆ "ಸುಂದರೇಶ"ನೆಂದು ನಾಮಕರಣ ಮಾಡಿ ಶ್ರೀಕೃಷ್ಣದಾಸ ತೀರ್ಥಶ್ರೀಪಾದಂಗಳೆಂಬುವರಿಂದ ಪ್ರತಿಷ್ಠಾಪನೆ ಮಾಡಿಸಿ ತಮ್ಮ ಪ್ರಶಿಷ್ಯರೂ ಬಾಗೇಪಲ್ಲಿ ಶೇಷದಾಸರ ಶಿಷ್ಯರೂ "ಶ್ರೀನಿಧಿಮೋಹನವಿಠಲಾಂ"ಕಿತರೂ ದೇವಸ್ಥಾನದ ನಿರ್ಮಾಣದಲ್ಲಿ ವಿಶೇಷ ಶ್ರಮವಹಿಸಿದವರೂ ಆದ ಶಾಮದಾಸರನ್ನು ಪೂಜಾದಿ ಕೈಂಕರ್ಯಗಳಿಗೆ ನೇಮಿಸಿದರು.

ಕ್ರಿ.ಶ. ೧೯೪೦ರ ಏಪ್ರಿಲ್ ೧೫ರಂದು ದಾಸರಿಗೆ ದೇಹದಲ್ಲಿ ಅಸ್ವಸ್ಥತೆ ತೋರಿ ಮಾರನೆ ದಿನ ಅಂದರೆ ಶಾ.ಶ. ೧೮೬೨ನೇ ವಿಕ್ರಮನಾಮ ಸಂವತ್ಸರದ ಉತ್ತರಾಯಣ ಚೈತ್ರ ಶುದ್ಧ ಶ್ರೀರಾಮನವಮಿ ಮಂಗಳವಾರ (ತಾ.೧೬_೪_೧೯೪೦) ದಂದು ಮಧ್ಯಾಹ್ನ ಸುಮಾರು ಹನ್ನೆರಡು ಘಂಟೆ ಸಮಯಕ್ಕೆ ತಮ್ಮ ೭೫ನೇ ವರ್ಷದಲ್ಲಿ ನಿರ್ಯಾಣ ಹೊಂದಿದರು. ತಮ್ಮ ನಿರ್ಯಾಣದ ಬಗ್ಗೆ ಅನೇಕರಿಗೆ ಮೊದಲೇ ಸೂಚನೆ ಕೊಟ್ಟಿದ್ದರೆಂದು ತಿಳಿಯುತ್ತದೆ.

ದಾಸರದು ಭವ್ಯವಾದ ವ್ಯಕ್ತಿತ್ವ, ಎತ್ತರವಾದ ನಿಲುವು , ದೀರ್ಘ ಬಾಹುಗಳು, ವಿಶಾಲವಾದ ಎದೆ, ಅಗಲವಾದ ಹಣೆ, ಎದ್ದು ಕಾಣುವಂತೆ ಧರಿಸಿದ ಅಂಗಾರಾಕ್ಷತೆಗಳು. ತಲೆಗೆ ಕಾವಿ ಬಣ್ಣದ ಮುಂಡಾಸು, ಕಾವಿಯ ನಿಲುವಂಗಿ, (ಕಫಿನಿ) ದಪ್ಪವಾದ ಮಣಿಗಳಿಂದಾದ ತುಳಸಿ, ಕಮಲಾಕ್ಷಿ ಮಾಲೆಗಳು, ಕೈಯಲ್ಲಿ ದಂಡ, ಅವಧೂತರಂತೆ ಸಂಚಾರ. ಸಾಧಾರಣವಾಗಿ ಯಾವಾಗಲೂ ಕಣ್ಣು ಮುಚ್ಚಿಕೊಂಡೇ ಇರುತ್ತಿದ್ದರು. ಈ ವೇಷಭೂಷಣಗಳನ್ನು ಅವರು ತಮ್ಮ ೪೦_೪೫ರ ವಯಸ್ಸಿನಲ್ಲಿ ಆರಂಭಿಸಿ ಕೊನೆಯವರಗೂ ನಡೆಸಿಕೊಂಡು ಬಂದಂತೆ ತೋರುತ್ತದೆ.

ದಾಸರು ಕಾಲನಿಯಮ ಕಟ್ಟುನಿಟ್ಟಾಗಿ ಪಾಲಿಸುತ್ತಿದ್ದರು. ಗುಪ್ತ ಸೂಕ್ಷ್ಮ ಕರ್ಮಾಸಕ್ತರಾಗಿದ್ದರಿಂದ ಜನರು ಇವರನ್ನು ಕರ್ಮಶೂನ್ಯರೆಂದೇ ತಿಳಿದರು. ದಾಸರು ನಿರಂತರ ಶಾಸ್ತ್ರಾಧ್ಯಯನಶೀಲರಾಗಿದ್ದರು. ಅವರದು ವಿಶಾಲವಾದ ಹೃದಯ. ಮಧ್ವಮತಾನುಯಾಯಿಗಳಾಗಿದ್ದರೂ ಇತರ ಧರ್ಮಗಳ ಬಗ್ಗೆ ಗೌರವವುಳ್ಳವರಾಗಿದ್ದು ತಮ್ಮ ಪ್ರವಚನಗಳಲ್ಲಿ ಅವುಗಳಲ್ಲಿನ ಉತ್ತಮಾಂಶಗಳನ್ನು ಎತ್ತಿ ಹೇಳುತ್ತಿದ್ದರು. ಅಲ್ಲದೇ ಅವರು ನಡೆಸಿದ "ಪರಮಾರ್ಥ ಚಂದ್ರೋದಯ" ಮಾಸ ಪತ್ರಿಕೆಯಲ್ಲೂ ಇದು ವಿಶೇಷವಾಗಿ ಕಂಡು ಬಂದಿದೆ. ಸಮಾಜದಲ್ಲಿ ವ್ಯಕ್ತಿಗಳ ಸ್ಥಾನ_ಮಾನ, ಜಾತಿ_ಮತ ಇತ್ಯಾದಿಗಳನ್ನು ಲಕ್ಷಿಸದೆ ಎಲ್ಲರಿಗೂ ತಾವು ಸಮೀಪರಾಗಿದ್ದು ಉಪದೇಶ ನೀಡುತ್ತಿದ್ದದ್ದು ಅವರ ಮನೋವೈಶಾಲ್ಯ ಮತ್ತು ದೂರದೃಷ್ಟಿಗಳನ್ನು ಸೂಚಿಸುತ್ತದೆ.

ದಾಸರ ಜೀವನ ಮಹಿಮೆ, ಕಾರ್ಯಸಾಧನೆ ಮೊದಲಾದವುಗಳನ್ನು ಅವರ ಪ್ರಶಿಷ್ಯರೂ ಅವರಿಗೆ ಅತ್ಯಂತ ಪ್ರೀತ್ಯಾಸ್ಪದರೂ ದಾಸರ ಪರಮಾನುಗ್ರಹ ಪಾತ್ರರೂ ಆದ ತಂದೆವೆಂಕಟೇಶವಿಠಲದಾಸರು ಈ ಮುಂದಿನ ವಾರ್ಧಕಷಟ್ಪದಿ-ಉದಯರಾಗದಲ್ಲಿ ಸಮಗ್ರವಾಗಿ ಚಿತ್ರಿಸಿದ್ದಾರೆ.

**ಉದಯರಾಗ-ವಾರ್ಧಕಷಟ್ಪದಿ**

ವಂದಿಸುವೆ ಶ್ರೀ ತಂದೆಮುದ್ದು ಮೋಹನಗೆ ಪ

ಮಂದಜನಮಂದಾರ ಸ್ಕಂದಾಂಶಭವಗೆ ಅ.ಪ

ದೇವರಾಯನದುರ್ಗ ಪಾವನ್ನಕ್ಷೇತ್ರವದ ।
ರಾವರಣದೊಳಗಿರುವ ಗಾವ ನರಸೀಪುರದಿ ।
ದೇವದ್ವಿಜರಾರಾಧನಾ ವಿತರಣದಿ ಮಾಳ್ಪ
ಭೂವಿಬುಧ ಶೇಷಪ್ಪಗೇ ।
ಭಾವಜಾರಿಜಟಾವಿರಾಜಿತಾತ್ಮಕನಂತೆ ।
ಭಾವಜಾತಸಮಾನದೇವನಾಗವತರಿಸಿ ।

ಭೂವಲಯದಲಿ ಮೆರೆದ ಸುಬ್ಬರಾಯಾಖ್ಯದಲಿ
   ಕೋವಿದೋತ್ತಂಸ ಸಾಂಶ ೧

ಬಾಲ್ಯಮಾರಭ್ಯ ಹರಿಲೀಲಾನುವಾದ ।
ತಲ್ಲೀನಮಾನಸರಾಗ ತೂಳಿದಾತ್ಮಜ್ಞಾನ।
ದೇಳಿಗೆಯ ಸುಖದಿ ಗೋನಾಳಸೆಲೆಯುಬ್ಬಿ
   ಪುಳಕಾವಳಿಯ ದೃಗ್ಬಾಷ್ಪದಿ
।ಗಾಳಿದೇವಸುಸಮಯನೀಲಾಂಬುದಾರಾವ ।
ಕೇಳಿ ಮೈಮರೆತುಲಿವ ನೀಲಕಂಠನ ಪರಿಯೊ ।
ಳೇಳೆಂಟುಮೂರರಲಿ ಮೂಲವ್ಯಾಪ್ತಿಯ ಕಂಡ
   ಲೌಕಿಕಾತ್ಮಕ್ರಿಯೆಯಲಿ ೨




ವನಗುಹೆಯನವಧೂತತನದಿ ತಿರುಗುವನೊಮ್ಮೆ ।
ಮನೆಯೊಳಾತ್ಮೀಯರನುಸರಿಸಿ ತಿರುಗುವನೊಮ್ಮೆ ।
ಕನಸು ಕಂಡವರಂತೆ ಕನವರಿಪನೊಮ್ಮೊಮ್ಮೆ
   ಮೌನಪಿಡಿವನು ಮಲಗನು ।
ವನಿತೆಯನು ತಕ್ಕೈಸಿ ಸರಸವಾಡುವನೊಮ್ಮೆ ।
ಧನಕನಕಸಂಹನನ ತೃಣಗಣಿಪನೊಮ್ಮೊಮ್ಮೆ ।
ತನುಸ್ಮರಣೆ ಹಾರಿ ತನತನಗೆ ನಗುನಗುತಳುತ
   ದಿನರಾತ್ರಿಗಳ ಕಳೆವನು ೩

ಪರಮಹರಿಭಕ್ತರೀಪರಿ ಬಲ್ಲರಲ್ಲದಲೆ ।
ನೆರೆಹೊರೆಯ ಮೂಢರಿದ ಪರಿಹಾಸ್ಯಮಯವೆಂದು ।
ತರತರದ ಯುಕ್ತಿಗಳ ಕಲ್ಪಿಸುತ ತರಳನನು
   ಸರಿಮಾಡಲನುವಾಗಿರೆ ।
ಕರಿಗಿರಿಯ ನರಹರಿಯ ವರರಥೋತ್ಸವ ನೆವದಿ ।
ವರ ಮುದ್ದುಮೋಹನ್ನ ದಾಸಾರ್ಯರೈತಂದು।

ಕರುಣದೊಲನುಗ್ರಹಿಸಿ ಮಂತ್ರಾಂಕಿತವ ಕೊಟ್ಟು
ಪರತತ್ವ ಬಿತ್ತರಿಸಲು ೪

ಶಾಂತರಸಪ್ರಕ್ಷಾಳಿತಾಂತರಂಗನು ಶಿಖರಿ ।
ಕಾಂತಾರ ಪರಿಭ್ರಮಣ ಚಿಂತನೆಯನು ಬಿಟ್ಟು ಏ ।
ಕಾಂತದಲಿ ಹೃದಯಾಖ್ಯನಂತದಲಿ ಮಿನುಗುತಿಹ
ಶಾಂತೀಶನನು ಕಾಣುತ ।
ಮಂತ್ರಸಿದ್ಧಿಯ ಪಡೆದು ಅಂತರ್ಮುಖಿತ್ವದಿಂ ।
ಭ್ರಾಂತಜನರನು ಭಕ್ತಿಪಂಥಾನದೊಳು ತಂದು ।
ಸಂತಗುರ್ವಾಜ್ಞಾನುವರ್ತಿ ನೈರಂತರದಿ ಅಂಕಿತಾವಾಪಗೈದು ೫

ದಶಪ್ರಮತಿದುಗ್ಧಾಬ್ಧಿಶಶಿಬಿಂಬವೆಂದೆನಿಸಿ ।
ದಶಶತಾಧಿಕಶಿಷ್ಯ ಪ್ರಸರ ಪರಿವೃತನಾಗಿ ।
ದಶದ್ವಿವಿಂಶತಿವರ್ಷ ದಾಸಕೂಟಾಖ್ಯ ಸಭೆ
ಎಸೆವೇಭಗಿರಿಯೊಳ್ನಡೆಸಿ ।
ವಸುಧೆಯೊಳು ಹರಿಕಥಾಮೃತಸಾರದ ಸಮಾನ ।
ಹಸಗಂಪ ದಶದಿಕ್ಕಿಗೊಸೆದು ಪ್ರಸರಣ ಮಾಡಿ ।
ಹೊಸಕಳೆಯ ಪರಮಾರ್ಥನಿಶಿಕರೋದಯದಿ ಹೃನ್ಮುಸುಕಿನಲಿ
ಹರಿಯ ತೋರ್ದ ೬

ಪ್ರಾಣಪ್ರತೀಕವನು ಕರಿಗಿರಿಯೊಳುರೆ ಮೆರೆದು ।
ಪ್ರಾಣಪತಿಪೂಜಾವಿಧಾನ ಶಿಷ್ಯರಿಗೊರೆದು
ಕೇಣ ತೊರೆದಾತ್ಮಾಭಿಜ್ಞಾನ ಸಂಪೂರ್ಣತೆಯ ಸಾನುರಾಗದಲಿ ನೆರೆದು
ಮಾಣದಲೆ ರಸಹಾಸ್ಯವಾಣಿಯಲಿ ಪರತತ್ತ್ವ
ಧೇನುದುಗ್ದೋಹನದ ಜ್ಞಾನಕ್ಷೀರವ ಪಾದ ।
ರೇಣಿನವರಿಗೆ ಕುಡಿಸಿ ಆನಂದವನು ಪಡಿಸಿ
ಮಾನನೀಯರ ಮಾಡಿದ ೭

ಅಮಮ ಅದ್ಭುತಮಿವರ ಕ್ರಮ ಬಲ್ಲವರಾರು।
ಭ್ರಮಿತರಂತಿರ್ದು ಹೃತ್ಕಮಲದಲಿ ಹರಿಕಾಂಬ ।
ರಮಲೇರಿದವರಂತೆ ತಾಮಸವ ತೋರ್ದು
ಪರಬ್ರಹ್ಮಜಿಜ್ಞಾಸಪರರು ।
ಅಮಿತಭುಕ್ ಪ್ರತಿನಿತ್ಯ ನಿಯಮೋಪವಾಸಿಗಳು ।
ನಿಮಿಷ ತೆರೆಯರು ಸಾರ್ವಪ್ರಮಿತರಾಗೀಕ್ಷಿಪರು ।
ಮಮತೆಯನು ತೋರಿದರು ಸಮದಮಾನ್ವಿತರಹರು
ಸುಮನಸರು ಸುಜನಪ್ರಿಯರು ೮

ಮಂದರಿವರಾತ್ಮಾನುಸಂಧಾನವರಿಯದಲೆ ।
ಕುಂದಾಡಲೇನು ದಿವಸಾಂಧ ತಾನರಿಯದಿರೆ ।
ಮಂದಜಾನಂದಸಂದೋಹ ತೋರದೆ
ದಿವಸಬಾಂಧವೋದಯ ಕಾಲದಿ ।
ಸಂದ ವಿಕ್ರಮ ರಾಮನವಮಿ ಮಂಗಳವಾರ ।
ಸಿಂಧೂರಗಿರಿ ತಂದೆವೆಂಕಟೇಶವಿಠ್ಠಲನ ।
ಹೊಂದಿದರು ಒಂದಂಶದಿಂದ ನಮ್ಮೆಲ್ಲರನದೆಂದೆಂದು
ಸಲಹುತಿಹರು ೯

ಶ್ರೀ ಸುಬ್ಬರಾಯದಾಸರ ಪೀಳಿಗೆ ಬಗ್ಗೆ ಕೆಲವು ವಿವಾದಾಂಶಗಳಿದ್ದಂತೆ ತೋರುತ್ತದೆ. ಸಾಧಾರಣವಾಗಿ ಇವರು ಪಂಗನಾಮದ ತಿಮ್ಮಣ್ಣದಾಸರ (ವೇಣುಗೋಪಾಲದಾಸರ) ಪರಂಪರೆಗೆ ಸೇರಿದವರೆಂದಿದ್ದರೂ, ದಾಸರ ನೇರ ಪ್ರಪ್ರಥಮ ಶಿಷ್ಯರಾದ ಬಾಗೇಪಲ್ಲಿ ಶೇಷದಾಸರ ಶಿಷ್ಯರೂ ದಾಸರ ಪ್ರಶಿಷ್ಯರೂ ನಿಕಟವರ್ತಿಗಳೂ ಆಗಿದ್ದ ಶಾಮದಾಸರೂ (ಶ್ರೀ ನಿಧಿಮೋಹನವಿಠಲಾಂಕಿತರು) ಸ್ವಹಸ್ತದಲ್ಲಿ ಬರೆದಿಟ್ಟಿರುವ "ಗುರು ಪೀಳಿಗೆ"ಯಲ್ಲಿ ಮೋಹನದಾಸರ ಪರಂಪರೆ ಎಂದಿದೆ. ಈ "ಗುರುಪೀಳಿಗೆ"ಯನ್ನು ಇದೇ ಸಂಪುಟದ ಬಾಗೇಪಲ್ಲಿ ಶೇಷದಾಸರ ಪದಗಳ ಭಾಗದಲ್ಲಿ ಕಾಣಬಹುದು. ಇದಲ್ಲದೆ ಆರ್. ರಾಮಚಂದ್ರರಾಯರು (ತಂದೆವೆಂಕಟೇಶ ವಿಠಲಾಂಕಿತರು) ಆನಗೋಡಿನಲ್ಲಿ ತಮ್ಮ ಪರಮಗುರುಗಳ

ಆಣತಿಯಂತೆ ತತ್ಕಾಲದಲ್ಲಿ ರಚಿಸಿ ಹಾಡಿದ್ದೆಂದು ಹಿಂದೆಯೇ ಕೊಟ್ಟಿರುವ "ತಂದೆ ಮುದ್ದು ಮೋಹನ್ನಾ" ಎಂಬ ಸ್ತೋತ್ರ ಪದದಲ್ಲಿ ಸಹ "ಮೋಹನ್ನ ವಿಠಲರ ವಂಶದೊಳಗುದ್ಭವಿಸಿ" ಎಂದಿರುವುದನ್ನು ಇಲ್ಲಿ ಗಮನಕ್ಕೆ ತರಬಹುದು. ವಿಷಯವು ವಿಮರ್ಶಾರ್ಹವಾಗಿದ್ದು ಹೆಚ್ಚಿನ ಸಂಶೋಧನೆಯ ಅಗತ್ಯವಿದೆಯೆಂದು ತೋರುತ್ತದೆ.

ದಾಸರು ಹೆಚ್ಚಿನ ಕೃತಿಗಳನ್ನೇನು ರಚಿಸಿಲ್ಲ. ಅವರ ಜೀವನದ ಧ್ಯೇಯ, ಸಾಧನೆಯ ಕ್ರಮ ಇತ್ಯಾದಿಗಳೆಲ್ಲವೂ ಸಾಧಕರಿಗೆ ಮಾರ್ಗದರ್ಶಕವಾಗಿ ಅವರು ರಚಿಸಿರುವ "ಚೂರ್ಣಿಕೆ"ಯಲ್ಲಿ ಸಮಗ್ರವಾಗಿ ನಿರೂಪಿಸಲ್ಪಟ್ಟಿವೆ. ದಾಸರು ಕೃತಿ ರಚನೆಗಳಿಗಿಂತ ಹೆಚ್ಚಾಗಿ, ಹಳೇ ಮೈಸೂರು ಪ್ರಾಂತದಲ್ಲಿ ಶಿಥಿಲಗೊಂಡಿದ್ದ ದಾಸ ಪಂಥಕ್ಕೆ ಭದ್ರ ಬುನಾದಿಯನ್ನು ಒದಗಿಸುವುದಕ್ಕೆ ಮೀಸಲಾಗಿಟ್ಟರು, ಬಾಗೇಪಲ್ಲಿ ಶೇಷದಾಸರು, ಮಾರುತೀಶವಿಠಲಾಂಕಿತರಾದ ವಡವಿ ಭೀಮಾಚಾರ್ಯರು, ಪದ್ಮನಾಭದಾಸರೆಂದು ಹೆಸರಾಂತ ಪಲ್ಲಡಂ ಮಾಧವಾಚಾರ್ಯರು ಉರಗಾದ್ರಿವಾಸ ವಿಠಲದಾಸರು, ರಮಾಕಾಂತದಾಸರು, ನಿತ್ಯಾನಂದವಿಠಲ ದಾಸರು, ಗೋಪಾಲಕೃಷ್ಣ ವಿಠಲಾಂಕಿತರಾದ ಅಂಬಾಬಾಯಿ, ಗುರುಗೋವಿಂದವಿಠಲದಾಸರು ಮುಂತಾದ ಅನೇಕ ಸಮರ್ಥ ಶಿಷ್ಯರುಗಳನ್ನು ಸಮಾಜಕ್ಕೆ ಕೊಟ್ಟು, ಅವರ ಮೂಲಕ ಕೃತಿ ರಚನೆಗಳಾಗುವಂತೆ ಅನುಗ್ರಹ ಮಾಡಿ, ದಾಸವಾಙ್ಮಯವನ್ನು ಶ್ರೀಮಂತ ಗೊಳಿಸಿದರು.

ಮುಂದೆ ಯತ್ಯಾಶ್ರಮವನ್ನು ಸ್ವೀಕರಿಸಿದ ಹೃಷಿಕೇಶ ತೀರ್ಥರೆಂದು ಪ್ರಸಿದ್ಧರಾದ ಮಧ್ವಾಂತರ್ಗತವಿಠಲದಾಸರು ಸಹ ಒಬ್ಬ ಮುಖ್ಯ ಶಿಷ್ಯರು. ಸೀತಾಪತಿ ರಾಮವಿಠಲಾಂಕಿತರಾದ ಪ್ರೊದಟೂರಿನ ಹಯವದನರಾಯರು ಗುರುಗಳಿಂದ ಆಜ್ಞಾಪಿತರಾಗಿ ತಮ್ಮ ಪ್ರಾಂತದಲ್ಲಿ ದಾಸಕೂಟ ವಿಸ್ತರಣಾ ಕಾರ್ಯವನ್ನು ಮಾಡಿದ್ದಾರೆ.

ಪ್ರಹ್ಲಾದವರದವಿಠಲಾಂಕಿತರಾದ ಕೃಷ್ಣದ್ವೈಪಾಯನಾಚಾರ್ಯರೆಂಬ ಶಿಷ್ಯರು ಸದಾ ಗುರುಗಳ ಎಡಬಲ ಸೇವೆಯಲ್ಲಿ ನಿರತರಾಗಿದ್ದು ಅವರಿಗೆ ಪ್ರೀತಿಪಾತ್ರರಾಗಿ-ದ್ದರೆಂದು ತೋರಿಬರುತ್ತದೆ.

ದಾಸರು ಒಟ್ಟು ೧೧೬೫ ಅಂಕಿತಗಳನ್ನು ಕೊಟ್ಟಿರುವರೆಂದಿದೆ. ಅಂಕಿತ ಕೊಡುವಾಗ ಅನೇಕರಿಗೆ ಅಂಕಿತ ಪದಗಳನ್ನು ರಚಿಸಿ ಕೊಟ್ಟಿರುತ್ತಾರೆ. ಟಪಾಲು ಮೂಲಕವು ಅಂಕಿತಗಳನ್ನು ಸೂಚಿಸಿದ ಪ್ರಸಂಗಗಳಿವೆ.

ರೈತನು ಬೀಜ ಬಿತ್ತುವಾಗ ಎಲ್ಲ ಬೀಜಗಳೂ ಮೊಳೆಯುವುದಿಲ್ಲ ಎಂಬುದನ್ನು ಚೆನ್ನಾಗಿ ಅರಿತೇ ಹೆಚ್ಚು ಬೀಜಗಳನ್ನು ಬಿತ್ತುತ್ತಾನೆ. ಉತ್ತಮ ಸಂಸ್ಕಾರವನ್ನು ಹೊಂದಿದ ಬೀಜಗಳಷ್ಟೇ ಮೊಳೆತು ಫಲಿಸುತ್ತವೆ. ಮಿಕ್ಕವು ಕಮರಿ ಹೋಗುತ್ತವೆ. ದಾಸರು ವಿಸ್ತೃತವಾದ ಅಂಕಿತೋಪದೇಶವನ್ನು ಇದೇ ಹಿನ್ನೆಲೆಯಲ್ಲಿ ಮಾಡಿದಂತಿದೆ.

ದಾಸರು ಕೊಟ್ಟ ೧೧೬೫ ಅಂಕಿತಗಳ ಪೈಕಿ ಈಗ ಉಪಲಬ್ಧವಿರುವ ೧೦೦೬ ಅಂಕಿತಗಳ ಪಟ್ಟಿಯನ್ನು ಪರಿಶಿಷ್ಟದಲ್ಲಿ ಕಾಣಬಹುದು.

ಗುರುಗಳ ಹಿರಿಯ ಮಗ ಮತ್ತು ಶಿಷ್ಯರಾದ ವರದರಾಜವಿಠಲಾಂಕಿತರಾದ ಎನ್. ವೆಂಕಟರಾಯದಾಸರು ಅನೇಕ ನಿಬಂಧನೆಗಳಿಗೆ ಒಳಪಟ್ಟು ತಮ್ಮ ತಂದೆ ಹಾಗೂ ಗುರುಗಳಾದ ದಾಸರ ಹೆಸರಿನಲ್ಲಿಯೇ ಅಂಕಿತೋಪದೇಶ ಕಾರ್ಯವನ್ನು ಮುಂದುವರೆಸಿ ಶಿಷ್ಯ ಸಂಪತ್ತನ್ನು ಹೆಚ್ಚಿಸಿದರೆಂದು ತಿಳಿದುಬರುತ್ತದೆ.

ದಾಸರು ಬೆಂಗಳೂರಿನ ಸೆಂಟ್ರಲ್ ಜೈಲ್ ಬಂಧಿಗಳಿಗೆ ಧರ್ಮೋಪದೇಶ ಮಾಡುತ್ತಿದ್ದುದನ್ನು ಹಿಂದೆಯೇ ಹೇಳಲಾಗಿದೆ. ಅವರ ಪತಿತೋದ್ಧಾರ ಕಾರ್ಯ ಶಕ್ತಿಯ ದ್ಯೋತಕವಾಗಿ ಈ ಮುಂದಿನ ಒಂದೆರಡು ಪ್ರಸಂಗಗಳನ್ನು ಉಲ್ಲೇಖಿಸುವುದು ಅಗತ್ಯ.

ಪಲ್ಲಡಂ ಮಾಧವಾಚಾರ್ಯರೆಂಬುವರ ಹೆಸರನ್ನು ಹಿಂದೆಯೇ ಉಲ್ಲೇಖಿಸಲಾಗಿದೆ. ಅವರು ಒಬ್ಬ ಉದ್ದಾಮ ಪಂಡಿತ ಗೃಹಸ್ಥರಾಗಿದ್ದು, ಯತ್ಯಾಶ್ರಮ ವಹಿಸಿ ಆಶ್ರಮ ಧರ್ಮಗಳನ್ನು ನಡೆಸಲಾಗದೆ ಪುನಃ ಗೃಹಸ್ಥಾಶ್ರಮಿಗಳಾಗಿ ಹಿಂದಿನ ಪತ್ನೀ ಪುತ್ರರೊಂದಿಗೆ ಸಂಸಾರ ಮಾಡಲು

ಪ್ರಾರಂಭಿಸಿದರು. ಇದರಿಂದ ಸ್ವಜನ ಬಂಧು ಮಿತ್ರರಿಂದಲೂ ಗುರುಗಳಾದ ಉತ್ತರಾದಿಮಠದ ಶ್ರೀ ಸತ್ಯಧ್ಯಾನತೀರ್ಥ ಶ್ರೀಪಾದಂಗಳವರಿಂದಲೂ ಬಹಿಷ್ಕೃತರಾಗಿ ಖಿನ್ನರಾಗಿದ್ದರು. ದಾಸರಲ್ಲಿ ಅತ್ಯಂತ ಉದಾಸೀನಭಾವ ತಳೆದಿದ್ದ ಇವರು ದಾಸರ ಜ್ಞಾನದ ಮಟ್ಟ ಮಹಿಮೆ ಇತ್ಯಾದಿಗಳನ್ನು ಪ್ರಾಸಂಗಿಕವಾಗಿ ತಿಳಿದು ದಾಸರಲ್ಲಿ ಕ್ಷಮೆಯಾಚಿಸಿ ತಮ್ಮ ಆಶ್ರಮ ತ್ಯಾಗ ಇತ್ಯಾದಿಗಳಿಗೆ ಪ್ರಾಯಃಶ್ಚಿತ್ತವನ್ನು ಸೂಚಿಸಲು ಕೇಳಿದರು. ದಾಸರು ಕೃಪೆ ಮಾಡಿ "ಪದ್ಮನಾಭವಿಠಲ" ಎಂಬ ಅಂಕಿತವನ್ನು ಕೊಟ್ಟು ಪಾಪ ಪರಿಹಾರಾರ್ಥ ಶ್ರೀಜಗನ್ನಾಥ ದಾಸರ ಹರಿಕಥಾಮೃತಸಾರಕ್ಕೆ ಕನ್ನಡದಲ್ಲಿ ವ್ಯಾಖ್ಯಾನ ಬರೆಯಲು ಆದೇಶಿಸಿದರು. ಅದರಂತೆ ಪದ್ಮನಾಭದಾಸರು "ಭಾವ ಪ್ರಕಾಶಿಕೆ" ಎಂಬ ವ್ಯಾಖ್ಯಾನವನ್ನು ಬರೆದಿದ್ದಾರೆ. ಶ್ರೀ ಹರಿಕಥಾಮೃತ ಸಾರಕ್ಕೆ ಇರುವ ವಾಖ್ಯಾನಗಳಲ್ಲಿ ಇದು ಒಂದು ಉತ್ತಮ ಮತ್ತು ಮುಖ್ಯ ವ್ಯಾಖ್ಯಾನವಾಗಿದೆ.

ಪ್ರೊದಟೂರಿನ ಹಯವದನರಾಯರ ಹೆಸರು ಹಿಂದೆಯೇ ಬಂದಿದೆ. ಅವರು ಪ್ರೊದಟೂರಿನಲ್ಲಿ ಒಬ್ಬ ಸುಪ್ರಸಿದ್ಧ ಶ್ರೀಮಂತ ವಕೀಲರಾಗಿದ್ದು ಮಧ್ಯ ವಯಸ್ಸಿನಲ್ಲೇ ಪತ್ನಿ ವಿಯೋಗ ಹೊಂದಿ ಮಕ್ಕಳಿಲ್ಲದೆ, ವಿಷಯಲೋಲುಪರಾಗಿ ವಿಲಾಸಿ ಜೀವನ ನಡೆಸುತ್ತಿದ್ದರು. ಕಾಲ ಕಾರಣ ಸಂಯೋಗದಿಂದ ೧೯೩೩ರಲ್ಲಿ ದಾಸರಿಗೆ ಶರಣಾಗತರಾಗಿ "ಸೀತಾಪತಿರಾಮವಿಠಲ" ಎಂಬ ಅಂಕಿತ ಪಡೆದು ತಮ್ಮ ಪ್ರಾಂತದಲ್ಲಿ ದಾಸಕೂಟ ಸಾಹಿತ್ಯದ ಪ್ರಸಾರಕ್ಕಾಗಿ ನಿಯಮಿತರಾದರು. ತಮ್ಮನ್ನು "ಪಾಮರ", "ಸ್ವಪಚ", "ಚಂಡಾಲ", "ಪ್ರೊದಟೂರಿನ ಅಜಾಮಿಳ" ಇತ್ಯಾದಿಯಾಗಿ ದೂಷಿಸಿಕೊಂಡು ಗುರುಗಳು ತಮಗೆ ಅಂಕಿತೋಪದೇಶ ಮಾಡಿ ಅನುಗ್ರಹಿಸಿ ಕಾರ್ಯ ನಿರ್ದೇಶಿಸಿ ಉದ್ಧರಿಸಿದ್ದಾರೆಂದು ಹೇಳಿಕೊಂಡಿದ್ದಾರೆ.

ಸಮಾಜದ ಅನೇಕ ಗಣ್ಯವ್ಯಕ್ತಿಗಳು ದಾಸರ ಭಕ್ತರೂ, ಅಭಿಮಾನಿಗಳೂ ಆಗಿದ್ದನ್ನು ಹಿಂದೆಯೇ ತಿಳಿಸಿದೆ. ದಾಸರಿಗೆ ಅಪ್ರಾರ್ಥಿತವಾಗಿ ಅನೇಕ ಪ್ರಶಸ್ತಿ ಪತ್ರಗಳು ಬಂದಿವೆ. ದಾಸರಾಯರನ್ನು ಅವರ ಸಮಾಜ ಸೇವೆಯನ್ನು ಪ್ರಶಂಸಿಸಿದವರಲ್ಲಿ ಮುಖ್ಯವಾಗಿ, ಅಬ್ಬೂರು ಕುಂದಾಪುರ ವ್ಯಾಸರಾಯ ಮಠದ ಶ್ರೀಗಳವರು, ಆಸ್ಥಾನ ವಿದ್ವಾನ್ ದೊಡ್ಡಬೆಲೆ ನಾರಾಯಣ ಶಾಸ್ತ್ರಿಗಳು, ಅಣ್ಣು

ರಾಮರಾಯರು, ನಿವೃತ್ತ ಸಿವಿಲ್ ಸರ್ಜನ್ ಬಿ.ಡಿ. ರಾಘವೇಂದ್ರರಾಯರು, ತಿರುಪತಿ ಸಭಾ ಮುಖ್ಯಾಧಿಕಾರಿ ಪ್ರ.ವೈ. ಶ್ರೀನಿವಾಸಾಚಾರ್ಯ, ಬೇಲೂರು ಕೇಶವದಾಸರು, ಧರ್ಮಶಾಸ್ತ್ರ ಪ್ರಾಧ್ಯಾಪಕ ಆನೇಕಲ್ ಶ್ರೀನಿವಾಸಾಚಾರ್ಯ, ಸೋಸಲೆ ಎಸ್. ರಾಮದಾಸರು, ಕಂಜೀವರಂ ಜಗದ್ಗುರು ಶ್ರೀಮದನಂತಾಚಾರ್ಯ ಸ್ವಾಮೀಜಿ, ಮಹಾರಾಜರ ಆಪ್ತ ಕಾರ್ಯದರ್ಶಿ ಎಮ್. ಚಕ್ರವರ್ತಿ, ಹರಿಕಥಾ ವಿದ್ವಾನ್ ಟಿ. ವೆಂಕಣ್ಣದಾಸರು, ವಾಯಿಕರ್ ಕೃಷ್ಣಾಚಾರ್ಯರು, ಪಂಡಿತ ಎಮ್. ಮಲ್ಲಪ್ಪ, ಸುಬೋಧ ರಾಮರಾಯರು ಮೊದಲಾದವರನ್ನು ಹೆಸರಿಸಬಹುದು.

ಮೈಸೂರು ಶ್ರೀಮನ್ ಮಹಾರಾಜರ ಆಪ್ತ ಕಾರ್ಯದರ್ಶಿಗಳಾಗಿದ್ದ ಅಟ್ಯಾಚಿ ವೆಂಕಟರಾಯರು (ಜಯೇಶವಿಠಲಾಂಕಿತರು) ದಾಸರ ಸಮಕಾಲೀನರಾಗಿದ್ದು, ಅವರಲ್ಲಿ ವಿಶೇಷ ಗೌರವ ಭಾವವನ್ನು ಹೊಂದಿದ್ದರು. ವೆಂಕಟರಾಯರ ಮಗಳು ತಂದೆಯ ಆದೇಶದಂತೆ ದಾಸ ದಂಪತಿಗಳನ್ನು ತಮ್ಮೂರಾದ ಮದರಾಸಿಗೆ ಕರೆದುಕೊಂಡು ಹೋಗಿ ಅಲ್ಲಿ ದಾಸರಾಯರಿಂದ ಶ್ರೀ ಹರಿಕಥಾಮೃತಸಾರ ಪ್ರವಚನ ಮಂಗಳ ಮಾಡಿಸಿ ವಿಶೇಷ ಮರ್ಯಾದೆ ಮಾಡಿ ಕಳುಹಿಸಿಕೊಟ್ಟರೆಂದು ತಿಳಿಯುತ್ತದೆ.

ದಾಸರ ಅಂಶಾಂಶಿ ವಿಚಾರದಲ್ಲಿ ಭಿನ್ನಾಭಿಪ್ರಾಯಗಳಿದ್ದು ಕೆಲವರು ಅವರನ್ನು ಶೇಷಾಂಶರೆಂದೂ ಮತ್ತೆ ಕೆಲವರು ಸ್ಕಂದಾಂಶರೆಂದೂ ಹೇಳಿರುವುದಿದೆ. ಇದು ಅವರವರ ಅನುಭವ, ಭಾವುಕತೆ ಇವುಗಳಿಗೆ ಸಂಬಂಧಿಸಿದ್ದಾದ್ದರಿಂದ ಆ ಬಗ್ಗೆ ಉಲ್ಲೇಖ ಮಾತ್ರ ಮಾಡಲಾಗಿದೆ.

ಈ ಸಂಪುಟದ ಶ್ರೀ ತಂದೆಮುದ್ದುಮೋಹನದಾಸರಿಗೆ ಸಂಬಂಧಪಟ್ಟ ಭಾಗವನ್ನು ಸಿದ್ಧಗೊಳಿಸಲು ದಾಸರ ಮುಖ್ಯ ಶಿಷ್ಯರುಗಳಾದ ಶ್ರೀ ರಮಾಕಾಂತ-ದಾಸರು ಮತ್ತು ಶ್ರೀ ಗುರುಗೋವಿಂದ ದಾಸರುಗಳು ರಚಿಸಿರುವ "ಪರಮಪ್ರಿಯ ಸುಬ್ಬರಾಯದಾಸರು" ಎಂಬ ಗ್ರಂಥದ ಸಹಾಯವನ್ನು ತೆಗೆದುಕೊಳ್ಳಲಾಗಿದೆ. ಇದಕ್ಕೆ ತಮ್ಮ ಅನುಮತಿಯಿತ್ತು ಸಹಕರಿಸಿದ ಗುರುಕೃಪಾ ಗ್ರಂಥಮಾಲೆಯ

ವ್ಯವಸ್ಥಾಪಕರಿಗೂ, ಅನೇಕ ಸೂಕ್ತ ಸಲಹೆಗಳನ್ನಿತ್ತು, ಸಹಕರಿಸಿದ ದಾಸರ ಮೊಮ್ಮಕ್ಕಳಾದ ಶ್ರೀ ಎನ್.ವಿ. ಸುಂದರರಾಯರಿಗೆ ನಮ್ಮ ಕೃತಜ್ಞತಾಪೂರ್ವಕ ವಂದನೆಗಳು.

## ಬಾಗೇಪಲ್ಲಿ ಶ್ರೀ ಶೇಷದಾಸರು

'ಪರಮಪ್ರಿಯ'ಸ್ಯ ಪ್ರಪ್ರಥಮ ಶಿಷ್ಯಂ
ಪರಮ ಕರುಣಾ ಪರಿಪೂರಿತಂ
ಪ್ರಾಣನಾಥಪರಾಬ್ಜ ಮಧುಪಂ
ಶ್ರೀಶೇಷದಾಸಗುರುಂಭಜೇ ॥

ಕನ್ನಡದ ದಾಸರ ಪದಗಳನ್ನು ಕೇಳುವ ಹವ್ಯಾಸವಿರುವವರಲ್ಲಿ "ರಮಾ ಸಮುದ್ರನ ಕುಮಾರಿ ನಿನ್ನ ಸರಿ ಸಮಾನರ್ಯಾರಮ್ಮಾ" ಎಂಬ ಪದವನ್ನು ಕೇಳದಿರುವವರು ಅತಿ ವಿರಳ. ಆದರೂ ಅದರ ಕರ್ತೃಗಳು ಬಹಳ ಮಟ್ಟಿಗೆ ಅಜ್ಞಾತರಾಗಿಯೇ ಉಳಿದಿದ್ದಾರೆ. ಅವರೇ ಶ್ರೀ ಬಾಗೇಪಲ್ಲಿ ಶೇಷದಾಸರು.

ಶ್ರೀ ದಾಸರ ಸ್ಥಳ ತುಮಕೂರು ಜಿಲ್ಲೆಯ ದೇವರಾಯನದುರ್ಗದ ಬಳಿ ಇರುವ ಇರಕಸಂದ್ರ ಷಾಷ್ಠಿಕಸದ್ವಂಶ ವಿಶ್ವಾಮಿತ್ರಗೋತ್ರಕ್ಕೆ ಸೇರಿದ ಸೋಸಲೆ ಶ್ರೀ ವ್ಯಾಸರಾಜ ಮಠದ ಶಿಷ್ಯರಾದ ನರಸಣ್ಣ_ಮಹಾಲಕ್ಷಮ್ಮ ದಂಪತಿಗಳಲ್ಲಿ ಶೇಷಗಿರಿ ನಾಮಕರಾದ ದಾಸರು ಸುಮಾರು ಕ್ರಿ.ಶ.೧೮೬೫ರಲ್ಲಿ ಜನಿಸಿದರು. ಪ್ರೀತಿಗಾಗಿ ಎಲ್ಲರೂ ಇವರನ್ನು ಶೇಷಣ್ಣನೆಂದು ಕರೆಯುವುದೇ ವಾಡಿಕೆಯಾಗಿತ್ತು. ಕನ್ನಡ ಮತ್ತು ಸಂಸ್ಕೃತಗಳಲ್ಲಿ ಪ್ರಾಥಮಿಕ ಮಟ್ಟ ದಾಟುವುದರಲ್ಲಿಯೇ ಶೇಷಣ್ಣನವರ ವಿದ್ಯಾಭ್ಯಾಸ ಮುಕ್ತಾಯವಾದಂತೆ ತೋರುತ್ತದೆ.

ಶ್ರೀ ಶೇಷಣ್ಣನವರು ಸುಮಾರು ೧೫–೧೬ನೇ ವಯಸ್ಸಿನಲ್ಲಿಯೇ ಮನೆಬಿಟ್ಟು ಏಕಾಂಗಿಗಳಾಗಿ ದೇವರ ಧ್ಯಾನ, ಭಜನೆ ಮಾಡುತ್ತ ಅವಧೂತರಂತೆ ಊರೂರು ಅಲೆಯಲು ಪ್ರಾರಂಭಿಸಿದರು. ಆವಾಗಲೇ ಹೇಗೋ ಯಾರಿಂದಲೋ

ಹರಿಕಥಾಕೀರ್ತನ ಕತೆಯನ್ನು ಅಭ್ಯಾಸ ಮಾಡಿದರು. ಶೇಷಣ್ಣನವರು ತಮ್ಮ ಸಂಚಾರಕ್ರಮದಲ್ಲಿ ೧೮೯೦ರ ಸುಮಾರಿಗೆ ಕೋಲಾರ ಜಿಲ್ಲೆಯ ಬಾಗೇಪಲ್ಲಿಗೆ ಬಂದು ಅಲ್ಲಿ ಶ್ರೀ ವೆಂಕಪ್ಪಾಚಾರ್ ಮತ್ತು ಕಾವೇರಮ್ಮ ಎಂಬ ಗೌತಮ ಗೋತ್ರಕ್ಕೆ ಸೇರಿದ ಶ್ರೋತ್ರಿಯ ದಂಪತಿಗಳ ಮನೆಯಲ್ಲಿ ಕೆಲಕಾಲ ತಂಗಿದಂತೆ ಕಾಣುತ್ತದೆ. ಶೇಷಣ್ಣನವರ ನಡವಳಿಕೆಯನ್ನು ಮೆಚ್ಚಿಕೊಂಡ ಅವರು ವೆಂಕಮ್ಮನೆಂಬ ಸುಪುತ್ರಿಯನ್ನು ಶೇಷಣ್ಣನವರಿಗೆ ಕೊಟ್ಟು ಲಗ್ನ ಮಾಡಿದರು. ಅಂದಿನಿಂದ ಬಾಗೇಪಲ್ಲಿಯೇ ಶೇಷಣ್ಣನವರ ಮುಖ್ಯ ಕಾರ್ಯರಂಗವಾಯಿತು. ಆದರೂ ಸಂಚಾರವೇನೂ ಕಡಿಮೆಯಾಗದೆ, ತಿಂಗಳುಗಟ್ಟಲೆ ಹೊರಗಿರುತ್ತಿದ್ದರಂತೆ. ಹೋದಲ್ಲೆಲ್ಲ ಹರಿಕಥಾ ಕಾಲಕ್ಷೇಪಗಳನ್ನೂ ನಡೆಸುತ್ತಿದ್ದರು. ಅನೇಕ ಕಥಾಪ್ರಸಂಗಗಳನ್ನು ಸಂಪೂರ್ಣವಾಗಿ ತಾವೇ ಸ್ವಂತವಾಗಿ ರಚಿಸಿಕೊಂಡಿದ್ದರಂತೆ. ಸಂಪ್ರದಾಯದ ಹಾಡುಗಳನ್ನು ಹೋಲುವ ಇವರ ಅನೇಕ ಪದಗಳು ಹರಿಕಥಾ ಪ್ರಸಂಗಗಳಾಗಿಯೇ ರಚಿಸಿದವುಗಳೆಂದು ಊಹಿಸಬಹುದಾಗಿದೆ. ದಾಸರ ಮೊದಲ ಅಂಕಿತ ಶೇಷವಿಠಲ ಪ್ರಾಯಶಃ ಅಂತಃಪ್ರೇರಣೆಯಿಂದ ತಾವೇ ಇಟ್ಟುಕೊಂಡದ್ದು. ದಾಸರು ಆಗಿನಕಾಲದಲ್ಲಿದ್ದ ಪ್ರಸಿದ್ಧ ಕೀರ್ತನಕಾರರಲ್ಲೊಬ್ಬರಾಗಿದ್ದರು. ಹೀಗೆ ಇರಕಸಂದ್ರದ ಶೇಷಗಿರಿ – ಶೇಷಣ್ಣನವರು ಬಾಗೇಪಲ್ಲಿ ಶೇಷದಾಸರೆಂದೇ ಪ್ರಸಿದ್ಧರಾದರು.

ದೇವರಾಯನದುರ್ಗದ ಶ್ರೀ ಭೋಗನರಸಿಂಹಸ್ವಾಮಿ ದಾಸರ ಮನೆದೇವರು. ದಾಸರು ಆಗಾಗ್ಗೆ ತಿರುಪತಿ ಮತ್ತು ದೇವರಾಯನದುರ್ಗಕ್ಕೆ ಹೋಗಿಬರುತ್ತಿದ್ದರಂತೆ. ಒಂದೆರಡು ವರ್ಷ ಕಾಲ ತಿರುಪತಿಯಲ್ಲಿ ವಾಸ್ತವ್ಯಮಾಡಿದ್ದಂತೆಯೂ ತೋರುತ್ತದೆ. ಅವರ ಬೀಗರಾದ ಗುಡಿಬಂಡೆ ವ್ಯಾಸಾಚಾರ್ಯರು (ಮಗ ಶ್ರೀ ಗುರುರಾಜಾ-ಚಾರ್ಯರ ಮಾವ) ಸಹ ಆಗಾಗ ಅವರ ಜೊತೆ ಸಂಚಾರ ಮಾಡುತ್ತಿದ್ದರೆಂದು ತಿಳಿಯುತ್ತದೆ. ಶ್ರೀದಾಸರು ದೇವರಾಯನದುರ್ಗದ ರಥೋತ್ಸವಕ್ಕಂತೂ ತಪ್ಪದೆ ಪ್ರತಿ ವರ್ಷವೂ ಹೋಗುತ್ತಿದ್ದರು. ಇಂತಹ ಒಂದು ಸಂದರ್ಭದಲ್ಲಿ ದಾಸರಿಗೆ ಶ್ರೀ ತಂದೆಮುದ್ದುಮೋಹನ ವಿಠಲಾಂಕಿತರಾದ ದೇವರಾಯನದುರ್ಗದ "ಪರಮಪ್ರಿಯ" ಶ್ರೀ ಸುಬ್ಬರಾಯ ದಾಸರ ಸಮಾಗಮವಾಯಿತು. ಆಗ ಅವರಿಬ್ಬರ

ನಡುವೆ ನಡೆದಿರಬಹುದಾದ ಸಂಭಾಷಣೆಯನ್ನೂ, ಅಂಕಿತೋಪದೇಶದ ಪ್ರಸಂಗವನ್ನೂ ಶ್ರೀ ಗುರುಗೋವಿಂದವಿಠಲದಾಸರು ಕ್ರಿ.ಶ.೧೯೬೫ರಲ್ಲಿ ಪ್ರಕಾಶಿಸಿರುವ "ಪರಮಪ್ರಿಯ ಸುಬ್ಬರಾಯದಾಸರು" ಎಂಬ ಪುಸ್ತಕದಲ್ಲಿ ಸ್ವಾರಸ್ಯವಾಗಿ ವರ್ಣಿಸಲಾಗಿದೆ. ಅಂತೂ ಶ್ರೀ ಪ್ಲವನಾಮ ಸಂವತ್ಸರದ (ಕ್ರಿ.ಶ.೧೯೦೨) ಮಾಘಶುದ್ಧ ದಶಮಿ ಸೋಮವಾರದಂದು ಶ್ರೀ ಸುಬ್ಬರಾಯ-ದಾಸರು ಶ್ರೀ ಶೇಷದಾಸರಿಗೆ ವಿಧ್ಯುಕ್ತವಾಗಿ ಉಪದೇಶ ಮಾಡಿ 'ಪ್ರಾಣನಾಥ ವಿಠಲ' ಎಂಬ ಅಂಕಿತ ಪ್ರದಾನ ಮಾಡಿ ಅವರನ್ನು ತಮ್ಮ ಪ್ರಪ್ರಥಮ ಶಿಷ್ಯರನ್ನಾಗಿ ಸ್ವೀಕಾರ ಮಾಡಿದರು. ಅಂಕಿತಪದ ಈ ಮುಂದಿನಂತಿದೆ.

ಪ್ರಾಣನಾಥ ವಿಠಲನೇ ಸಲಹೊ ಇವನಾ ಪ

ಮಾನಾಭಿಮಾನಕೆ ಒಡೆಯನೆಂದೆನಿಸಿ ಸಿರಿ ಅ.ಪ

ಮಾಡಬಾರದ ಕಾರ್ಯ ಮಾಡಿ ಇದ್ದರು ಇವನ
ರೂಢಿಯೊಳು ಕೈಬಿಡದೆ ಸಲಹಬೇಕೊ
ಕಾಡಬ್ಯಾಡಿವನನ್ನು ಒಡೆಯ ಸಿರಿ ನರಹರಿಯೆ
ಜೋಡಿಸಿ ಕರಗಳನು ಬೇಡಿಕೊಂಬುವೆ ನಿನಗೆ ೧

ಹರಿಗುರುಗಳಲಿ ಸದ್ಭಕ್ತಿ ಹಿರಿದಾಗಿ ಇರಲೆಂದು
ಹರಸಬೇಕಿವನ ನೀ ಹರುಷದಿಂದ
ಸಿರಿಯರಸ ಈ ಕಾರ್ಯ ಭರದಿಂದ ಮಾಡಲು
ಕರುಣವಾರಿಧಿ ಎಂಬ ನುಡಿಸಿದ್ಧವಾಗುವುದೋ ೨

ಹೀಗೆಂದು ಪ್ರಾರ್ಥಿಸುವೆ ಭೋಗಿ ಶಯನನೆ ನಿನಗೆ
ಬಾಗಿ ಕರಗಳ ಮುಗಿವೆ ಭಾಗ್ಯಪುರುಷಾ
ಯೋಗಿವಂದಿತ ತಂದೆಮುದ್ದುಮೋಹನವಿಠಲ
ಜಾಗು ಮಾಡದೆ ಇವನ ಕರುಣಿಸೋ ಸ್ವಾಮಿ ೩

ಶ್ರೀ ದಾಸರ ಹೆಸರು "ಶೇಷ" ನಾದರೂ ಸ್ವಭಾವ ಅತಿ ಶಾಂತ, ನಮ್ರ, ಅಣ್ಣಯ್ಯ, ಅಪ್ಪಯ್ಯ, ಅಮ್ಮಯ್ಯ ಎಂದು ಸೇರಿಸದೆ ಚಿಕ್ಕಮಕ್ಕಳನ್ನೂ ಸಹ ಅವರು ಎಂದೂ ಸಂಬೋಧಿಸಿದವರೇ ಅಲ್ಲವಂತೆ!

ಶ್ರೀ ಶೇಷದಾಸರಿಗೆ ಒಬ್ಬ ಮಗ ಶ್ರೀಗುರುರಾಜಾಚಾರ್ಯರು ಮತ್ತು ಇಬ್ಬರು ಹೆಣ್ಣುಮಕ್ಕಳು. ಲಕ್ಷ್ಮಮ್ಮ ಮತ್ತು ಗೋದಾವರಮ್ಮ. ಗೋದಾವರಮ್ಮನಿಗೆ ಬಾಲ್ಯದಲ್ಲೇ ವೈಧವ್ಯ ಪ್ರಾಪ್ತವಾಗಿ ಸಂತತಿಯಿಲ್ಲ. ಮಿಕ್ಕಿಬ್ಬರ ಸಂತತಿಗಳು ಬೆಳೆದುಬಂದಿವೆ. ದಾಸರ ಮಗ ಶ್ರೀ ಬಾಗೇಪಲ್ಲಿ ಗುರುರಾಜಾಚಾರ್ಯರಿಗೆ ಶ್ರೀ ಸುಬ್ಬರಾಯ-ದಾಸರಿಂದಲೇ "ಶ್ರೀ ಪ್ರಾಣನಾಥಮೋಹನವಿಠಲ" ಎಂಬ ಅಂಕಿತವಾಗಿದೆ.

ಶ್ರೀ ಶೇಷದಾಸರಿಗೆ ಅನೇಕ ಶಿಷ್ಯರುಗಳಿದ್ದ ಹಾಗೆ ತೋರುತ್ತದೆ. ಅವರಲ್ಲೆಲ್ಲ ಶ್ರೀನಿಧಿಮೋಹನವಿಠಲಾಂಕಿತರಾದ ಶ್ರೀ ನಂದಗುಡಿ ಶ್ಯಾಮದಾಸರೇ ಮುಖ್ಯ-ರಾದವರು. ಇನ್ನೊಬ್ಬರು ಶ್ರೀ ವೆಂಕೋಬರಾಯರು. (ಅಂಕಿತಗೊತ್ತಿಲ್ಲ) ಮಿಕ್ಕವರ ಬಗ್ಗೆ ಮಾಹಿತಿ ದೊರೆತಿಲ್ಲ. ದಾಸರು ರಚಿಸಿಕೊಟ್ಟಿರಬಹುದಾದ ಯಾವ ಅಂಕಿತ ಪದಗಳೂ ದೊರೆತಿಲ್ಲ.

ಶ್ರೀ ಶೇಷದಾಸರು ಅತ್ಯಂತ ವೈರಾಗ್ಯಶಾಲಿಗಳು ಮತ್ತು ನಿರ್ಲಿಪ್ತರು. ಇವು ಅವರ ಬಾಲ್ಯದಿಂದಲೇ ಬೆಳೆದು ಬಂದ ಪ್ರವೃತ್ತಿಗಳಂತೆ ತೋರುತ್ತವೆ. ಬಾಗೇಪಲ್ಲಿಯಲ್ಲಿ ದಾನರೂಪವಾಗಿ ಬಂದ ಒಂದು ಮನೆ, ಅಲ್ಪಸ್ವಲ್ಪ ಜಮೀನು ಇದ್ದವು. ತಮಗೆ ಅವಶ್ಯಕವಾಗಿದ್ದಷ್ಟನ್ನು ಮಾತ್ರ ಇಟ್ಟುಕೊಂಡಿದ್ದರು. ಅವರಿಗೆ ಅನೇಕರು ವಿವಿಧ ಸಂದರ್ಭಗಳಲ್ಲಿ ಮನೆ, ಭೂಮಿ ಇತ್ಯಾದಿ ದಾನ ಮಾಡಲು ಬಂದಾಗ ಅವುಗಳನ್ನು ತಾವು ತೆಗೆದುಕೊಳ್ಳದೆ ಇತರರಿಗೆ ಕೊಡಿಸಿರುವುದಾಗಿ ತಿಳಿದುಬರುತ್ತದೆ.

ಶ್ರೀ ಶೇಷದಾಸರು ತಮ್ಮ ಕೊನೆಗಾಲವನ್ನು ಆಗ ಚಿಂತಾಮಣಿಯಲ್ಲಿ ಸರ್ಕಾರೀಕೆಲಸದಲ್ಲಿದ್ದ ತಮ್ಮ ಮಗ ಶ್ರೀ ಗುರುರಾಜಾಚಾರ್ಯರ ಮನೆಯಲ್ಲಿ ಕಳೆಯುತ್ತಿದ್ದರು. ಸುಮಾರು ತಮ್ಮ ಅರವತ್ತನೇ ವಯಸ್ಸಿನಲ್ಲಿ ಕ್ರಿ.ಶ.೧೯೨೪ರ

ಶ್ರೀ ರಕ್ತಾಕ್ಷಿ ಸಂವತ್ಸರದ ಭಾದ್ರಪದ ಶುದ್ಧ ಚತುರ್ದಶೀ ಶುಕ್ರವಾರದಂದು (ತಾ.೧೨.೯.೧೯೨೪) ಅವರ ಗೆಳೆಯ ಶ್ರೀ ಶ್ರೀನಿವಾಸರಾಯರೆಂಬುವರ ಮನೆಯಲ್ಲಿ ಶ್ರೀ ಅನಂತಪದ್ಮನಾಭನ ಪೂಜೆ, ತೀರ್ಥ_ಪ್ರಸಾದ ಮುಗಿಸಿಕೊಂಡು ಬಂದು ಮನೆಯಲ್ಲಿ ದೇವರ ಧ್ಯಾನ ಮಾಡುತ್ತಾ ಕುಳಿತವರು ಹಾಗೆಯೇ ಶ್ರೀಪ್ರಾಣನಾಥ-ವಿಠಲನ ಪಾದಾರವಿಂದಗಳನ್ನು ಸೇರಿದರು.

ಶ್ರೀ ದಾಸರ ಸಮೀಪವರ್ತಿಗಳೂ ಶ್ರೀಸುಬ್ಬರಾಯದಾಸರ ಕಿರಿಯ ಶಿಷ್ಯರಲ್ಲೊಬ್ಬರೂ ಆಗಿದ್ದ ರಂಗೇಶವಿಠಲಾಂಕಿತ ಅರಕೆರೆ ಸಂಜೀವರಾಯರು (ಕ್ರಿ.ಶ. ೧೮೭೫_೧೯೫೪) ಶ್ರೀ ಶೇಷದಾಸರ ನಿರ್ಯಾಣಪದ ರಚಿಸಿದ್ದು, ಅದು ಈ ರೀತಿ ಇದೆ.

ತೆರಳಿ ಪೋದರಿಂದು ಪರಮಪದವನರಸುತ ಪ

ಶಿರೀಶಪುರದ ಸಿರಿ ಶೇಷದಾಸಾರ್ಯರು ಅ.ಪ.

ಸಿರಿಯುಕ್ತ ರಕ್ತಾಕ್ಷಿ ವರುಷ ಭಾದ್ರಪದಸಿತ ।
ವರ ಪೌರ್ಣಿಮಾ ಸಹಿತವಾದ ಕವಿವಾರದಿ ॥
ಸರುನಿಶೆಯೊಳು ಶತತಾರ ನಕ್ಷತ್ರ ಬರುತಿರೆ ।
ನರಹರಿಯ ಚರಣ ಕಾಂಬ ಕಡು ತವಕದಿಂದ ೧

ತಂದೆಮುದ್ದುಮೋಹನದಾಸವರ್ಯರಿಂದ ।
ಕುಂದುರಹಿತವಾದ ಪ್ರಾಣನಾಥವಿಠಲ ॥
ನೆಂದು ಅಂಕಿತೋಪದೇಶವನು ಕೈಗೊಂಡು ।
ಬಂಧುರವಾದನೇಕ ಪದಗಳನು ರಚಿಸಿ ೨

ದಾಸವೃತ್ತಿಕೊಂಡು ದೇಶದೇಶವ ಸುತ್ತಿ ।
ಕಾಸುವೀಸದಾಸೆಗಾಗಿ ಕರವನೀಡದೆ ॥
ಲೇಸುಮಾಡುತಲಿ ಸಚ್ಛಿಷ್ಯರಿಗೆ ತತ್ವೋಪ- ।
ದೇಶವನು ಪರಮಸಂತೋಷದಿಂದ ಗೈದು ೩

ಆಶಾಪಾಶವ ತೊರೆದು ಮೀಸಲು ಮನರಾಗಿ ।
ವಾಸುದೇವನ ನಾಮ ಸೋಸಿನಿಂದ ಭಜಿಸಿ ॥
ಸಾಸುವೆಯಷ್ಟಾದರಾಯಾಸವನು ಪಡದೆ ।
ಈ ಶರೀರ ವಿಶ್ವೇಶನಾಧೀನವೆಂದು ೪

ಅಂಗೋಪಾಂಗವ ಮರೆದು ನಿಸ್ಸಂಗಯುತರಾಗಿ ।
ಕಂಗಳನು ಮುಚ್ಚುತಾ ಭಂಗವಿಲ್ಲದ ಸುಖವ ॥
ಹಿಂಗದೇ ಕೊಡುವಂಥ ಮಂಗಳಾಂಗ ಶ್ರೀ ॥
ರಂಗೇಶವಿಠಲನಂತರಂಗದಿ ನೋಡುತಾ ೫

(ಬಾಗೇಪಲ್ಲಿ: ಭಾಗ್ಯಾರ್ಯಪಲ್ಲಿ (ಲಕ್ಷ್ಮಿಯ ಗಂಡನ ಊರು) ; ಶಿರೀಶಪುರ)

ಶ್ರೀ ಶೇಷದಾಸರ ಶಿಷ್ಯರೂ, ಶ್ರೀನಿಧಿಮೋಹನವಿಠಲಾಂಕಿತರೂ ಆದ ಶ್ರೀ ನಂದಗುಡಿ ಶ್ಯಾಮದಾಸರು ತಮ್ಮ ಸ್ವಹಸ್ತಾಕ್ಷರದಲ್ಲೇ ಬರೆದಿಟ್ಟಿರುವ ''ಗುರುಪೀಳಿಗೆ''ಯು ಈ ಮುಂದಿನಂತಿದೆ.

"ಶ್ರೀನಿಧಿಮೋಹನವಿಠಲ ಪ್ರಸನ್ನ ಶ್ರೀಗುರುಭ್ಯೋನಮಃಹರಿಃ ಓಂ"

**'ಗುರುಪೀಳಿಗೆ'** ಶ್ರೀಪತಿಯನಾಭಿಯಿಂದ ಅಜ ಜನಿಸಿದನು. ಅಜನ ಮಾನಸಪುತ್ರರೇ ಸನಕಾದಿಗಳು. ಸನಕಾದ್ಯರ ಶಿಷ್ಯರೇ ದೂರ್ವಾಸರು. ದೂರ್ವಾಸರ ಶಿಷ್ಯರೇ ಜ್ಞಾನನಿಧಿ ತೀರ್ಥರು. ಜ್ಞಾನನಿಧಿತೀರ್ಥರ ಶಿಷ್ಯರೇ ಗರುಡವಾಹನ ತೀರ್ಥರು. ಗರುಡವಾಹನ ತೀರ್ಥರ ಶಿಷ್ಯರೇ ಕೈವಲ್ಯತೀರ್ಥರು. ಕೈವಲ್ಯತೀರ್ಥರ ಶಿಷ್ಯರೇ ಜ್ಞಾನೇಶ ತೀರ್ಥರು. ಜ್ಞಾನೇಶತೀರ್ಥರ ಶಿಷ್ಯರೇ ಪರತೀರ್ಥರು. ಪರತೀರ್ಥರ ಶಿಷ್ಯರೇ ಸತ್ಯಪ್ರಜ್ಞತೀರ್ಥರು. ಸತ್ಯಪ್ರಜ್ಞತೀರ್ಥರ ಶಿಷ್ಯರೇ ಪ್ರಾಜ್ಞತೀರ್ಥರು. ಪ್ರಾಜ್ಞತೀರ್ಥರ ಶಿಷ್ಯರೇ ಅಚ್ಯುತಪ್ರೇಕ್ಷಾಚಾರ್ಯರು. ಅಚ್ಯುತಪ್ರೇಕ್ಷಾಚಾರ್ಯರ (ಶಿಷ್ಯರೇ) ಕರಕಮಲ ಸಂಜಾತರೇ ನಮ್ಮ ಪೂರ್ಣಪ್ರಜ್ಞರು. ಪೂರ್ಣಪ್ರಜ್ಞರೇ ನಮ್ಮ ಶ್ರೀಮದಾನಂದತೀರ್ಥಗುರುವರ್ಯರು. ಶ್ರೀಮದಾನಂದ–

ತೀರ್ಥರ ಪ್ರಥಮ ಶಿಷ್ಯರೇ ಪದ್ಮನಾಭತೀರ್ಥರು. ಪದ್ಮನಾಭತೀರ್ಥರ ಶಿಷ್ಯರೇ ಲಕ್ಷ್ಮೀಧರತೀರ್ಥರು. ಲಕ್ಷ್ಮೀಧರತೀರ್ಥರ ಶಿಷ್ಯರೇ ಸಂಕರುಷಣತೀರ್ಥರು. ಸಂಕರುಷಣತೀರ್ಥರ ಶಿಷ್ಯರೇ ಪರಶುರಾಮತೀರ್ಥರು. ಪರಶುರಾಮ ತೀರ್ಥರ ಶಿಷ್ಯರೇ ಆದಿರಾಜತೀರ್ಥರು. ಆದಿರಾಜತೀರ್ಥರ ಶಿಷ್ಯರೇ ಸತ್ಯವ್ರತತೀರ್ಥರು. ಸತ್ಯವ್ರತತೀರ್ಥರ ಶಿಷ್ಯರೇ ಸುವರ್ಣವರ್ಣತೀರ್ಥರು. ಸುವರ್ಣವರ್ಣತೀರ್ಥರ ಕರಕಮಲ ಸಂಜಾತರೇ ನಮ್ಮ ಶ್ರೀಪಾದರಾಜತೀರ್ಥರು. ಶ್ರೀಪಾದರಾಜರ ಶಿಷ್ಯರೇ ಶ್ರೀ ವ್ಯಾಸರಾಜ ಯೋಗೀಂದ್ರರು. ಶ್ರೀ ವ್ಯಾಸರಾಜರ ಶಿಷ್ಯರೇ ಪುರಂದರದಾಸ-ರಾಯರು. ಪುರಂದರದಾಸರಾಯರ ಶಿಷ್ಯರೇ ವಿಜಯದಾಸರಾಯರು. ವಿಜಯದಾಸರಾಯರ ಶಿಷ್ಯರೇ ಮೋಹನದಾಸರು. ಮೋಹನದಾಸರ ಶಿಷ್ಯರೇ ತಮ್ಮಣ್ಣ ದಾಸರು. ತಮ್ಮಣ್ಣ ದಾಸರ ಶಿಷ್ಯರೇ ದಾಸಾಚಾರ್ಯರು. ಗದ್ವಾಲಿ (ಭೂವರಾಹ ರಘುಪತಿ ವಿಠಲ ದಾಸರು) ಇವರ ಶಿಷ್ಯರೇ ಶ್ರೀಪತಿವಿಠ್ಠಲ ದಾಸರು. ಇವರ ಶಿಷ್ಯರು ತಂದೆ ಶ್ರೀಪತಿ ವಿಠ್ಠಲದಾಸರು ಇವರ ಶಿಷ್ಯರೇ ದೀಪದ ಅಣ್ಣಯ್ಯಾಚಾರ್ಯರು. (ಶ್ರೀನಿಧಿವಿಠ್ಠಲ ದಾಸರು.) ಇವರ ಶಿಷ್ಯರು ಶ್ರೀವರವಿಠ್ಠಲರು ಇವರ ಶಿಷ್ಯರು ದೊಡ್ಡಬಳ್ಳಾಪುರದ ಮುದ್ದುಮೋಹನ ವಿಠ್ಠಲದಾಸರು. ಇವರ ಶಿಷ್ಯರು ತಂದೆ ಮುದ್ದುಮೋಹನ ವಿಠ್ಠಲದಾಸಾರ್ಯರು. ಇವರ ಶಿಷ್ಯರೇ ಪ್ರಾಣನಾಥವಿಟ್ಠಲ ದಾಸಾರ್ಯರು. ಇವರ ಶಿಷ್ಯರೇ ಶ್ರೀನಿಧಿಮೋಹನವಿಟ್ಠಲ ದಾಸರು. ಅಸ್ಮದ್ಗುರುವಂತರ್ಗತ ಭಾರತೀರಮಣ ಮುಖ್ಯ ಪ್ರಾಣಾಂತರ್ಗತ ಶ್ರೀನಿಧಿ ಮೋಹನ ವಿಟ್ಠಲನ ದಾಸರ ದಾಸರಿಗೆ ನಮೋನಮೋನಮಃ "ಶ್ರೀ ಶ್ರೀ ಶ್ರೀ ಶ್ರೀ"

ಈ ಸಂದರ್ಭದಲ್ಲಿ ಒಂದು ವಿಷಯವನ್ನು ಪ್ರಸ್ತಾಪಿಸುವುದು ಉಚಿತವೆಂದು ತೋರುತ್ತದೆ. ಶ್ರೀತಂದೆಮುದ್ದುಮೋಹನದಾಸರ ಪರಂಪರೆಯನ್ನು ಬಹಳ ಕಡೆಗಳಲ್ಲಿ ವೇಣುಗೋಪಾಲದಾಸರ (ಪಂಗನಾಮದ ತಿಮ್ಮಣ್ಣ ದಾಸರ) ಪರಂಪರೆಯೆಂದು ಪರಿಗಣಿಸಿರುವುದು ಕಂಡುಬರುತ್ತದೆ. ಆದರೆ ಶ್ರೀ ಶ್ಯಾಮದಾಸರು ಬರೆದಿಟ್ಟಿರುವ "ಗುರುಪೀಳಿಗೆ"ಯ ಪ್ರಕಾರ ಪರಂಪರೆಯು ಶ್ರೀ ಮೋಹನದಾಸ-ರಿಂದ ನಡೆದು ಬಂದಿರುವುದಾಗಿ ತಿಳಿಯುತ್ತದೆ. ಇದು ಶ್ರೀ ತಂದೆವೆಂಕಟೇಶ

ವಿಠಲಾಂಕಿತರಾದ ಚಿತ್ರದುರ್ಗದ ಶ್ರೀ ಆರ್. ರಾಮಚಂದ್ರರಾಯರು (ಕ್ರಿ.ಶ.೧೯೦೭-೧೯೮೨) ತಮ್ಮ "ತಂದೆ ಮುದ್ದು ಮೋಹನ್ನ ಅಸ್ಮದ್ಗುರೋರ್ಗುರು" ಎಂಬ ಸ್ತೋತ್ರಪದದಲ್ಲಿ "ಮೋಹನ್ನವಿಠಲರ ವಂಶದೊಳಗುದ್ಭವಿಸಿ" ಎಂದು ಹೇಳಿರುವುದಕ್ಕೆ ಸಂವಾದಿಯಾಗಿದೆ. ಶೋಧಕರು ಪರಿಶೀಲಿಸಬಹುದು.

ಶ್ರೀ ಶೇಷದಾಸರ ಪದಗಳು "ಶೇಷವಿಠ್ಠಲ" ಮತ್ತು "ಪ್ರಾಣನಾಥವಿಠಲ" ಎಂಬ ಎರಡು ಅಂಕಿತಗಳಲ್ಲಿರುವುದು ಗಮನಾರ್ಹ. ಶೇಷವಿಠಲಾಂಕಿತ ಪದಗಳು ಶ್ರೀದಾಸರಿಗೆ ಕ್ರಿ.ಶ.೧೯೦೨ ರಲ್ಲಿ ಶ್ರೀ ತಂದೆ ಮುದ್ದುಮೋಹನ ವಿಠಲಾಂಕಿತರಾದ ದೇವರಾಯನದುರ್ಗದ 'ಪರಮಪ್ರಿಯ' ಶ್ರೀಸುಬ್ಬರಾಯ ದಾಸರಿಂದ "ಪ್ರಾಣನಾಥವಿಠಲ" ಎಂದು ಅಂಕಿತ ಪ್ರದಾನವಾಗುವುದಕ್ಕೆ ಮುಂಚೆ ರಚಿತವಾದವುಗಳೆಂದು ಊಹಿಸಬಹುದು. ಈಗ ದೊರೆತಿರುವ ೩೨ ಪದಗಳಲ್ಲಿ ಏಳುಪದಗಳು ಶೇಷವಿಠಲಾಂಕಿತದಲ್ಲಿವೆ.

ಈಗ ಉಪಲಬ್ಧವಿರುವ ಶ್ರೀ ಶೇಷದಾಸರ ಪದಗಳಲ್ಲಿ ಶ್ರೀ ಬ್ರಹ್ಮಣ್ಯತೀರ್ಥರ ಪರವಾದ ಒಂದು ಪದವನ್ನು ಬಿಟ್ಟು ದಾಸ-ಯತಿ ಕಕ್ಷಗಳಿಗೆ ಸಂಬಂಧಿಸಿದಂತೆ ಬೇರೆ ಯಾವ ಪದಗಳೂ ದೊರೆಯದಿರುವುದು ಸೋಜಿಗದ ಸಂಗತಿ. ಶ್ರೀ ದಾಸರು ಅವುಗಳನ್ನು ರಚಿಸಿರಲೇ ಇಲ್ಲವೆನ್ನುವುದು ಅಸಂಭಾವ್ಯ. ದೇವತಾಕಕ್ಷದಲ್ಲಿ ಕೆಲವು ಮುಖ್ಯ ದೇವತೆಗಳ ಪರವಾದ ಒಂದೊಂದಾದರೂ ಪದಗಳು ದೊರೆತಿವೆ. ಆದರೆ ಮಂಗಳ ಪದ ಮಾತ್ರ ದೊರೆತಿಲ್ಲ.

ಶ್ರೀ ಶೇಷದಾಸರ ಹಸೆಗೆ ಕರೆಯುವ, ಬಳೆತೊಡಿಸುವ, ಆರತಿ ಎತ್ತುವ ಇತ್ಯಾದಿ ಕೆಲವು ಪದಗಳು ಸಂಪ್ರದಾಯದ ಹಾಡುಗಳನ್ನು ಹೋಲುವಂತಿದೆ. ಇವುಗಳಲ್ಲಿ ಬಹಳಷ್ಟವು ಕೃಷ್ಣ, ರುಕ್ಮಿಣಿಯರಿಗೆ ಸಂಬಂಧಿಸಿದವು. ಇವುಗಳನ್ನು ಶ್ರೀ ದಾಸರು ತಮ್ಮ ಹರಿಕಥಾ ಪ್ರಸಂಗಗಳಲ್ಲಿ ಬಳಸಿಕೊಳ್ಳುವುದಕ್ಕಾಗಿ ರಚಿಸಿದವೆಂದು ಊಹಿಸಲು ಸಾಧ್ಯತೆ ಇದೆ.

ಶ್ರೀ ದಾಸರ ಪದಗಳು ಪ್ರೌಢವೂ ಪ್ರಮೇಯಪೂರಿತವೂ ಆಗಿರದೆ. ರಚನೆಯು ಸರಳವಾಗಿದ್ದು ಕಲಿಯಲು ಮತ್ತು ಹಾಡಲು ಸುಲಭವಾಗಿದೆ. ಪದಗಳ ಭಾಷೆ ಅವರ ಕಾಲದಲ್ಲಿದ್ದ ಬಳಕೆಯ ಭಾಷೆ. ಅನೇಕ ಕಡೆಗಳಲ್ಲಿ ಸ್ವರಾಕ್ಷರಗಳಿಗೆ ಬದಲಾಗಿ ವ್ಯಂಜನಾಕ್ಷರಗಳ ಹಾಗೂ 'ಸ' ಕಾರಕ್ಕೆ ಬದಲಾಗಿ 'ಶ' ಕಾರ ಮೊದಲಾದ ಪ್ರಯೋಗಗಳಿವೆ. ಉದಾಹರಣೆಗೆ 'ಇಷ್ಟು' ಎಂಬಲ್ಲಿ 'ಯಿಷ್ಟು' 'ಕಲ್ಪಿಸಿ' ಎಂಬಲ್ಲಿ "ಕಲ್ಪಿಶಿ", "ಉಮೇಶ" ಎಂಬಲ್ಲಿ "ವುಮೇಶ" ಇತ್ಯಾದಿ. ಈ ರೀತಿ ಪ್ರಯೋಗಗಳು ಆಗಿನ ಕಾಲದಲ್ಲಿ ಸರ್ವೇಸಾಮಾನ್ಯವಾಗಿ ಬಳಕೆಯಲ್ಲಿದ್ದಂತೆ ತೋರುತ್ತದೆ. ಅಲ್ಲದೆ ಪದಗಳನ್ನು ಹೇಳುವಾಗ ದೀರ್ಘವಾಗಿ ಎಳೆದು ಹೇಳಬೇಕಾಗಬಹುದಾದ ಸಂದರ್ಭಗಳಲ್ಲಿ ಬರವಣಿಗೆಯಲ್ಲಿ ಸಹ "ಕಮಲ" ಎಂಬುದಕ್ಕೆ "ಕಮಾಲ", "ಕಾಮಜನಕ" ಎಂಬುಕ್ಕೆ "ಕಾಮಾಜನಕ" ಇತ್ಯಾದಿ ಪ್ರಯೋಗಗಳಿವೆ. ಈ ಸಂಕಲನದಲ್ಲಿ ಮೂಲಕ್ಕೆ ಅಪಚಾರವಾಗದ ರೀತಿಯಲ್ಲಿ ಹಿಂದೆ ತಿಳಿಸಿದಂಥ ಪ್ರಯೋಗಗಳನ್ನು ಮಾತ್ರ ಅಲ್ಲಲ್ಲಿ ಬದಲಿಸಿದೆ.

ಹಿಂದೆಯೇ ಹೇಳಿದಂತೆ ದಾಸರು ಹರಿಕಥಾ ಪ್ರಸಂಗಗಳನ್ನು ತಾವೇ ರಚಿಸಿಕೊಂಡು ಕೀರ್ತನೆಗಳನ್ನು ನಡೆಸುತ್ತಿದ್ದರೆಂದು ಪ್ರತೀತಿ ಇದೆ. ಇದಕ್ಕೆಲ್ಲ ಅಪಾರ ಸಾಹಿತ್ಯ ಸೃಷ್ಟಿ ಆಗಿರಲೇಬೇಕು. ಮೊದಲು ಇವುಗಳೆಲ್ಲವೂ ಸುಮಾರು ೩೬ ವಹಿಗಳಲ್ಲಿ ಅವರ ಶಿಷ್ಯರಾದ ಶ್ರೀ ವೆಂಕೋಬರಾಯರಲ್ಲಿದ್ದವೆಂದೂ, ಅವರ ಕಾಲಾನಂತರ ಶ್ರೀ ಮೂರ್ತಿರಾಯರೆಂಬುವರೊಬ್ಬರು ಅವುಗಳನ್ನು ಮುದ್ರಿಸುವುದಾಗಿ ತೆಗೆದುಕೊಂಡು ಹೋದರೆಂದೂ ತಿಳಿದುಬರುತ್ತದೆ. ಆದರೆ ಬಹಳ ಪ್ರಯತ್ನಪಟ್ಟಿದ್ದಾಗ್ಯೂ ಅವುಗಳ ಬಗ್ಗೆ ಇದುವರೆಗೆ ಯಾವ ಮಾಹಿತಿಯೂ ದೊರೆತಿಲ್ಲ. ಇಂದಿಗೆ ಅಳಿದುಳಿದಿರುವುದು ದಾಸರ ಕೇವಲ ೩೨ ದೇವರ ನಾಮಗಳು ಮಾತ್ರ. ಶ್ರೀ ದಾಸರಿಗೆ ತಮ್ಮ ಕೃತಿಗಳ ಬಗ್ಗೆ ಇದ್ದ ನಿರಭಿಮಾನ ಮತ್ತು ಇತರರ ನಿರಾಸಕ್ತಿಯೇ ಇದಕ್ಕೆ ಕಾರಣವೆಂದು ತೋರುತ್ತದೆ. ಸೋಜಿಗದ ವಿಷಯವೆಂದರೆ ಯಾವುದೋ ಸ್ಟುಡಿಯೋದಲ್ಲಿ ತೆಗೆದಿರುವ ದಾಸವೇಷಭೂಷಣಗಳಲ್ಲಿರುವ ಶೇಷದಾಸರ ಭಾವಚಿತ್ರವೊಂದು ಮಾತ್ರ ಇಂದಿಗೂ ವಂಶಸ್ಥರಲ್ಲಿದೆ.

ಶ್ರೀ ದಾಸರ ಹಸ್ತಾಕ್ಷರದ್ದೇ ಎಂದು ನಿರ್ದಿಷ್ಟವಾಗಿ ಹೇಳಬಹುದಾದ ಸಾಹಿತ್ಯ ಸಾಮಗ್ರಿ ದೊರೆತಿಲ್ಲ. ಅಳಿದುಳಿದಿರುವ ಪದಗಳನ್ನು ಸಂಗ್ರಹಿಸಿ ಸಂಪಾದಿಸುವಾಗ ದಾಸರ ಶಿಷ್ಯರಾದ ಶ್ರೀ ಶ್ರೀನಿಧಿಮೋಹನವಿಠಲಾಂಕಿತರಾದ ಶ್ರೀ ನಂದಗುಡಿ ಶ್ಯಾಮ ದಾಸರ ಹಾಗೂ ಅವರ ಸಮಕಾಲೀನರೇ ಆಗಿದ್ದು ಯಾರೆಂದು ತಿಳಿಯದವರ ಕೈಬರಹದ ವಹಿಗಳನ್ನೇ ಮುಖ್ಯ ಆಕರವಾಗಿ ಬಳಸಿಕೊಳ್ಳಲಾಗಿದೆ. ಅಲ್ಲದೆ ದಾಸರ ವಂಶಸ್ಥರು ಮುಖಪಾಠವಾಗಿ ಕಲಿತು ಬರೆದಿಟ್ಟುಕೊಂಡಿರುವ ಪುಸ್ತಕಗಳನ್ನೂ ಉಪಯೋಗಿಸಿಕೊಳ್ಳಲಾಗಿದೆ. ಇವುಗಳಲ್ಲದೆ ದಾಸರ ವಂಶಸ್ಥರು ಇತ್ತೀಚೆಗೆ ಎಂದರೆ ಕ್ರಿ.ಶ.೧೯೯೧ರಲ್ಲಿ ದಾಸರ ಅಭಿಮಾನಿಗಳಿಗೆ ವಿತರಿಸುವ ಉದ್ದೇಶದಿಂದ ಈ ಸಂಪುಟದ ಸಂಪಾದಕರಲ್ಲೊಬ್ಬರಾದ ಎ.ಎನ್. ಅನಂತಸ್ವಾಮಿ ರಾವ್ ಅವರ ನೆರವಿನಿಂದಲೇ ಸಂಗ್ರಹಿಸಿ, ಸಂಪಾದಿಸಿ ಖಾಸಗಿಯಾಗಿ ಅಚ್ಚುಹಾಕಿಸಿರುವ ಸಮಗ್ರ ಮಾಹಿತಿಯನ್ನೊಳಗೊಂಡ "ಶ್ರೀ ಬಾಗೇಪಲ್ಲಿ ಶೇಷದಾಸರ ದೇವರ ನಾಮಗಳು" ಎಂಬ ಪುಸ್ತಕವನ್ನೂ ಈ ಸಂಪುಟವನ್ನು ತಯಾರಿಸುವಾಗ ವಿಶೇಷವಾಗಿ ಬಳಸಿಕೊಳ್ಳಲಾಗಿದೆ.

ಶ್ರೀ ಬಾಗೇಪಲ್ಲಿ ಶೇಷದಾಸರ ಸ್ಮಾರಕ ಶಿಲಾಪ್ರತೀಕ ಒಂದನ್ನು ಅವರ ವಂಶಸ್ಥರು ಹಾಗೂ ಅವರ ಅಂತರಂಗ ಭಕ್ತರು ಶ್ರೀತಂದೆಮುದ್ದುಮೋಹನ ವಿಠಲದಾಸರಿಂದ ದೇವರಾಯನದುರ್ಗದಲ್ಲಿ ಕ್ರಿ.ಶ.೧೯೦೦ರಲ್ಲಿ ಸ್ಥಾಪಿತವಾದ "ದಾಸಕೂಟ ಸಭಾ"ದವರು ಶಾಲಿವಾಹನ ಶಕ ೧೯೨೨ರ ವಿಕ್ರಮ ಸಂವತ್ಸರದ ಚೈತ್ರ ಮಾಸದಲ್ಲಿ (ಏಪ್ರಿಲ್ ೨೦೦೦ ಕೊನೆಯ ವಾರದಲ್ಲಿ) ಶತಮಾನೋತ್ಸವದ ಸಂದರ್ಭದಲ್ಲಿ ಶತಮಾನೋತ್ಸವ ಸಮಿತಿಯವರಿಗೆ ಸಮರ್ಪಿಸಿದ್ದು, ಆ ಪ್ರತೀಕವು ಇತ್ತೀಚೆಗೆ ಬಾಗೇಪಲ್ಲಿಯಲ್ಲಿ ಶ್ರೀ ರಾಘವೇಂದ್ರ ಸ್ವಾಮಿಗಳ ಗುಡಿಯಲ್ಲಿ ಸ್ಥಾಪಿತವಾಗಿದೆ.

ಪ್ರಸಕ್ತ ಸಂಪುಟದ ಈ ಭಾಗವನ್ನು ಸಿದ್ಧಗೊಳಿಸುವ ಸಂದರ್ಭದಲ್ಲಿ ತಮ್ಮ ಅನುಮತಿಯಿತ್ತು ಹಿಂದೆ ನಮೂದಿಸಿದ ಎಲ್ಲಾ ಕೈಬರಹದ ವಹಿಗಳನ್ನೂ ಇತರ ಅನೇಕ ಉಪಯುಕ್ತ ಮಾಹಿತಿಗಳನ್ನೂ ಒದಗಿಸಿ ಸಹಕಾರವಿತ್ತ ದಾಸರ ಮೊಮ್ಮಕ್ಕಳಾದ ಶ್ರೀ ಬಿ. ಶೇಷಣ್ಣ ಮತ್ತು ಸಹೋದರರಿಗೆ ನಮ್ಮ ವಂದನೆಗಳು.

# ಶ್ರೀಕೃಷ್ಣವಿಠಲದಾಸರು

ಶ್ರೀ ಕೃಷ್ಣವಿಠಲಾಂಕಿತರಾದ ಶ್ರೀ. ಹೆಚ್. ಭೀಮರಾಯರ ಜನ್ಮಸ್ಥಳ – ಹಾಸನ ಜಿಲ್ಲೆಯ ಹೊಳೆನರಸೀಪುರ. ಅಲ್ಲಿ ಪ್ರಾಥಮಿಕ ವಿದ್ಯಾಭ್ಯಾಸವನ್ನು ಪೂರೈಸಿಕೊಂಡು ಮುಂದೆ ಮೈಸೂರಿನಲ್ಲಿ ಪ್ರೌಢವಿದ್ಯಾಭ್ಯಾಸವನ್ನು ಮುಂದುವರಿಸಿದರು. ನಂತರ, ಬೆಂಗಳೂರಿಗೆ, ಬಂದು ಬಿ.ಎ ಪದವೀಧರರಾಗಿ, ಬಿ.ಎಲ್.ಪರೀಕ್ಷೆಯಲ್ಲಿ ಉತ್ತಮ ಶ್ರೇಣಿಯಲ್ಲಿ ತೇರ್ಗಡೆಯಾದರು. ನಂತರ, ಮದ್ರಾಸಿಗೆ ಹೋಗಿ, ಅಲ್ಲಿ ಸುಪ್ರಸಿದ್ಧ ಕಾನೂನಿನ ತಜ್ಞರಾಗಿದ್ದ ಶ್ರೀ ಅಲ್ಲಾಡಿ ಕೃಷ್ಣಸ್ವಾಮಿ ಅಯ್ಯರ್ ಅವರ ನೇತೃತ್ವದಲ್ಲಿ ವಕೀಲವೃತ್ತಿಯಲ್ಲಿ ಉತ್ತಮ ಶಿಕ್ಷಣವನ್ನು ಪಡೆದು, ಹೈಕೋರ್ಟಿನ ವಕೀಲರಾಗಿ ಖ್ಯಾತಿಪಡೆದರು. ಪರಮ ಸಾತ್ವಿಕ ಸ್ವಭಾವದವರಾಗಿದ್ದ ಶ್ರೀ ಭೀಮರಾಯರಿಗೆ ವಕೀಲವೃತ್ತಿಯಲ್ಲಿ ಕಾಲಕ್ರಮೇಣ ಬೇಸರವುಂಟಾಯಿತು. ಆಗ ಸ್ವಪ್ನಸೂಚನೆಯಂತೆ, ಶ್ರೀಮನ್ಮಂತ್ರಾಲಯ ಕ್ಷೇತ್ರಕ್ಕೆ ಹೋಗಿ, ಅಲ್ಲಿ ಕೆಲವು ದಿನಗಳ ಕಾಲ ಶ್ರೀಗುರುರಾಜರ ಸೇವೆಯನ್ನು ಶ್ರದ್ಧಾ ಭಕ್ತಿಗಳಿಂದ ಮಾಡಿದರು. ಆಗ ಶ್ರೀ ಗುರುಸಾರ್ವಭೌಮರು ಮಳಖೇಡಕ್ಕೆ ಹೋಗಿ, ಶ್ರೀಜಯತೀರ್ಥರ ಸೇವೆಯನ್ನು ಮಾಡೆಂದು ಸ್ವಪ್ನದ್ವಾರಾ ಆದೇಶವಿತ್ತರು. ಶ್ರೀ ಗುರುರಾಜರ ಆಜ್ಞೆಯನ್ನು ಶಿರಸಾವಹಿಸಿ, ಶ್ರೀಯುತರು ಮಳಖೇಡ ಕ್ಷೇತ್ರಕ್ಕೆ ಹೋಗಿ, ಅಲ್ಲಿ ಶ್ರೀಜಯತೀರ್ಥ ಗುರುಗಳನ್ನು ಆರುತಿಂಗಳಕಾಲ ಸೇವಿಸಿದರು. ಅವರ ಕಠಿಣ ಸೇವೆಗೆ ಮೆಚ್ಚಿ ಶ್ರೀಜಯತೀರ್ಥರು ಪರಮಾನುಗ್ರಹ ಮಾಡಿದರು. ಅವರ ಅನುಗ್ರಹವಿಶೇಷದಿಂದ ಭೀಮರಾಯರಿಗೆ ಮೂಲವೃಂದಾವನದ ಸನ್ನಿಧಿಯಲ್ಲಿ ಪೂಜಿಸಲ್ಪಡುತ್ತಿದ್ದ ಜಯತೀರ್ಥರ ವೃಂದಾವನವು ಪ್ರಾಪ್ತವಾಯಿತು. ಅಲ್ಲಿಂದ ಮುಂದೆ ಶ್ರೀಯುತರ ಆಧ್ಯಾತ್ಮಿಕ ಜೀವನ ಆರಂಭವಾಯಿತು. ವಕೀಲವೃತ್ತಿಗೆ ರಾಜೀನಾಮೆ ಸಲ್ಲಿಸಿ, ತಮ್ಮ ಶೇಷಾಯುಷ್ಯವನ್ನೆಲ್ಲ ಶ್ರೀಹರಿವಾಯುಗುರುಗಳ ಸೇವೆಗಾಗಿಯೇ ಮೀಸಲಿರಿಸಿದರು.

ಅನಂತರ, ಶ್ರೀವಿಜಯದಾಸರ ಪರಂಪರೆಯಲ್ಲಿ ಬಂದಿದ್ದ ಶ್ರೀತಂದೆ ಮುದ್ದುಮೋಹನ ದಾಸರ ಆಪ್ತ ಶಿಷ್ಯವರ್ಗದವರಲ್ಲಿ ಪ್ರಮುಖರಾಗಿದ್ದ ಚಿತ್ರದುರ್ಗದ ನಿವಾಸಿಗಳಾಗಿದ್ದ ಶ್ರೀ ಉರಗಾದ್ರಿವಾಸವಿಠ್ಠಲರ ಸಮಾಗಮವು ಒದಗಿತು.

ಶ್ರೀಯುತರ ಅಣ್ಣಂದಿರು, ಶ್ರೀ ಹೆಚ್. ಶ್ಯಾಮರಾಯರು ಶ್ರೀ ಉರಗಾದ್ರಿವಾಸವಿಠ್ಠಲ ದಾಸರ ಪ್ರಥಮ ಶಿಷ್ಯರು. ಅವರ ನೆರವಿನಿಂದ ಶುಭಮುಹೂರ್ತದಲ್ಲಿ ಶ್ರೀ ಭೀಮರಾಯರಿಗೆ ಶ್ರೀ ಉರಗಾದ್ರಿವಾಸವಿಠ್ಠಲ ದಾಸವರ್ಯರಿಂದ, "ಶ್ರೀಕೃಷ್ಣವಿಠ್ಠಲ" ಎಂಬ ಅಂಕಿತವು ದೊರೆತು ಹರಿದಾಸ ದೀಕ್ಷಾಬದ್ಧರಾಗಿ, ದಾಸರ ಪರಂಪರೆಗೆ ಸೇರಿದರು.

ಕ್ರಿ.ಶ. ೧೯೩೫ರಲ್ಲಿ "ಶ್ರೀ ಹರಿಗುರುಸೇವಾ ಮಂಡಲಿ", ಎಂಬ ಧಾರ್ಮಿಕ ಸಂಸ್ಥೆಯನ್ನು ಸ್ಥಾಪಿಸಿ, ಆ ಸಂಸ್ಥೆಯ ಆಶ್ರಯದಲ್ಲಿ ಪ್ರತಿವರ್ಷವೂ ಶ್ರೀ ಪುರಂದರ ದಾಸರ ಪುಣ್ಯದಿನ ಮತ್ತು ಶ್ರೀಜಯತೀರ್ಥರ ಆರಾಧನೆಗಳನ್ನು ವಿಧ್ಯುಕ್ತವಾಗಿ ನಡೆಯಿಸುತ್ತಾ ಬಂದರು. ಇವೆರಡು ಆರಾಧನೆಗಳೂ ಪೂಜ್ಯಗುರುವರ್ಯರ ನೇತೃತ್ವದಲ್ಲಿಯೇ ನಡೆಯುತ್ತಿದ್ದವು. ಮೂರು ದಿನಗಳ ಆರಾಧನಾಕಾಲದಲ್ಲಿ ಪ್ರಸಿದ್ಧ ವಿದ್ವಾಂಸರುಗಳಿಂದ ಪ್ರವಚನ ಮತ್ತು ಹರಿದಾಸ ಸಾಹಿತ್ಯ ಗೋಷ್ಠಿಗಳನ್ನು ಏರ್ಪಡಿಸುತ್ತಿದ್ದರು. ಅದೊಂದು ಆಧ್ಯಾತ್ಮಿಕ ರಸದೌತಣವಾಗಿತ್ತು. ಈ ಆರಾಧನೆ-ಗಳನ್ನು ಭಾರತದ ವಿವಿಧ ತೀರ್ಥ ಕ್ಷೇತ್ರಗಳಲ್ಲಿ ಏರ್ಪಡಿಸಿ ತಮ್ಮ ಅನುಯಾಯಿ-ಗಳಿಗೂ ಮತ್ತು ಭಕ್ತಜನ ಪರಿವಾರಕ್ಕೂ ತೀರ್ಥಯಾತ್ರೆ, ಕ್ಷೇತ್ರಮೂರ್ತಿಗಳ ದರ್ಶನಗಳ ದಿವ್ಯಭಾಗ್ಯವನ್ನು ಕರುಣಿಸುತ್ತಿದ್ದರು.

ಶ್ರೀಯುತರು ಉತ್ತಮ ಕವಿಗಳು. ಶ್ರೀ ಹರಿವಾಯುಗುರುಗಳ ಅನುಗ್ರಹವಿಶೇಷದಿಂದ ಅವರಲ್ಲಿ ಸುಪ್ತವಾಗಿದ್ದ ಕಾವ್ಯರಚನಾ ಕೌಶಲ್ಯವು ಪ್ರಕಟವಾಗಿ, ಶ್ರೀಕೃಷ್ಣವಿಠ್ಠಲಾಂಕಿತದಲ್ಲಿ ಅನೇಕ ಕೀರ್ತನೆಗಳನ್ನು ರಚಿಸಿದರು. ನಮಗೆ ದೊರೆತಿರುವಷ್ಟು ಕೀರ್ತನೆಗಳನ್ನು ಈ ಸಂಪುಟದಲ್ಲಿ ಸಂಗ್ರಹಿಸಲಾಗಿದೆ. ದಶೋಪನಿಷತ್ತುಗಳನ್ನು ಸರಳವಾದ ಕನ್ನಡದಲ್ಲಿ ಷಟ್ಪದಿಯ ರೂಪದಲ್ಲಿ ರಚಿಸಿರುತ್ತಾರೆ. ಉಪನಿಷತ್ತುಗಳ ಸಂದೇಶವನ್ನು ಸಾರುತ್ತಿರುವ ಈ ಕೃತಿಗಳ ಮುದ್ರಣ ಆಗಬೇಕಾಗಿದೆ. ಇದಲ್ಲದೆ, "ಶ್ರೀ ಕೃಷ್ಣಚರಿತಾಮೃತ", ಎಂಬ ಕೃತಿಯು ಶ್ರೀಯುತರ ಮೇರುಕೃತಿಯಾಗಿದೆ. ಶ್ರೀಮದ್ಭಾಗವತದ ದಶಮಸ್ಕಂಧದ ಸಮಗ್ರ ಚರಿತ್ರೆಯನ್ನು ಸುಂದರವಾಗಿ ಬಿಂಬಿಸುವ ಈ ಕೃತಿ ಕನ್ನಡ ಸಾರಸ್ವತ ಲೋಕಕ್ಕೆ

ಅಮೂಲ್ಯ ಕೊಡುಗೆಯಾಗಿದೆ. ಷಟ್ಪದಿಗಳು, ಕಂದಪದ್ಯ ಮತ್ತು ಗದ್ಯಭಾಗಗಳಿಂದ ಕೂಡಿದ ಈ ಕೃತಿಯು ಯಕ್ಷಗಾನ ಸಾಹಿತ್ಯವನ್ನು ಹೋಲುತ್ತದೆ.

ತಮ್ಮ ಬಾಳಿನ ಅಂತ್ಯದವರೆಗೂ, ಆಧ್ಯಾತ್ಮಿಕ ಕಾರ್ಯಗಳಲ್ಲಿ ತಮ್ಮನ್ನು ಸದಾ ತೊಡಗಿಸಿಕೊಂಡಿರುತ್ತಿದ್ದ ಶ್ರೀಯುತರು ಅವರ ಪರಿವಾರವರ್ಗದವರಿಗೆಲ್ಲ ಮಾರ್ಗದರ್ಶಿಗಳಾಗಿದ್ದರು. ಕ್ರಿ.ಶ. ೧೯೬೩, ಡಿಸೆಂಬರ್ ತಿಂಗಳಿನಲ್ಲಿ ಶ್ರೀಹರಿ ಧ್ಯಾನಪರರಾಗಿದ್ದು ಇಹಲೋಕವನ್ನು ತ್ಯಜಿಸಿ, ಹರಿಪದವನ್ನು ಸೇರಿದರು. ಅವರು ಜನಿಸಿದ್ದು ಕ್ರಿ.ಶ. ೧೮೯೮ ರ ಸಮಾರಿನಲ್ಲಿ ಎಂದು ತಿಳಿದು ಬಂದಿದೆ.

ಶ್ರೀ ಉರಗಾದ್ರಿವಾಸವಿಠ್ಠಲದಾಸರು ಶ್ರೀ ಭೀಮರಾಯರಿಗೆ ನೀಡಿದ ಅಂಕಿತಪದದ ಸಾಹಿತ್ಯವನ್ನು ಮುಂದೆ ಕೊಡಲಾಗಿದೆ.

ಕಾವೊದೋ ವಿಠಲ ತಂದೆ ಕಾಯ್ವುದೋ ಪ

ಕಾವೊದೋ ದೇವಾದಿ ವಂದ್ಯ
ಭಾವ ಶುದ್ಧನಮಾಡಿ ಮುಂದೆ । ಅಹ
ನವನೀತಧರ ತಾಂಡವ ಕೃಷ್ಣವಿಠಲ
ತವ ಪಾದದಾಸ ದೀಕ್ಷೆಯನಿತ್ತು ಅನುದಿನ ಅ.ಪ

ಜಯತೀರ್ಥಾರ್ಯರ ನಿಜ ಸೇವೆಯಾ
ನಿತ್ತೆ ವಾಯುವಂತರ್ಗತ ಕೃಷ್ಣಯ್ಯಾ
ವಲಿದು ಜಯವಾಗಿ ನಡೆಸಿದ ಕಾರ್ಯ
ಈಗ ನಿಜನಿನ್ನ ಕಿಂಕರನು ಜೀಯ್ಯಾ । ಅಹ
ಕಾಯಜಪಿತ ನಿನ್ನ ಆಯುತವನರಿಯೆನು
ಧೇಯ್ಯಾವು ನಿನಗಿದು ಅಭಯದಾಯಕ ಹರಿ ೧

ಬಡವರಾಧಾರಿನೀ ಇಂದು ಕೈಯ ಬಿಡದೆ ಪಾಲಿಸು
ಇನ್ನುಮುಂದು

ನೀನೆ ಅಡಿಗಡಿಗೆ ಅನಿಮಿತ್ತ ಬಂಧು
ಎಂದು ನುಡಿಸಿದೆ ನೀ ಕೃಪಾ ಸಿಂಧು । ಅಹ
ತಡಮಾಡದೆ ನಿನ್ನಡಿಯ ಸೇವೆಯನಿತ್ತು
ನುಡಿಸು ನಿನ್ನನಾಮ ಮಹಿಮೆಗಳನುದಿನ ೨

ಮಡದಿ ಮಕ್ಕಳ ಒಡಗೂಡಿ ಗಿರಿಗೊಡೆಯ
ನಿನ್ನ ದರುಶನಮಾಡಿ
ಒಡನೆ ಪಂಡರಿರಾಯನ ನೋಡಿ
ಬಿಡದೆ ವಿಜಯದಾಸರ ಸೇವೆಮಾಡಿ । ಅಹ
ಸಡಗರದಿಂದಲಿ ಸ್ತುತಿಸಿ ನಟಿಸುವ ಬಡಭಕುತನ
ಮನದೃಢ ಮಾಡಿ ನಿರುತದಿ ೩

ಭಾರ್ಗವೀಶನ ಅನುಗ್ರಹದಿ
ಭವದುರ್ಗವ ಕಡಿಯೊ ನೀ ಶೀಘ್ರದಿ
ಭಕ್ತವರ್ಗದೊಳಿಟ್ಟು ಕರುಣದಿ
ಅಪವರ್ಗಪ್ರದನೆ ಅನುದಿನದಿ । ಅಹ
ಮಾರ್ಗವ ತೋರಿ ಸನ್ಮಾರ್ಗದೊಳಿಟ್ಟವನ
ದೀರ್ಘಾಯುವಂತನೆಂದೆನಿಸಿ ಸಾಧನವಿತ್ತು ೪

ಗುರ್ವಂತರ್ಗತ ಬಿಂಬವೈಕ್ಯಮಾಡಿ
ಹರಿನಿನ್ನ ಸ್ತವನ ನಿತ್ಯ ಉಳ್ಳವರೆಸೇವೆ
ಭಕ್ತಿಯನಿತ್ತು ನಿರುತಹರಿಭಕ್ತನೆಂದೆನಿಸು ಪ್ರಮುಖ್ಯಾ । ಅಹ
ಪೊರೆಯೊ ಅಸ್ಮದ್ಗುರ್ವಂತರ್ಯಾಮಿ
ಶ್ರೀ ವಾಯ್ವಾಂತರ್ಗತ ಕೃಷ್ಣ ಉರಗಾದ್ರಿವಾಸ ವಿಠಲ ೫

ಶ್ರೀ ಭೀಮರಾಯರಿಗೆ ಅವರ ಗುರುಗಳಿಂದ ದತ್ತವಾದ ಅಂಕಿತವು ''ನವನೀತ ಧರ ತಾಂಡವ ಕೃಷ್ಣವಿಠ್ಠಲ''– ಎಂದು. ತಮ್ಮ ಅನೇಕ ಕೃತಿಗಳಲ್ಲಿ ಶ್ರೀಯುತರು ಜಯಮುನಿ ಅಂತರ್ಗತ ವಾಯ್ವಂತರ್ಗತ ತಾಂಡವ ನವನೀತಧರ ಕೃಷ್ಣ

ವಿಠ್ಠಲ– ಎಂದು ಅಂಕಿತ ಹಾಕಿರುತ್ತಾರೆ. ಕೆಲವು ಮುದ್ರಿತವಾದ ದಾಸರಪದಗಳ ಸಂಗ್ರಹದಲ್ಲಿ– "ಕೃಷ್ಣ ವಿಠ್ಠಲ"– ಎಂಬ ಅಂಕಿತವಿರುವ ಕೆಲವು ಕೀರ್ತನೆಗಳು ಕಂಡುಬರುವುವು. ಅವು ಬೇರೆ ಕರ್ತೃಗಳ ರಚನೆಯಾಗಿರಬೇಕು.

## ಸರಗೂರು ವೆಂಕಟವರದಾರ್ಯರು (ವರದವಿಠಲ)

ಸರಗೂರು ವೆಂಕಟವರದಾರ್ಯರು ಗುಂಡ್ಲುಪೇಟೆ ಸಮೀಪದಲ್ಲಿರುವ ಸರಗೂರಿನವರೆಂದು ತೋರುತ್ತದೆ. ಅವರ ವಂಶದ ಬಗ್ಗೆಯಾಗಲೀ ಜೀವನ ಚರಿತ್ರೆ ಬಗ್ಗೆಯಾಗಲೀ ಹೆಚ್ಚಿನ ವಿಷಯಗಳೇನೂ ತಿಳಿದುಬರುತ್ತಿಲ್ಲ. ಅವರು ಬಹಳಮಟ್ಟಿಗೆ ಶ್ರೀವೈಷ್ಣವ ಸಂಪ್ರದಾಯದವರಾಗಿದ್ದು ತೆರಕಣಾಂಬಿಯ ಸಮೀಪದಲ್ಲಿ ವ್ಯಾಘ್ರಾಚಲ ಕ್ಷೇತ್ರವೆಂದು ಪ್ರಸಿದ್ಧವಾದ ಹುಲಿಗನಮರಡಿ ಅಥವಾ ಹುಲುಗಿನ ಮುರುಡಿ ಬೆಟ್ಟದ ಶ್ರೀನಿವಾಸನ ಭಕ್ತರಾಗಿದ್ದರೆಂದು ಅವರ ಕೃತಿಗಳಿಂದ ತಿಳಿದುಬರುತ್ತದೆ.

ಹುಲಿಗನ ಮರಡಿಯು ಗುಂಡ್ಲುಪೇಟೆ ತಾಲ್ಲೂಕಿನಲ್ಲಿ ತೆರಕಣಾಂಬಿಯಿಂದ ಸುಮಾರು ೧೦ ಕಿ.ಮೀ. ದೂರದಲ್ಲಿ ನಿಸರ್ಗ ಸೌಂದರ್ಯದಿಂದ ಕೂಡಿದ ವೆಂಕಟರಮಣಗಿರಿಯೆಂದು ಕರೆಯಲ್ಪಡುವ ಬೆಟ್ಟದ ಮೇಲಿದೆ. ಅಲ್ಲಿ ವಿಜಯ-ನಗರದ ಶೈಲಿಯಲ್ಲಿರುವ ಶ್ರೀ ಶ್ರೀನಿವಾಸನ ದೇವಸ್ಥಾನವಿದ್ದು ಶ್ರೀ ಪದ್ಮಾವತಿಯ ಸನ್ನಿಧಿಯೂ ಸಹ ಪ್ರತ್ಯೇಕವಾಗಿದೆ. ಈ ಶ್ರೀನಿವಾಸನೇ ಸರಗೂರು ವೆಂಕಟ ವರದಾರ್ಯರ ಮನ ಮತ್ತು ಮನೆದೈವವಿದ್ದಂತೆ ತೋರುತ್ತದೆ.

ಸರಗೂರು ವೆಂಕಟವರದಾರ್ಯರು 'ವರದ ವಿಠಲ' ಮುದ್ರಿಕೆಯಿಂದ ಕೃತಿಗಳನ್ನುರಚಿಸಿದ್ದಾರೆ. ಮಾಧ್ವಸಂಪ್ರದಾಯದವರಲ್ಲದ ಹರಿದಾಸರುಗಳಲ್ಲಿ ವಿಠಲಾಂಕಿತವು ಪ್ರಚಲಿತವಿಲ್ಲ. ಇವರು ಯಾವ ಒಂದು ದಾಸ ಪರಂಪರೆಗೂ ಸೇರಿದವರಲ್ಲವೆಂದು ತೋರುತ್ತದೆ. ಬಹುಶಃ ಮಾಧ್ವಹರಿದಾಸರುಗಳಿಂದ ಪ್ರಭಾವಿತರಾಗಿ ವಿಠಲಾಂಕಿತವನ್ನಿಟ್ಟುಕೊಂಡಿರಬಹುದು. ಇವರ ಕೃತಿಗಳಲ್ಲಿ ಶ್ರೀಜಗನ್ನಾಥದಾಸರ ಪ್ರಭಾವವನ್ನು ಸ್ಪಷ್ಟವಾಗಿ ಗುರುತಿಸಬಹುದು. ಕನ್ನಡ ಮತ್ತು

ಸಂಸ್ಕೃತ ಭಾಷೆಗಳೆರಡರಲ್ಲೂ ಇವರಿಗೆ ಪಾಂಡಿತ್ಯವಿದ್ದದ್ದು ಅವರ ಕೃತಿಗಳಲ್ಲಿ ಎದ್ದು ಕಾಣುತ್ತದೆ. ಕೆಲವು ಕೃತಿಗಳಂತೂ ಸಂಸ್ಕೃತಮಯವಾಗಿವೆ. ಇನ್ನೂ ಒಂದು ಸೋಜಿಗದ ವಿಷಯವೆಂದರೆ ಅವರು ಹಿಂದೂಸ್ಥಾನೀ ಪದಗಳ್ನು ಬಳಸಿ ಭಜನೆಗಳನ್ನು ಹೋಲುವ ಒಂದೆರಡು ಪದಗಳನ್ನೂ ರಚಿಸಿದ್ದಾರೆ. ಈ ಸಂಗ್ರಹದಲ್ಲಿರುವ ಕೃತಿಗಳಲ್ಲದೆ ಅವರು ಇನ್ನೂ ಅನೇಕ ಕೀರ್ತನೆಗಳನ್ನೂ ವ್ಯಾಘ್ರಾಚಲಮಹಾತ್ಮೆ, ರಾಧಾಕೃಷ್ಣವಿಲಾಸ, ತಪತೀ ಕಲ್ಯಾಣ ಮೊದಲಾದ ಯಕ್ಷಗಾನ ಪ್ರಸಂಗಗಳನ್ನು ರಚಿಸಿರುವರೆಂದು ಉಲ್ಲೇಖವಿದ್ದು ಸದ್ಯದಲ್ಲಿ ಅವುಗಳು ಉಪಲಬ್ಧವಿಲ್ಲವೆಂದು ತೋರುತ್ತದೆ. ಒಟ್ಟಿನಲ್ಲಿ ವೆಂಕಟವರದಾರ್ಯರು ಬಹುಮುಖ ಪ್ರತಿಭೆಯಿದ್ದ ಕವಿಗಳೆಂದು ನಿಶ್ಚಯವಾಗಿ ಹೇಳಬಹುದು.

ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯ ೧೯೨ ನೇ ಪ್ರಕಟಣೆಯಾದ, ಡಾ. ಶ್ರೀನಿವಾಸ ಹಾವನೂರ ಅವರ ಹೊಸ ಕನ್ನಡ ಅರುಣೋದಯ ಎಂಬ ಗ್ರಂಥದಲ್ಲಿ ಬಿ.ಎಲ್. ರೈಸ್ ತನ್ನಿಂದ ಸಂಪಾದಿತ ವಾದ Karnataka sabdanusanam ಎಂಬ ಗ್ರಂಥದ Introduction ನಲ್ಲಿ ಸರಗೂರು ವೆಂಕಟವರದಾರ್ಯನ ತಪತೀಪರಿಣಯವು a dramatic work of high order very well written ಎಂದಿರುವುದನ್ನು ಉಲ್ಲೇಖಿಸಿದ್ದಾರೆ.

ಈ ಸಂಗ್ರಹದಲ್ಲಿರುವ ಒಟ್ಟು ೧೦೨ ಕೃತಿಗಳಲ್ಲಿ ಕೇವಲ ಮೂರು ಮಾತ್ರ ಶ್ರೀ ಲಕ್ಷ್ಮೀದೇವಿಯ ಪರವಾಗಿದ್ದು, ಮಿಕ್ಕ ಎಲ್ಲ ಕೃತಿಗಳೂ ಶ್ರೀಹರಿಯ ಪರವಾಗಿಯೇ ಇವೆ. ಮಳೆಯನ್ನು ಬೇಡಿ, ಗೋವುಗಳಿಗೆ ಒದಗಿದ ರೋಗ ಪರಿಹಾರಾರ್ಥ ಶ್ರೀನಿವಾಸನನ್ನು ಪ್ರಾರ್ಥಿಸಿರುವ ಒಂದೆರಡು ಪದಗಳೂ ಇವೆ. ಶ್ರೀ ಹರಿಸರ್ವೋತ್ತಮತ್ವ ಮತ್ತು 'ಸೋಹಂ' ಉಪಾಸನೆಯ ನಿರಾಕರಣೆ ಇವೆರಡನ್ನು ಬಿಟ್ಟು ಇವರು ಇನ್ನಾವ ಮತಪ್ರಕ್ರಿಯೆಯನ್ನೂ ಪ್ರತಿಪಾದಿಸುವ ಗೋಜಿಗೆ ಹೋದಂತಿಲ್ಲ. ಬಹಳಷ್ಟು ಕೃತಿಗಳಲ್ಲಿ ವ್ಯಾಘ್ರಗಿರಿಯನ್ನು ಅದೇ ಹೆಸರಿನಿಂದಾಗಲೀ, ವ್ಯಾಘ್ರಾಚಲ, ವ್ಯಾಘ್ರನಗ, ಶಾರ್ದೂಲ ಮಹೀಂದ್ರ, ಪುಲಿಗಿರಿ, ಪುಲಿಬೆಟ್ಟ, ಹರಿಣಾರ್ಯದ್ರಿ ಇತ್ಯಾದಿ ಪರ್ಯಾಯ ಪದಗಳಿಂದಾಗಲೀ ಉಲ್ಲೇಖಿಸಿರುವುದು

ಒಂದು ವೈಶಿಷ್ಟ್ಯ. ಎಲ್ಲ ಪದಗಳೂ ಸೊಗಸಾದ ಪ್ರಾಸ ಅನುಪ್ರಾಸಗಳಿಂದ ಕೂಡಿದ್ದು ಯಾವ ರಾಗ-ತಾಳಗಳನ್ನೂ ಅನುಸರಿಸದೆ ಕೇವಲ ನೇರವಾಗಿ ಓದಿದರೂ ಸಹ ಕರ್ಣಾನಂದವನ್ನುಂಟು ಮಾಡುತ್ತವೆ. ಕೃತಿಗಳಲ್ಲಿ ಪದಗಳು ತಾವೇ ತಾವಾಗಿ ಪ್ರಾಸಬದ್ಧವಾಗಿ ಜೋಡಿಸಿಕೊಂಡು ಬಂದಂತಿದ್ದು ದಾಸರ ಕವಿತಾ ಕೌಶಲ್ಯದ ದ್ಯೋತಕವಾಗಿವೆ.

ಶ್ರೀ ವೆಂಕಟವರದಾರ್ಯರನ್ನು ಶ್ರೀ ವೈಷ್ಣವ ಸಂಪ್ರದಾಯದ ಕೀರ್ತನ-ಕಾರರನ್ನಾಗಿ ಗುರುತಿಸಿದ್ದು ಇದೇ ಮಾಹೆಯ ಸಂ. ೩೫ ರ ಭಾಗ ೧ರಲ್ಲಿ ವಿವರವಾದ ಪ್ರಸ್ತಾವನೆಯನ್ನು ಕೊಡಲಾಗಿದೆ.

ಈ ಸಂಗ್ರಹಕ್ಕೆ ನಂಜನಗೂಡಿನ ಸನ್ಮಾರ್ಗದರ್ಶಿ ಗ್ರಂಥಮಾಲೆಯವರು ಕ್ರಿ.ಶ.೧೯೨೪ರಲ್ಲಿ ಮುದ್ರಿಸಿ ಪ್ರಕಟಿಸಿರುವ 'ಶ್ರೀ ಶ್ರೀನಿವಾಸ ಸಂಕೀರ್ತನೆ' ಎಂಬ ಪುಸ್ತಕವನ್ನು ಆಕರವಾಗಿ ಬಳಸಿಕೊಳ್ಳಲಾಗಿದೆ. ವ್ಯಾಘ್ರಗಿರಿಯ ಸ್ಥಳಪುರಾಣಾದಿಗಳ ಬಗ್ಗೆ ಮಾಹಿತಿಯನ್ನು ಒದಗಿಸಿ ಸಹಕರಿಸಿದ ಶ್ರೀ ಹುಲಗಿನ ಮುರಡಿ ವೆಂಕಟರಮಣ ಸ್ವಾಮಿ ದೇವಸ್ಥಾನದ ಸೇವಾ ಸಮಿತಿ (ರಿ), ಬೆಂಗಳೂರು-ಇದರ ಗೌರವ ಕಾರ್ಯದರ್ಶಿಗಳಾದ ಶ್ರೀ ಡಿ.ವಿ. ಶೇಷಾದ್ರಿಯವರಿಗೂ, ಇತರ ರೀತಿಗಳಲ್ಲಿ ಪ್ರತ್ಯಕ್ಷವಾಗಿಯೂ ಪರೋಕ್ಷವಾಗಿಯೂ ನಮಗೆ ಸಹಕಾರವಿತ್ತ ಮಿಕ್ಕ ಎಲ್ಲ ಸಹೃದಯರಿಗೂ ನಮ್ಮ ಕೃತಜ್ಞತಾಪೂರ್ವಕ ವಂದನೆಗಳು.

## ಕೃತಜ್ಞತೆಗಳು

ಕರ್ನಾಟಕ ಹರಿದಾಸರ ಕೃತಿಗಳನ್ನೆಲ್ಲ ಸಮಗ್ರ ರೂಪದಲ್ಲಿ ಪ್ರಕಟಿಸಲು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯವರು ಹಮ್ಮಿಕೊಂಡಿರುವ ಈ ಬೃಹತ್ ಕಾರ್ಯವು ಅತ್ಯಂತ ಶ್ಲಾಘನೀಯವಾಗಿದೆ. ಪ್ರಸಕ್ತ ಸಂಪುಟವನ್ನು ಸಿದ್ಧಪಡಿಸುವ ಕಾರ್ಯದಲ್ಲಿ ನಮ್ಮನ್ನು ಆಯ್ಕೆ ಮಾಡಿರುವ ಇಲಾಖೆಯ ನಿರ್ದೇಶಕರಾದ ಸನ್ಮಾನ್ಯ ಮುದ್ದುಕೃಷ್ಣ ಅವರಿಗೂ ಮತ್ತು ಡಾ. ಟಿ. ಎನ್. ನಾಗರತ್ನ ಅವರಿಗೂ ನಮ್ಮ ಹೃತ್ಪೂರ್ವಕ ವಂದನೆಗಳು.

ಪ್ರಸಕ್ತ ಸಂಪುಟವು ಶ್ರೀ ಮುದ್ದುಮೋಹನವಿಠಲದಾಸರು ಮತ್ತು ಪರಂಪರೆಗೆ ಸೇರಿದ ಇತರ ದಾಸರುಗಳ ಕೀರ್ತನೆಗಳ ಸಂಗ್ರಹವಾಗಿದೆ. ಶ್ರೀ ಮುದ್ದುಮೋಹನ ವಿಠಲದಾಸರು (ದೊಡ್ಡಬಳ್ಳಾಪುರದ ಶ್ರೀ ರಾಘವೇಂದ್ರದಾಸರು) ಹಿರಿಯರು. ಅವರ ಶಿಷ್ಯರೇ ತಂದೆಮುದ್ದುಮೋಹನ ವಿಠ್ಠಲದಾಸರು (ದೇವರಾಯನದುರ್ಗದ ಪರಮಪ್ರಿಯ ಸುಬ್ಬರಾಯದಾಸರು). ಅವರ ಪ್ರಥಮ ಶಿಷ್ಯರೇ ಬಾಗೇಪಲ್ಲಿ ಶೇಷದಾಸರು. ಸುಬ್ಬರಾಯದಾಸರ ಶಿಷ್ಯಪರಿವಾರದಲ್ಲಿ ಪ್ರಮುಖರಾಗಿದ್ದ, ಶ್ರೀ ಉರಗಾದ್ರಿವಾಸವಿಠ್ಠಲದಾಸರ ಶಿಷ್ಯರಲ್ಲಿ ಒಬ್ಬರಾಗಿದ್ದ ಶ್ರೀಕೃಷ್ಣವಿಠ್ಠಲದಾಸರು, ಹೀಗೆ ಒಂದೇ ಪರಂಪರೆಗೆ ಸೇರಿದ್ದ ನಾಲ್ಕು ತಲೆಮಾರುಗಳ ದಾಸರ ಕೀರ್ತನೆಗಳು ಪ್ರಸಕ್ತ ಸಂಪುಟದಲ್ಲಿ ಒಂದೇ ಕಡೆ ಸಂಗ್ರಹವಾಗಿರುವುದು ಈ ಸಂಪುಟದ ವೈಶಿಷ್ಟ್ಯವಾಗಿದೆ. ಕೊನೆಯಲ್ಲಿ ೫ನೆಯ ಭಾಗವಾಗಿ, ಸರಗೂರು ವೆಂಕಟವರದಾರ್ಯರ ಕೃತಿಗಳು ಸೇರಿವೆ.

ಈ ಸಂಪುಟದ ಕೃತಿಗಳ ಕರಡು ಪ್ರತಿಗಳನ್ನು ಬರೆಯುವ ಕಾರ್ಯದಲ್ಲಿ ನೆರವಾದ, ಶ್ರೀ ಹೆಚ್.ಎಸ್. ರಘುನಾಥ ಮತ್ತು ಶ್ರೀಮತಿ ಛಾಯಾ ಅವರಿಗೆ ನಮ್ಮ ಅಭಿನಂದನೆಗಳು. ಸಂಪುಟದ ಸಂಗ್ರಹಕಾರ್ಯದಲ್ಲಿ ನಾನಾ ರೀತಿಗಳಲ್ಲಿ ನೆರವನ್ನು ನೀಡಿದ ಶ್ರೀಮತಿ ಪದ್ಮಾಮೂರ್ತಿಯವರಿಗೆ, ಶ್ರೀಮತಿಯರಾದ ಚಿತ್ರಾ ಆನಂದರಾವ್ ಮತ್ತು ವಿಜಯ ಕುಮಾರಿ ಅರವಿಂದ ರಾವ್ ಇವರುಗಳಿಗೂ ನಮ್ಮ ವಂದನೆಗಳು.

ವಚನ ಸಾಹಿತ್ಯದಂತೆಯೇ ಧಾರ್ಮಿಕ ವಿಚಾರಗಳ ಚಿಂತನ _ ಮಂಥನ, ದೈವಭಕ್ತಿ ಮುಂತಾದ ನೀತಿಗಳ ನೆಲೆಗಟ್ಟಿನ ಮೇಲೆ ಹರಿದಾಸರುಗಳಿಂದ ನಿರ್ಮಾಣವಾಗಿರುವ ಈ ಸಮಗ್ರ ಹರಿದಾಸ ವಾಙ್ಮಯವು ಪೂರ್ಣಪ್ರಮಾಣದಲ್ಲಿ ಪ್ರಕಟವಾಗಿ ಕನ್ನಡ ಜನತೆಯ ಕೈಸೇರಲೆಂದು ಹಾರೈಸುತ್ತಾ, ಕನ್ನಡ ಮತ್ತು ಸಂಸ್ಕೃತಿ ಇಲಾಖೆಗೆ ನಮ್ಮ ವಂದನೆಯನ್ನು ಸಲ್ಲಿಸುತ್ತಾ ವಿರಮಿಸುತ್ತೇವೆ.

ಸಂಪಾದಕರು
ಹೆಚ್.ಎಸ್. ಶ್ರೀನಿವಾಸಮೂರ್ತಿ
ಎ.ಎನ್. ಅನಂತಸ್ವಾಮಿರಾವ್.

# ಕೀರ್ತನೆಗಳ ಕ್ರಮಸೂಚಿ

| ಕ್ರಮ ಸಂಖ್ಯೆ | ಕೀರ್ತನೆಯ ಮೊದಲ ಸಾಲು | ಪುಟ ಸಂಖ್ಯೆ |
|---|---|---|

**ಹರಿಸಂಕೀರ್ತನೆ**



11518

| ಕ್ರಮ ಸಂಖ್ಯೆ | ಕೀರ್ತನೆಯ ಮೊದಲ ಸಾಲು | ಪುಟ ಸಂಖ್ಯೆ |
|---|---|---|
| ೮೩. | ಶ್ರೀನಿವಾಸ ಪಾಹಿಮಾಂ ಸದಾಶ್ರಿತ ಜನಮೋದ | ೩೮೩ |
| ೮೪. | ಶ್ರೀನಿವಾಸ ತವಚರಣ ಸರೋರುಹ | ೩೮೪ |
| ೮೫. | ಶ್ರೀನಿವಾಸ ಪದಧ್ಯಾನ ಕರೋರೆ | ೩೮೫ |
| ೮೬. | ಶ್ರೀನಿವಾಸ ಶ್ರೀಭೂವಿಲಾಸ | ೩೮೬ |
| ೮೭. | ಶ್ರೀನಿವಾಸ ನಿನ್ನನಂಬಿದ ದಾಸನ | ೩೮೮ |
| ೮೮. | ಶ್ರೀನಿವಾಸ ಸಲಹೋನಮ್ಮ | ೩೮೮ |
| ೮೯. | ಶ್ರೀನಿವಾಸಾನತ ಮಾಕಲಯಾಚ್ಯುತ | ೩೮೯ |
| ೯೦. | ಶ್ರೀವೆಂಕಟೇಶ ಪಾಹಿಮಾಂತಾವಕಭಕ್ತಿಂ ದೇಹಿ | ೩೯೦ |
| ೯೧. | ಶ್ರೀವೆಂಕಟೇಶ ಮಾಂ ಪಾಲಯ | ೩೯೧ |
| ೯೨. | ಸರ್ವಾಂತರ್ಯಾಮಿ ನೀನೇ ಸರಿ | ೩೯೧ |
| ೯೩. | ಸಲಹೋ ಶ್ರೀನಿವಾಸ ಸದ್ಗುಣ | ೩೯೨ |
| ೯೪. | ಸುರಾಸುರಾರ್ಚಿತ ಸರೋಜಲೋಚನ | ೩೯೩ |
| ೯೫. | ಸೇವೇ ಶ್ರೀರಮಣಂ ಸದಾ | ೩೯೫ |
| ೯೬. | ಹಣ್ಣುಬಂದಿದೆ ಜನರು ಹಣ್ಣು ಕೊಳ್ಳಿರೊ | ೩೯೬ |
| ೯೭. | ಹರಿನೀಲ ಸದೃಶ ನೀಲ ಕನಕ ಚೇಲ | ೩೯೭ |
| ೯೮. | ಹರಿಕೃಪೆಯಲಿ ದೊರದಿತು ಯನಗೀಶಿರಿಕರ ತಂಬೂರಿ | ೩೯೭ |
| ೯೯. | ಹರಿಯೇ ಯನ್ನ ಧೊರೆಯೇ ನಿನ್ನ | ೩೯೮ |
| | **ಲಕ್ಷ್ಮೀದೇವಿ** | |
| ೧೦೦. | ನಂಬಿದೆ ನಿನ್ನ ಪಾದಾಂಬುಜಯುಗಳ | ೩೯೯ |
| ೧೦೧. | ಪಾಲಿಸೆನ್ನ ಪರಿಪಾಲನಶೀಲೆ | ೩೯೯ |
| ೧೦೨. | ಸಾರಸದಳನಯನೆ ಸಲಹೆಮ್ಮನು | ೪೦೦ |

# ಮುದ್ದುಮೋಹನವಿಠಲದಾಸರ ಕೀರ್ತನೆಗಳು

(ದೊಡ್ಡಬಳ್ಳಾಪುರ ಶ್ರೀರಾಘವೇಂದ್ರದಾಸರು)

೧

## ಉಗಾಭೋಗ

ಉಡುಪಿಯಲ್ಲಿಪ್ಪನೆ ಸಡಗರ ನಿನಗ್ಯಾಕೆ
ಬಡವನಾದವನ ಭವಮಡುವಿನೊಳಗೆನೂಕಿ
ಮಿಡುಕಿಸೀನೋಡುವುದು ಥರವೇನೋ
ಒಡಲಿಗೋಸುಗ ನಿನ್ನ ಬೇಡ ಬಂದವನಲ್ಲ
ದೃಢಭಕ್ತಿ ಜ್ಞಾನಕೊಟ್ಟು ರಕ್ಷಿಸೋಧೊರಿಯೆ
ಕಡಲಶಯನ ನಮ್ಮ ಮುದ್ದುಮೋಹನವಿಠಲ
ಗಾಢರತಿಯ ಪಾಲಿಸು ಸುಲಭದಿಂದಾ

೨

## ಉಗಾಭೋಗ

ಏಕೋನಾರಾಯಣಾಸೀತೆಂಬ ಶ್ರುತಿ ಪ್ರತಿಪಾದ್ಯನಾಗಿ
ಮಾಕಮಲಾಸನ ಮೊದಲಾದವರಲ್ಲಿನಿಂತು
ಸಾಕಿಸಲಹಿ ಸಂಹಾರ ಮಾಡುತ್ತ ಜೀವರಾಶಿಯೊಳಗೆನ್ನ
ಸ್ವೀಕಾರ ಮಾಡದೆ ನೂಕಿ ಬಿಸಾಟು ಈಕುಂಭಿಣಿ ಮಧ್ಯದಲ್ಲಿ
ಕಾಕುಮನುಜಾರಿಗಿಂತ ಕನಿಷ್ಠನ್ನಮಾಡಿ
ಸಾಕಲಾರದೆ ಕೈಬಿಡುವಾರೇನೊ
ನಾಕಜಜನಕ ಮುದ್ದುಮೋಹನವಿಠಲ
ಲೌಕೀಕ ಮಾರ್ಗ ಬಿಡಿಸಿ ಹೃತ್ಕರ್ಣಿಕೆಯಲ್ಲಿ ಪೊಳೆಯೋ

## ೩

ವಿಠಲಾ ಎನ್ನಿರೊ ಸುಜನರೆಲ್ಲಾ ಪ

ವಿಠಲಾ ಎಂದಾರೆ ಸುಟ್ಟುಹೋಗೊದು ಪಾಪ ಅ.ಪ

ಪ್ರಾತಃ ಕಾಲದೊಳು ಸ್ನಾನಾದಿಕರ್ಮ ಮುಗಿಸೀವಿಠಲಾ....
ವಾತದೇವನ ದ್ವಾರ ಅರ್ಪಿಸುತ್ತಾ ನೀವು । ವಿಠಲಾ.... ೧

ಗುರುಗಳಲ್ಲಿಗೆ ಪೋಗಿ ವಂದಿಸಿ ಮೆಲ್ಲಾನೆ ವಿಠಲಾ....
ಮರುತಮತದ ಸಚ್ಛಾಸ್ತ್ರಗಳ ನೋಡುತಾ ವಿಠಲಾ.... ೨

ಪಂಚಭೇದ ಪ್ರಾಪಂಚ ಸರ್ವವು ತಿಳಿದು ವಿಠಲಾ...
ಪಂಚಬಾಣನಯ್ಯ ಪಂಚರೂಪದಿ ತೋರುವಾ ವಿಠಲಾ.... ೩

ಶ್ರೀಪ್ರಾರಂಭಮಾಡಿ ಪರಮೇಷ್ಠಿ ಪರಿಯಂತ ವಿಠಲಾ....
ಶ್ರೀಪ್ರಣವ ಪ್ರತಿಪಾದ್ಯಗಿವರು ಪ್ರತಿಬಿಂಬರೆಂದು ವಿಠಲಾ.... ೪

ಮಾತುಮಾತುಗಳೆಲ್ಲಾ ಶ್ರೀಹರಿಸ್ತೋತ್ರವೆಂದು ವಿಠಲಾ....
ಆತುಮಾಂತಾರಾತ್ಮನೆಂದು ಕೂಗುತ ಒಮ್ಮೆ ವಿಠಲಾ.... ೫

ತೀರ್ಥಕ್ಷೇತ್ರಗಳಿಗೆ ಪೋಗಿ ಬರುವಾಗ ವಿಠಲಾ....
ಪಾರ್ಥಸಖನ ಪ್ರೇರಣೆಯಿಂದ ಮಾಡಿದೆವೆಂದು ವಿಠಲಾ.... ೬

ನಂಬಿದ ಜನರೀಗೆ ಬೆಂಬಲನಾಗುವ ವಿಠಲಾ....
ಸಂಭ್ರಮದಿಂದಾ ಸಂರಕ್ಷಿಸುವನೆ ಇವನೂ ವಿಠಲಾ.... ೭

ಕಂಚಿಕಾಳಾಹಸ್ತಿ ಶ್ರೀರಂಗ ಮೊದಲಾಗಿರುವ ವಿಠಲಾ...
ವಂಚನೆಯಿಲ್ಲಾದೆ ಭಜಿಸಿದವರ ಪೊರೆವಾ ವಿಠಲಾ.... ೮

ಪಂಚಪ್ರಾಣಾರಲಿನಿಂತು ಕಾರ್ಯಮಾಳ್ಪ ವಿಠಲಾ....
ಸಂಚಿತಾಗಾಮಿ ಕರ್ಮ ಇವನಿಂದ ನಾಶವೆಂದು ವಿಠಲಾ.... ೯

ಊರ್ಧ್ವಪುಂಡ್ರಗಳು ದ್ವಾದಶನಾಮ ಇಡುವಾಗ ವಿಠಲಾ....
ಶುದ್ಧನಾಗೀ ಶುಭ್ರಹೊಸ ವಸ್ತ್ರ ಹೊದುವಾಗ ವಿಠಲಾ..... ೧೦

ಪಂಚಮುದ್ರೆಗಳಲಿ ಪಂಚರೂಪದಿ ಇರುವ ವಿಠಲಾ...
ನಿರ್ವಂಚನಾಗಿ ಧರಿಸಿದವರಿಗೊಲಿವಾ ವಿಠಲಾ... ೧೧

ವಾದ್ಯತುಂಬಿಸಿ ಶಿರಸಿನ ಪರಿಯಂತ ವಿಠಲಾ...
ವೇದ್ಯೈಕವೇದ್ಯ ವಿಶ್ವಾಮೂರ್ತಿ ಕಾರ್ಯಗಳೆಂದು ವಿಠಲಾ.... ೧೨

ಚೇತನಾ ಚೇತನ ಜಡದೊಳಗೆ ನೀವು ವಿಠಲಾ...
ಪ್ರೀತಿಯಿಂದಾಲಿ ಪೂಜೆಮಾಡಿದವರಾಗೆ ಒಲಿವ ವಿಠಲಾ.... ೧೩

ಈ ರೀತಿಯಲಿ ಅನಂತಾನಂತ ಪರಿ ಚಿಂತಿಸಿ ವಿಠಲಾ...
ಶಾರೀರದೊಳಿರುವ ಪ್ರಾಜ್ಞನಲಿ ಕೂಡಿಸಿ ವಿಠಲಾ.... ೧೪

ಮಧ್ವಾಂತರ್ಯಾಮಿಯಾಗಿ ಉಡುಪಿಯಲ್ಲಿ ನಿಂತ ವಿಠಲಾ...
ಮುದ್ದುಮೋಹನ್ನ ವಿಠಲನೆ ಜಗಕೆ ಕರ್ತು ವಿಠಲಾ..... ೧೫

೪

## ಸುಳಾದಿ

### ಧ್ರುವತಾಳ

ಶ್ರೀನಿವಾಸನೆ ನೀನು ಬ್ಯಾಗನೆ ಬಂದು
ಸಾನುರಾಗದಿ ಸಂಸಾರ ಬಿಡಿಸೋ,
ಭಾನುಕೋಟಿ ಪ್ರಕಾಶಭಾಗ್ಯನಿಧಿಯೆನ್ನ
ಮಾನವ ಕಾಯ್ವುದು ಮಂಗಳಾಂಗನೆ

ಏನೇನು ಕಾರ್ಯಗಳು ನಿನ್ನಾಧೀನವಾಗಿರಲು
ನಾನುನನ್ನದು ಎಂದು ಮಮತೆಯನೆ ಕೊಟ್ಟು
ಅನ್ಯಾಯದಿಂದ ಎನ್ನದಣಿಸುವುದು
ದಾನವಾಂತಕರಂಗ ಮುದ್ದುಮೋಹನವಿಠಲ
ನೀನೆಗತಿಯೆಂದವಗೆ ನಿರ್ಭಯವೊ ಹರಿಯೆ ೧

## ಮಠ್ಯತಾಳ

ಎನ್ನಪರಾಧಗಳು ಅನಂತವಿರುವದನ್ನು
ನಿನ್ನಸ್ಮರಣೆ ಒಂದೆ ಸಾಕೊ ಹರಿಯೆ
ಬನ್ನ ಬಡಿಸುವದ್ಯಾಕೊ ಮನ್ಮನದಲಿಪೊಳೆದು
ಚೆನ್ನಾಗಿ ಸಲಹೋಘನ್ನಮಹಿಮಾ ಮುದ್ದುಮೋಹನವಿಠಲನೇ ೨

## ತ್ರಿವಿಡಿತಾಳ

ಬಿಂಬನೆನೆಸಿಕೊಂಡು ಪ್ರತಿಬಿಂಬಗಳೊಳಗೆಕಾರ್ಯ
ಅಂಭ್ರಣಿಸಹಿತವಾಗಿ ನೀಮಾಡಿ ಮಾಡಿ ಸೂವಿ
ಅಂಬುಜನಾಭಾನೆ ಎನ್ನಾಡಂಭಕ ಭಕುತಿ ಬಿಡಿಸಿ
ಸಂಭ್ರಮದಿಂದ ಕಾಯೊ ಕರುಣಾನಿಧೆ
ಶಂಬರಾರಿಯಜನಕ ಮುದ್ದುಮೋಹನವಿಠಲ
ಕಂಬದಿಂದಲಿ ಬಂದು ಭಕುತನ್ನಸಲಹಿದ ದೇವ ೩

## ಅಟ್ಟತಾಳ

ಏನೇನುದಾನ ಅನಂತ ಮಾಡಲೇನು
ಕಾನನದಲಿ ಪೋಗಿ ತಿರುಗಿತಿರುಗಿದಂತೆ
ಜ್ಞಾನದಿಂದಲಿ ತಾರತಮ್ಯಾನುಸಾರ ನಿನ್ನ
ಧ್ಯಾನವನ್ನ ಒಂದು ಕ್ಷಣವಾದರೂತೋರಿಸೊ
ವಾನರ ವಂದ್ಯ ಮುದ್ದುಮೋಹನವಿಠಲ
ನಾನಾವಿಧದಿಂದ ನಂಬಿದೆನೊ ಹರಿಯೇ ೪

ಆದಿತಾಳ

ನೀನೆ ಅನಾಥಬಂಧು ನೀನೆ ಅದ್ಭುತಮಹಿಮ
ನೀನೆ ಅಸುರಾಂತಕ ನೀನೆ ಅಮರಾದಿವಂದ್ಯ
ನೀನೆ ಭವರೋಗ ವೈದ್ಯ ನೀನೆ ಭಕ್ತವತ್ಸಲ
ನೀನೆ ಪರಿಪೂರ್ಣ ಸುಖ ನೀನೆ ಪರಂಜ್ಯೋತಿ
ನೀನೆ ಪರಬ್ರಹ್ಮ ನೀನೆ ಪುರುಷೋತ್ತಮ
ನೀನೆ ಪುಣ್ಯೈಶ್ವರ್ಯ ನೀನೆ ನಿರ್ಮಲ ಜ್ಞಾನ
ನೀನೆ ಶಶಿ ಕೋಟಿಲಾವಣ್ಯ ನೀನೆ ಮುದ್ದುಮೋಹನ ವಿಠಲ
ನೀನೆ ವೇಗದಿ ಬಂದು ನೀನೆ ರಕ್ಷಿಸು ಎನ್ನನು ೫

ಜೊತೆ

ಸ್ವಾಮಿ ಪುಷ್ಕರಣಿವಾಸ ಕಾಮಿತಫಲದಾನೆ
ಶ್ರೀಮನೋಹರ ನಮ್ಮ ಮುದ್ದುಮೋಹನ ವಿಠಲ

೫

ಪರಿಪಾಲಿಸುವುದು ಎಮ್ಮನು ಪರಮಾತ್ಮನ ರಾಣಿ
ಕರುಣಾಕರನ ಪಾದಸ್ಮರಣೆಯನೆ ಕೊಟ್ಟು ಪ

ಅಮರೇಶ ವಂದ್ಯಳೆ ಕಮಲಾಲಯೆ ನೀಬಂದು
ಶ್ರಮವಿಲ್ಲದೆಯನ್ನೆಯ ಮಮತೆಯನು ಬಿಡಿಸು ೧

ವಸುದೇವಸುತನ ರಾಣಿ ಅಸುರ ಸಂಹಾರಳೇ ನಿನ್ನ
ವಶವಾದ ಮೇಲೆ ಅಂಭ್ರಣಿಯೆ ನಸುನಗುತ ಈಗ ೨

ಮಂದರೋದ್ಧಾರಎನ್ನ ಸಂದುಸಂದಲಿ ಕಾರ್ಯವ
ನಿಂದುಮಾಡಿಸುವಂಥದನ್ನು ಚಂದದೀಬೋಧವಕೊಟ್ಟು ೩

ಮಂಗಳಾಂಗಿಯೆ ನಿನ್ನ ಮುಂಗಾಣದೆಸೊರಗಿದೆ
ಅಂಗಜಪಿತನ ಜಾಯೇ ಭಂಗಪಡಿಸದೆಬೇಗಾ ೪

ಪದ್ಮಸಂಭವನಮಾತೆ ಮುದ್ದುಮೋಹನವಿಠಲ ಪದ
ಪದ್ಮಗಳನೀನೊಲಿದು ಹೃತ್ಪದ್ಮದಲಿ ಕಾಣಿಸುತ ೫

೬

ಪಾರ್ವತೀಪತಿಯೆ ಎನ್ನಪಾಲಿಸುವುದು ಪ

ದೂರು ನೋಡದೇ ಗುರುವ ಸಾರುವುದು ಸತತಾ ಅ.ಪ

ಭಜಕರ ಸರ್ವಕಾವನ ನಿಜದಾಸರೊಳ್ಕೂಡಿಸಿ
ಭಜನೆಯ ಮಾಡಿಸೋಬೇಗ ಭುಜಗಭೂಷಣನೆನೀನು ೧

ನಂದಿ ವಾಹನನೆ ಎನ್ನಾ ಮಂದಮತಿಗಳ ಹರಿಸಿ
ಕಂದುಗೊರಳನೆ ನೀನು ಆನಂದದಿಂದಲಿ ಕಾಯೋ ೨

ದೂರ್ವಾಸಮುನಿಯೇ ಇಂದು ಗರ್ವವ ಬಿಡಿಸಿ
ಕಾರಣಕರ್ತಹರಿಯೆ ಶ್ರೀರಮಣನ ತೋರೋ ೩

ಭೂತನಾಥನೆ ನೀನು ಮಾತನು ಲಾಲಿಸುವುದು
ದಾತಾನೆ ಸಲಹೊ ಎನ್ನಾ ಪಾತಕವನು ಹರಿಸಿ ೪

ಶುದ್ಧಭಕುತಿಯನೆ ಕೊಟ್ಟುಸದ್ವೈಷ್ಣವರ ಪ್ರೀಯನೆ
ಮಧ್ವಾಂತರ್ಗನಾದ ಮುದ್ದುಮೋಹನವಿಠಲನ ತೋರು ೫

## ೭

ವೃಂದಾವನ ದರುಶನವಾಯಿತು
ಇಂದು ಪೋದವುಭವ ವೃಂದಗಳೆಲ್ಲ ಪ

ಕುಂದು ಕೊರತೆಯಿಲ್ಲದ ಜ್ಞಾನಗಳೂ
ಬಂದು ಘಟಿಸಿತು ಭಕುತಿ ವೈರಾಗ್ಯ
ಇಂದಿನದಿನ ಆನಂದಪುಟ್ಟಿ ಹರಿ
ದ್ವಂದ್ವ ಪದಗಳನು ತೋರಿಸುವಂಥ ೧

ಹಾಟಕರತ್ನ ಖಚಿತವಾದಂಥಾ
ಮಾಟಮಾದವು ಆಭರಣಗಳೂ
ಸಾಟಿಯಿಲ್ಲದ ಪಷ್ಪಮಾಲವ ಧರಿಸಿದ
ಕೋಟಿ ಸೂರ್ಯಪ್ರಭೆ ಸೋಲಿಸುವಂಥ ೨

ನೋಡಿದನಯನ ಅನ್ಯತ್ರನೋಡವೂ
ಪಾಡಿದ ಜಿಹ್ವಾ ಅನ್ಯತ್ರಪಾಡವೂ
ನಾಡಿನೊಳಿಂಥಾ ಶ್ರೀಪಾದ ರಾಜರಿಗೆ
ಈಡುಗಾಣೆ ಮುದ್ದುಮೋಹನವಿಠಲ ೩

# ತಂದೆ ಮುದ್ದುಮೋಹನವಿಠಲದಾಸರ
# ಕೀರ್ತನೆಗಳು

(ಪರಮಪ್ರಿಯ ಸುಬ್ಬರಾಯದಾಸರು)

# ಭಗವಂತನ ಸಂಕೀರ್ತನೆ

೧

## ಉಗಾಭೋಗ

ಮಾಪತೇ ಶ್ರೀ ಪತೇ
ತಂದೆ ಮುದ್ದುಮೋಹನ್ನ ವಿಠಲ
ಭೂಪತೇ ಮಾಂಪಾಹಿ ರಮಾಪತೇ




೨

## ಶ್ರೀ ಗೋವಿಂದ ಭಜನಾವಳಿ

ಶ್ರೀ ನಾರಾಯಣ ಜಯಗೋವಿಂದ
ಸದ್ಗುರು ಸಿಂಧೋ ಜಯಗೋವಿಂದ
ವೈಕುಂಠಾಲಯ ಜಯಗೋವಿಂದ
ಆಶ್ರಿತಬಂಧೋ ಜಯಗೋವಿಂದ
ಲಕ್ಷ್ಮೀನಾಯಕ ಜಯಗೋವಿಂದ
ದೋಷವಿದೂರ ಜಯಗೋವಿಂದ
ಬ್ರಹ್ಮೇಶಾರ್ಚಿತ ಜಯಗೋವಿಂದ
ಮತ್ಸ್ಯಶರೀರ ಜಯಗೋವಿಂದ
ಕಚ್ಛಪರೂಪೀ ಜಯಗೋವಿಂದ
ಮ್ಲೇಂಛ ಕುಠಾರ ಜಯಗೋವಿಂದ
ಆದಿವರಾಹ ಜಯಗೋವಿಂದ

ಚಿನ್ಮಯ ದೇಹ ಜಯಗೋವಿಂದ
ಶ್ರೀ ನರಸಿಂಹ ಜಯಗೋವಿಂದ
ವೇದಸುವೇದ್ಯ ಜಯಗೋವಿಂದ
ವಾಮನರೂಪೀ ಜಯಗೋವಿಂದ
ವೆಂಕಟನಾಥ ಜಯಗೋವಿಂದ
ಭಾರ್ಗವರಾಮಾ ಜಯಗೋವಿಂದ
ವೃದ್ಧಿವಿನೋದ ಜಯಗೋವಿಂದ
ರಾವಣ ಶತ್ರು ಜಯಗೋವಿಂದ
ಸಪ್ತಗಿರೀಶ ಜಯಗೋವಿಂದ
ರಾಕ್ಷಸ ಶತ್ರು ಜಯಗೋವಿಂದ
ಅದ್ಭುತಚರ್ಯ ಜಯಗೋವಿಂದ
ಗೋಕುಲಚಂದ್ರ ಜಯಗೋವಿಂದ
ನಾರದಗೇಯಾ ಜಯಗೋವಿಂದ
ಸೀತೆಸಹಾಯ ಜಯಗೋವಿಂದ
ಮಾರುತಿ ಸೇವ್ಯ ಜಯಗೋವಿಂದ
ಬುದ್ಧಶರೀರ ಜಯಗೋವಿಂದ
(ಕಲ್ಕ್ಯಾವತಾರ) ಜಯಗೋವಿಂದ
ಕೇಶವವಿಷ್ಣೋ ಕೃಷ್ಣಮುಕುಂದ
ವಾರಿಜನಾಭ ಶ್ರೀಧರ ರೂಪ
ತಾರ್ಕ್ಷ್ಯತುರಂಗ ಶ್ರೀದಶುಭಾಂಗ
ಸಜ್ಜನ ಸಂಗೇ ಚಂಚಲಪಾಂಗ
ದುರ್ಜನ ಭಂಗಂ ಸಜ್ಜನ ಸಂಗಂ
ದೇಹಿಸದಾಮೇ ದೇವವರೇಣ್ಯ
ಪಾಪವಿನಾಶಂ ಪುಣ್ಯಸಮೃದ್ಧಿಂ
ಕಾಯವಿರಕ್ತಿ ಕರ್ಮಸುರಕ್ತಿಂ
ಪಾದಯುಗೇತೇ ಪಾವನದಾಸ್ಯಂ

ನಿರ್ಮಲ ಭಕ್ತಿಂ ನಿಶ್ಚಲಬುದ್ಧಿಂ
ನಿಸ್ತುಲ ಸೇವಾಂ ದೇಹಿ ಸದಾಮೇ
ದೇವನಮಸ್ತೇ
ಪ್ರಸ್ತುತಿ ದಿವ್ಯಂ ಸ್ವೀಕುರು ತಂದೆ
ಮುದ್ದೂ ಮೋಹನ ವಿಠಲಂ ವಂದೇ

೩

## ಉಗಾಭೋಗ

ಶ್ರೀ ರಾಮನಾಮಕೆ ಸರಿ ಇಲ್ಲ
ಶ್ರಿ ಕೃಷ್ಣನಾಮಕೆ ಬೆಲೆ ಇಲ್ಲ
ಶ್ರೀ ನರಹರಿನಾಮಕೆ ಮಿಗಿಲಿಲ್ಲ
ಶ್ರೀ ತಂದೆಮುದ್ದು ಮೋಹನ ವಿಠಲನ
ದಾಸರದಾಸರಿಗೆ ಭಯವಿಲ್ಲ

೪

## ಚೂರ್ಣಿಕೆ

ಶ್ರಿ ಹರಿಯೇ ನಿನ್ನುಪಕೃತಿಯು ಮರೆಯದಂತಿರಿಸೆಮ್ಮ
ಉರಗಾಧಿಶಯನಾ ಕೃಷ್ಣಾ ದ್ವಿಜರಾಜಗಮನಾ
ಕಾಳಿಯ ದಮನಾ ಭುವನತ್ರಯಾಕ್ರಮಣ
ಪದ್ಮಾಲಯಾ ರಮಣ ೧

ಧನದಮಾತಿರಲಿ ಗೋಧನದ ಮಾತಿರಲಿ
ಭೂ ಧನದ ಮಾತಿರಲಿ ಶೌರೀ
ಧನವೆಲ್ಲವೂ ಕರ್ಮವನು ಬೆನ್ಹಿಡಿದು
ಬಹದೆನುತಾಡುವರೊ ಮುರಾರಿ
ತನುವು ನಿನ್ನಯ ಸೇವೆಯನು ಮಾಡುತಿರಲಿ ಕಂಸಾರಿ
ಮನವು ನಿನ್ನಯರೂಪವನು ನೆನೆಯುತಿರಲಿ ದುರಿತಾರಿ

ಈ ಕೃಪೆಯಭೂರೀ ದುರ್ಜನವಿದಾರೀ
ಸುಜನೋಪಕಾರೀ ಗಿರಿನಾಥ ಧಾರೀ
ಪಾಪಹಾರಿ ದಿತಿಜಾರಿ ನಿರ್ವಿಕಾರಿ ಉದಾರಿ ೨

ನಾಕದೊಳಗಿರಲಿ ಭೂಲೋಕದೊಳಗಿರಲಿ
ಅಧೋಲೋಕದೊಳಗಿರಲಿ ನಾನೂ
ಶ್ರೀಕಾಂತ ನಿನಗೆ ಬೇಕಾದವನೆನುತ್ತ
ಸಾಕಬೇಕೆನ್ನ ನೀನೂ ಭಕ್ತಜನಕಾಮಧೇನು
ಹೇಳಬೇಕಾದುದಿನ್ನೇನು ೩

ಬಿದ್ದಿರುವೆನ್ನೈ ರಜೋಗುಣದಿ
ಒದ್ದ್ಯಾಡುತಿಹೆನೊ ಸಂಕಟದಿ
ಇದ್ದು ಫಲವೇನೊ ಈ ಭವದಿ
ಉದ್ಧರಿಸು ಕೃಪಾಜಲಧಿ ೪

ಬದ್ಧನಾನಯ್ಯ ಈ ಜಗದಿ
ಶುದ್ಧಬುದ್ಧಿಯ ನೀಯೊ ಮುದದಿ
ಕೃದ್ಧನಾಗದಿರೆನ್ನ ದುಷ್ಕೃತದಿ
ಎದ್ದು ಬಾರೆನ್ನಡಿಗೆ ದಯದಿ
ಶ್ರೀ ತಂದೆಮುದ್ದುಮೋಹನ್ನವಿಠಲ ಭಾಗ್ಯನಿಧಿ ೫

## ಆತ್ಮನಿವೇದನೆ

೫

### ಉಗಾಭೋಗ

ಅಪ್ಪಾನನಾಮವನು
ಒಪ್ಪೊತ್ತಾದರು ಭಜಿಸಿ
ಒಪ್ಪೊತ್ತುಂಬೇನಯ್ಯ
ತಂದೆಮುದ್ದುಮೋಹನವಿಠಲಾ

೬

## ಉಗಾಭೋಗ

ಎನ್ನೊಡೆಯನೆ ಹನುಮ
ಹನುಮನೇಎನ್ನೊಡೆಯ
ಘನ್ನ ಕದರುಮಂಡಲಗಿ ಹನುಮಯ್ಯ
ಎನ್ನ ಒಡೆಯ
ಎನ್ನಯ್ಯ ಶ್ರೀ ತಂದೆ
ಮುದ್ದುಮೋಹನವಿಠಲಭಕ್ತ
ಘನ್ನ ಹನುಮಯ್ಯನೇ ಎನ್ನ ಒಡೆಯಾ

೭

## ಉಗಾಭೋಗ

ನಾನು ನನ್ನದು ಎಂಬುದಾವ ಕಾಲಕುಬೇಡ
ನೀನು ನಿನ್ನದು ಎಂಬ ದಿವ್ಯಮಂತ್ರವೇ ಇರಲಿ
ಅನುಗಾಲನುಡಿಸಿದನು ಎನ್ನಿಂದ
ಶ್ರೀ ತಂದೆಮುದ್ದುಮೋಹನವಿಠಲಾ

೮

## ಉಗಾಭೋಗ

ಪರಮಪ್ರಿಯನೇ ಗುರುವೆಂದ ಮಾತ್ರದಿಂ
ವರ ತಂದೆಮುದ್ದುಮೋಹನವಿಠಲ ಒಲಿವ
ಕರಿಗಿರಿ ಯಾತ್ರೆಮಾಡದವ ಭವ
ಕರಿಕರಿಯ ಪಡುವ
ತಂದೆಮುದ್ದುಮೋಹನವಿಠಲ

## ೯

### ಉಗಾಭೋಗ

ರಾಮಕೃಷ್ಣ ಹರಿ ವಿಠಲ
ರಾಮಕೃಷ್ಣ ನರಹರಿ ವಿಠಲ
ತಂದೆ ಮುದ್ದುಮೋಹನ ವಿಠಲ
ದಾಸೋಹಂ ತವದಾಸೋಹಂ

## ೧೦

### ಉಗಾಭೋಗ

ಹರಿದಾಸರ ಸಂಗದಿಂದ
ಹರಿನಿನ್ನಸಂಗವಾಯಿತೋ ಎನಗೆ
ತಂದೆಮುದ್ದುಮೋಹನವಿಠಲಾ

# ಲೋಕನೀತಿ

## ೧೧

### ಉಗಾಭೋಗ

ಕಲಿಇಲ್ಲದ ಸ್ಥಳವಿಲ್ಲ
ಕಲಹವಿಲ್ಲದ ಮನೆ ಇಲ್ಲ
ಕಲಿಭಂಜನ ಭೀಮನೊಡೆಯ
ತಂದೆಮುದ್ದುಮೋಹನವಿಠಲ ಬಲ್ಲ

## ೧೨

### ಉಗಾಭೋಗ

ಗುರುಲೀಲೆಯನ್ನು ಪಾಡುತ್ತ
ಹರಸುರಬ್ರಹ್ಮಾದಿಗಳು
ಲಕುಮೀಪತಿಯ ಕೂಗುವರ್ಯೆಯಾ
ತಂದೆಮುದ್ದುಮೋಹನವಿಠಲಾ

## ೧೩

ಗುರುವಿನ ಮರೆಯಾದಿರಮ್ಮ ಪ

ಅಂಕಿತವನೆ ಇತ್ತಸಿರಿ ಗುರುವಿನ ನೀನು
ಮನದೊಳು ನೆನೆಯಬೇಕಮ್ಮ ತಂಗಿ ಅ.ಪ

ಗುರುವಿನ ಮರೆತರೆ ನಿನಗೆ ಥರಥರ ನರಕ
ಥರಥರನರಕವ ಅನುಭವಿಸಬೇಕಮ್ಮ ತಂಗೀ ೧

ಜ್ಞಾನಾನಂದಾತ್ಮಕನಾದ ಶ್ರೀಹರಿಯನ್ನು ಗುರು
ವಿನದ್ವಾರಾ ನೀ ತಿಳಿ ಮಂಗಳಾಂಗಿ ೨

ಗುರುವೆ ತಂದೆಯು ಬಂಧು ಬಳಗಾವೆಂದು ಅ
ಕ್ಕರೆಯಿಂದ ನೀ ನೆನೆಯಬೇಕಮ್ಮಾ ೩

ಗುರುವಿನ ಸೇವೆಯ ಮಾಡುತ್ತ ಗುರುಗಳ
ಕೃಪೆಗೆ ಪಾತ್ರರಾಗಿ ಬಾಳಬೇಕಮ್ಮಾ ೪

ಮಂಗಳ ಮಹಿಮ ಶ್ರೀ ತಂದೆಮುದ್ದುಮೋಹನ್ನವಿಠಲ ದಾಸರೆ
ನಿನಗೆ ಸದ್ಗುರು ಎಂದು ತಿಳಿಯಮ್ಮ ತಂಗಿ
ಈ ಮಾತು ಪುಸಿಯಲ್ಲ ಮರೆಯಬೇಡಮ್ಮ ತಂಗೀ ೫

## ೧೪

ನಿಜವಿರಬೇಕು ಸಜ್ಜನರಿಗೆ ಒಂದು ಪ

ಅಜಜನಕಾನೆ ಈ ತ್ರಿಜಗಕೆ ಒಡೆಯನೆಂದು ಅ.ಪ

ಉದಯಾಸ್ತಮಾನ ಮಾಡುವ ವ್ಯಾಪಾರವು
ಪದುಮಾಕ್ಷ ಕೃಷ್ಣನ ಸೇವೆಯೆಂದು
ಸುದತಿಯೊಡನೆ ಕೂಡಿ ಮಧುರ ಮಾತುಗಳಾಡಿ
ಮಧುವೈರಿ ಚರಿತೆಯ ಮುದದಿ ಕೇಳುವಂಥ ೧

ಮಡದಿ ಮಕ್ಕಳು ತನ್ನ ಒಡಹುಟ್ಟಿದವರೆಲ್ಲ
ಒಡೆಯನ ಅಡಿಗೆ ಸೇವಕರು ಎಂದು
ದೃಢದಿ ತಿಳಿದು ಮೃಡನೊಡೆಯನ ಪಾದವ
ಬಿಡದೆ ಭಜಿಸುವಂಥ ದೃಢ ಬುದ್ಧಿ ಎಂಬುವ ೨

ಮಾತಾಪಿತರು ಸುತ ಭ್ರಾತರಿಷ್ಟಾಬಂಧು
ವ್ರಾತ ರೆಲ್ಲರು ಹರಿಗೆ ದೂತರೆಂದು
ಮಾತುಳಾಂತಕ ತಂದೆಮುದ್ದುಮೋಹನವಿಠಲ
ಖ್ಯಾತಾನೆಂದು ಪ್ರೀತಿ ಪೊಂದುವುದಕ್ಕೆ ೩

## ೧೫

ಪತ್ಯಂತರ್ಗತ ನಾರಸಿಂಹ ಎನುತಾ
ಸಕ್ತಿಯಿಂ ಜಪಿಸಬೇಕಮ್ಮ ಪ

ಬತ್ತಿಯ ಮಾಳ್ಪಾಗ ಬಾಲರಾಡಿಸುವಾಗ
ಪ್ರತ್ಯಾಹದಲಿ ಗೃಹ ಕೃತ್ಯವಾಚರಿಸುವಾಗ ಅ.ಪ

ಪೊಡವಿಯೊಳ್ ನರಜನ್ಮಪಡೆದೂ ಕೆಟ್ಟ
ನಡತೆಯವರ ಕೂಟ ಮರೆದೂ
ದೃಢ ಭಕ್ತಿಯಿಂ ಲಜ್ಜೆ ತೊರೆದೂ
ನುಡಿನುಡಿಗ್ಹರಿ ಎಂದು ಬಾಯ್ದೆರೆದು
ಅಡುಗೆಯ ಮಾಡಿ ಕಾರೊಡೆಯಗರ್ಪಿಸುವಾಗ
ಒಡೆಯಾದಿಗಳಿಗನ್ನ ಬಡಿಸುವಾಗಲು ನಿತ್ಯ ೧

ಪತಿದೈವವೆಂದು ಭಾವಿಸುವ ಸತಿ
ಗತಿಶಯ ಗತಿಸಲ್ಲಿಸುವ
ಪತಿತರ ಪಾವನ ಗೈವ ಲಕ್ಷ್ಮೀ
ಪತಿಯೆ ಸದ್ಭಕ್ತರ ಕಾವ
ಅತಿಹಿತದಿಂದ ಸಂತತ ಹರಿದಾಸರಿ
ಗತಿಸೇವಾರತಿಯಿಂದ ಕೃತಕೃತ್ಯಳಾಗುತ ೨

ಪದ್ಮಸಂಭವೆ ಪದ್ಮಜಾತ ವಾತ
ಪದ್ಮಜ ವಲ್ಲಭ ಎನುತ
ಕದ್ರುಜ ರುದ್ರಾದಿ ವಿನುತ ತಂದೆ
ಮುದ್ದುಮೋಹನ ವಿಠಲ ನೀತಾ
ಅದ್ವಿತೀಯನು ಎಂದು ಬುದ್ಧ್ಯಾದಿಂದ್ರಿಯದಲ್ಲಿ
ನಿದ್ರೆಯೊಳಾದರು ನೀ ಮರೆಯ ಬ್ಯಾಡ ೩

## ೧

## ಗಣೇಶ

ಹಿತಮತಿಯ ಪಾಲಿಸೊ ಪ

ಗತಿಯ ಕಲ್ಪಿಸಿ ಸಿರಿಪತಿಯ ಪಾದದಿ ಅ.ಪ

ಗಜವದನನೆ ಎನ್ನ ನಿಜಭಕುತಿಯೊಳ್ನಿನ್ನ
ಭಜನೆ ಮಾಡುವಂಥ ನಿಜವ ಪಾಲಿಸಿ ೧

ಕರುಣಾಕರ ತವ ಚರಣಾಶ್ರಿತರಘ
ಹರಣ ಮಾಡಿ ನಿನ್ನ ಸ್ಮರಣೆಯ ಕೊಟ್ಟು ೨

ದೀನನಾಗಿ ನಾ ನಿನ್ನ ಸನ್ನಿಧಾನಕೆ ಬಂದೆ
ಜ್ಞಾನವಿತ್ತು ಕಾಯೋ ಈಗ ಪ್ರಾಣನಾಥ ವಿಠಲನಲ್ಲಿ ೩

## ೨

## ಭಗವನ್ನಾಮ

ಅಂಬುಜ ಮುಖಿಯರು ಕಂಬುಕಂಠೆಯರು
ಅಂಬರದಲಿ ನಾಟ್ಯವಾಡಿದರು ಪ

ಕುಂಭಿಣಿ ಪತಿ ಶ್ರೀ ಕೃಷ್ಣನರಥ ಬರೆ
ಸಂಭ್ರಮದಿಂದಲಿ ಪಾಡಿದರು ಅ.ಪ.

ಬಾಜ ಬಜಂತ್ರಿಯ ವಾದ್ಯರಭಸದೊಳು
ಮೋಜಿನಿಂದಲಿ ಹರಿ ಬರುತಿರಲು
ಸೋಜಿಗ ಪಡುತಲಿ ರಾಜ ವದನೆಯರು
ಜಾಜಿಮಲ್ಲಿಗೆ ಹೂವ ಬೀರಿದರು ೧

ವೇದ ಘೋಷಗಳಿಂದ ಮೋದಪಡುತ ಹರಿ
ಸಾಧುಜನರ ಕೂಡಿ ಸರಸದಲಿ
ಬೀದಿಯೊಳ್ ಬರುತಿರೆ ಮಾಧವರಾಯಗೆ
ಸೂಜಿಮಲ್ಲಿಗೆ ಹೂವ ಬೀರಿದರು ೨

ಕನ್ನಡಿ ಮಂಟಪ ಮಧ್ಯದೊಳಗೆ ಹರಿ
ರನ್ನೆಯರೊಡಗೂಡಿ ಬರುತಿರಲು
ಸನ್ನುತಾಂಗ ಶಿರಿ ಪ್ರಾಣನಾಥ ವಿಠಲನ
ಸಂಭ್ರಮದಿಂದಲಿ ಸಾರಿದರು ೩

೩

ಅಲ್ಲಿನೋಡಿ ಶ್ರೀನಿವಾಸನ ಪ

ಪುಲ್ಲನಾಭನು ಸಿರಿನಲ್ಲೆಯಿಂದೊಪ್ಪಿರುವುದ ನೋಡಿ ಅ.ಪ

ಶೇಷನ ಫಣೆಯೊಳು ವಾಸವ ಮಾಡುತ
ದಾಸಜನರ ಮನ ತೋಷಪಡಿಸುವುದ ನೋಡಿ ೧

ಆದರದಿಂದಲಿ ಸಾಧನಪುರದೊಳು
ಸಾಧು ಜನರ ಮನ ಮೋದಪಡಿಸುವುದ ನೋಡಿ ೨

ಪ್ರಾಣನಾಥವಿಠಲನು ಸಾನುರಾಗದಲಿ ವೇಣು
ಗಾನವ ಮಾಡುತ ಸಿರಿ ಮಾನಿನಿಯಿಂದೊಪ್ಪಿರುವುದ ನೊಡಿ ೩

೪

ಆರತಿಯನೆತ್ತುವೆನು ವಾರಿಜಾಕ್ಷ ಕೃಷ್ಣ ನಿನಗೆ ಪ

ತಾಮರಸದಳಾಕ್ಷ ನಿನಗೆ ಹೇಮದ ತಟ್ಟೆಯನು ಪಿಡಿದು ಅ.ಪ

ಮಾರಸುಂದರ ಮೋಹನಾಂಗ ಸಾರಸಾಕ್ಷ ಕೃಪಾಪಾಂಗ
ನಾರಿಜನರ ಮತ್ತಭೃಂಗ ಧೀರ ಮಂಗಳಾಂಗ ನಿನಗೆ ೧

ಕಮಲ ನಯನ ಹರಿಯೆ ನಿನಗೆ ವಿಮಲಮುತ್ತಿನ ಆರತಿಯ
ಕಮಲ ಮುಖಿಯು ಕರದಿ ಪಿಡಿದು ಕಮಲವದನ ಕೃಷ್ಣ ನಿನಗೆ ೨

ಜಾಣ ಪ್ರಾಣನಾಥ ವಿಠಲ ಆಣಿ ಮುತ್ತಿನ ಆರತಿಯ
ಜಾಣತನದಿ ಕರದಿ ಪಿಡಿದು ಪ್ರಾಣಕಾಂತ ಕೃಷ್ಣ ನಿನಗೆ ೩

೫

ಇಷ್ಟೇ ಬೇಡುವೆ ನಾ ನಿನಗೆ ಕರವ ಮುಗಿದು ಪ

ಅಷ್ಟಸೌಭಾಗ್ಯ ಕೊಟ್ಟು ನೀ ಎನ್ನ
ಕಟ್ಟುಬಿಡಿಸೆಂದು ಬೇಡೆನೊ ಕೃಷ್ಣರಾಯ ೧

ಸೃಷ್ಟಿಗೊಡೆಯ ನಿನ್ನಿಷ್ಟವಿದ್ದಂತಾಗಲಿ
ಶಿಷ್ಟಜನರ ಸಂಗ ಕೊಟ್ಟೆ ರಕ್ಷಿಸು ಎಂದು ೨

ಜ್ಞಾನಿಗಳರಸ ಜಾಣ ಪ್ರಾಣನಾಥ ವಿಠಲರಾಯ
ಸಾನುರಾಗದಿ ನಿನ್ನಧ್ಯಾನಕೊಟ್ಟು ಬಹು
ಮಾನಿಯೆಂದೆನಿಸೆಂದು ೩

೬

ಕರಿರಾಜ ವರದ ಕಾಯೊ ಪ

ವರ ಕರಿರಾಜ ವರದ ಕಾಯೊ
ಮರೆಯದೆ ಎನ್ನ ಕರವ ಪಿಡಿದು ೧

ವರಕರಿರಾಜವರದ ಕಾಯೊ
ಶರಣರ ಚರಣ ಸ್ಮರಣೆಯ ಕರುಣಿಸಿ ೨

ದೀನವತ್ಸಲ ಸಿರಿ ಪ್ರಾಣನಾಥ ವಿಠ್ಠಲ
ನಿನ್ನಧ್ಯಾನ ಕೊಟ್ಟೆನ್ನ ಕಾಯೊ ೩

೭

ದಯಮಾಡೋ ದಯಾಸಾಗರ ಪ

ಕರುಣಾ ಕಟಾಕ್ಷನೆ ವರಪೀನ ವಕ್ಷನೆ
ಪರಮ ಪುರುಷ ಪವನಾತ್ಮನೇ
ಪರಮ ಪುರುಷ ಪವನಾತ್ಮನೇ ೧

ಅಂಬುಜನಾಭನೆ ಕಂಬು ಕಂದರನೆ
ಸಂಭ್ರಮದಿ ಕಾಯೊ ದೇವನೆ
ಸಂಭ್ರಮದಿ ಕಾಯೊ ದೇವನೆ ೨

ಜ್ಞಾನಿಗಳರಸನೆ ಪ್ರಾಣನಾಥವಿಠಲನೆ
ಮಾನದಿಂದ ಕಾಯೊ ದೇವನೆ
ಮಾನದಿಂದ ಕಾಯೊ ದೇವನೆ ೩

## ೮

ದೀನಬಂಧು ನೀ ದಯಾಸಿಂಧು ಪ

ನಿನ್ನನಂಬಿದ ಆಪನ್ನ ಜನರನು
ಮನ್ನಿಸಿ ಸಲಹಿ ಪ್ರಸನ್ನನಾಗುವೆ ೧

ಕಂಜಲೋಚನ ನಿನಗಂಜಲಿ ಮುಗಿಯುವೆ
ಕುಂಜರ ವರದ ಭುಜಂಗ ಶಯನ ೨

ಘನ್ನಮಹಿಮ ಪ್ರಾಣನಾಥ ವಿಠ್ಠಲರಾಯ
ಮನ್ನಿಸಿ ಪ್ರಸನ್ನನಾಗಿ ಎನ್ನಸಲಹೋ ಸ್ವಾಮಿ ೩



## ೯

ದೇಹವ್ಯಾಕೆ ಇಂಥ ದೇಹವ್ಯಾಕೆ ಪ

ಹಗಲು ಇರುಳು ಹರಿಯ ನೆನೆಯದ ಕಾಯವ್ಯಾಕೆ ಅ.ಪ

ಹರಿಯ ಪಾದಕೆರಗದಂಥ ಶಿರವು ಏಕೆ
ಪರಮ ಪುರುಷನ ಪಾಡದಂಥ ವದನವ್ಯಾಕೆ ೧

ಹರಿಯಸ್ಮರಣೆ ಕೇಳದಂಥ ಕರ್ಣವ್ಯಾಕೆ
ಹರಿಯಮೂರ್ತಿನೋಡದಂಥ ಕಂಗಳ್ಯಾಕೆ ೨

ಹರಿಯ ನಿರ್ಮಾಲ್ಯವಾಘ್ರಾಣಿಸದಂಥ ನಾಸವ್ಯಾಕೆ
ಹರಿಯ ನೈವೇದ್ಯ ಭುಂಜಿಸದಂಥಾ ಉದರವ್ಯಾಕೆ ೩

ಹರಿಯದಾಸರ ಕೊಡಿ ತಿರುಗದ ಚರಣವ್ಯಾಕೆ
ಶರಣಜನರ ಚರಣ ತೊಳೆಯದ ಕರವು ಏಕೆ ೪

ಪ್ರಾನನಾಥವಿಠಲನ ಪಾಡದ ಜಿಹ್ವೆ ಏಕೆ
ಜಾಣರೆಲ್ಲರು ತಿಳಿದು ನೋಡಿ ಬದುಕಿ ಜೋಕೆ ೫

## ೧೦

ಬಂದನೇನೆ ಸುಂದರ ಶ್ರೀರಾಮ ಚಂದಿರ ಪ

ಸಿರಿವತ್ಸಧಾರನು ಶ್ರೀತಜನೋದ್ಧಾರನು
ಮಾರ ಸುಂದರನು ಮಾ ಮನೋಹರನು ೧

ಕೋಮಲ ಗಾತ್ರನು ಕಮಲಕಳತ್ರನು
ಕಮಲಾಪ್ತ ತೇಜನು ವಿಮಲ ಸತ್ಪಾತ್ರನು ೨

ಸಾಸಿರನಾಮನು ಭಾಸುರವದನನು
ಈಶ ವಂದಿತನು ಶೇಷವಿಠ್ಠಲನು ೩

## ೧೧

ಬಂದೆ ರಂಗಯ್ಯ ನಿನ್ನಬಳಿಗೆ ಪ

ನೊಂದು ಮನ ಬೇಡುವೆ ನಿನ್ನ ಶ್ರೀಪಾದಂಗಳಿಗೆ ಅ.ಪ

ಭಕ್ತಜನರು ಬಂದು ಕಾಡುವರೆಂತೆಂದು
ಯುಕ್ತಿಯಿಂದಿಲ್ಲಿ ಬಂದು
ಸಪ್ತಬೆಟ್ಟದ ಮಧ್ಯದೊಳ್ ವಿ
ರಕ್ತಿಯ ಕೈಕೊಂಡು ನಿಂತಿರೆ

ಮುಕ್ತಿದಾಯಕ ನಿನ್ನ ನಂಬಿದ
ಭಕ್ತರ ಪಾಡೇನು ಪೇಳೆಲೊ ೧

ಶ್ವೇತಾದ್ರಿಯಲಿ ಭಕ್ತವ್ರಾತ ಪಾಲಿಸಿದಂಥಾ
ಪ್ರೀತಿವಚನ ಕೇಳಿ
ಭೂತನಾಥನ ಭಯವ ಬಿಡಿಸಿ
ಖ್ಯಾತಿಯನು ಪಡೆದಂಥ ವಾರ್ತೆಯ
ರೀತಿಯನು ನಾ ಕೇಳಿ ಬಂದೆನೊ
ಮಾತುಳಾಂತಕ ಮಾರಮಣ ಹರೇ ೨

ದೀನವತ್ಸಲ ಶ್ರೀರಂಗ ನಿನ್ನಯ ಪಾದ
ಧ್ಯಾನ ಮಾಡುವರ ಸಂಗವಿತ್ತು
ಮಾನನಿಧಿ ಪ್ರಾಣನಾಥ ವಿಠಲನೆ
ಸಾನುರಾಗದಿ ಸಲಹೊ ಎನ್ನನು
ದೀನನಾದ ಗಜೇಂದ್ರನ ಬಹು
ಮಾನದಿಂದಲಿ ಕಾಯ್ದ ಪ್ರಭುವೆಂದು ಬಂದೇ ೩

## ೧೨

ಬರುವುದು ನೋಡೆ ಶ್ರೀಹರಿ ರಥವೇರಿ ಪ

ಎಡಬಲದಲಿ ಹರಿ ಉಡುರಾಜ ಮುಖಿಯರ
ಸಡಗರದಿಂದಲಿ ಬಡವರಾಧಾರಿ ಶೌರಿ ೧

ಗುಣಮಣಿ ಶ್ರೀನಿವಾಸ ಮಣಿಯುವ್ರೋ ಭಕ್ತರ
ದಣಿವು ಆರಿಪುದಕೆ ವಿನಯ ಪೂರ್ವಕವಾಗಿ ೨

ಬಗೆ ಬಗೆಯಲಿ ತನ್ನ ಭಜಿಸುವೊ ಭಕ್ತರ
ಸುಗುಣ ಶ್ರೀ ಪ್ರಾಣನಾಥ ವಿಠಲ ರಾಯನು ನಗುತ ೩

## ೧೩

ಬಳೆಯ ತೊಡಿಸಿದ ಭಾಗ್ಯಪುರುಷನೂ ನಳಿನಾಕ್ಷಿಕೈಗೆ ಪ

ತರುಣಿ ಮಣಿ ಕರಗಳಿಗೆ ತಕ್ಕ ಅರುಣಮಯ[೧]
ಬಳೆಗಳನೆ ತಂದು
ಶರಣಪಾಲಕ ತಾನೆ ಬಂದು ವನಜಮುಖಿ
ಕರಗಳನೆ ಪಿಡಿದು ೧

ಇಳೆಯಪತಿ ಬಳೆಗಾರನಾಗುತ ಪೊಳಲು ಎಲ್ಲ ಸಂಚರಿಸುತ
ನಳಿನಮುಖಿಯ[೨] ಕಂಡು ನಗುತಲಿ
ಸರಳತನದಲಿ ಕರವ ಪಿಡಿದು[೩] ೨

ಮಾನನಿಧಿ ಪ್ರಾಣನಾಥವಿಠಲನುಸಾನುರಾಗದಿಭಜಿಸುವರ ಸುರ
ಧೇನು ವಂದದಿ ಸಲಹುವನಂತೆ ಮಾನಿನಿಯಮನಕೆ ಒಪ್ಪುವೊ ೩

## ೧೪

ಬಾ ಬಾ ರಾಘವ ಬಾ ವೀರ ರಾಘವ ಪ

ಮತ್ಸ್ಯರೂಪನಾಗಿ ಹೆಚ್ಚಿದ ದೈತ್ಯನ
ಇಚ್ಛೆಯಿಂದಲಿ ಕೊಂದ ಅಚ್ಯುತರಾಯನೆ ೧

ಕೂರ್ಮರೂಪನಾಗಿ ಅಮರರಿಗೊಲಿದು ನೀ
ಕಾಮಜನಕ ಸುಪ್ರೇಮಾವನಿತ್ಯಂತೆ[೪] ೨

ವರಹರೂಪನಾಗಿ ಧರಣಿಯ ಚೋರನ
ಶಿರವ ತಂದು ನೀ ಜಗವ ಪೊರೆದ್ಯಂತೆ ೩

---

(ಪಾಠಾಂತರ : ೧ ಸುವರ್ಣ, ೨ ಮುಖಿಯು, ೩ ಪಿಡಿಯೆ,
೪. ಪ್ರೇಮಾದಿಪೊರೆಯಲು)

ತರಳನ ನುಡಿ ಕೇಳಿ ದುರುಳ ರಕ್ಕಸನ
ಕರುಳ ತೆಗೆದು ನಿನ್ನ ಕೊರಳೊಳಿಟ್ಟ್ಯಂತೆ ೪

ಚೆಲುವತನದಿ ಪೋಗಿ ಬಲಿಯದಾನವ ಬೇಡಿ
ಕಲುಷ ಹರಿಸಿ ಅವನ ಪಾತಾಳಕ್ಕೊತ್ತಿದ್ಯಂತೆ ೫

ಕೊಡಲಿಯ ಪಿಡಿಯುತ ದುಗುಡ ರಾಯರುಗಳ ಸೊ
ಗಡು ಮುರಿದು ನೀ ಸಡಗರ ಪಟ್ಯಂತೆ ೬

ಸೀತೆಗೋಸ್ಕರ ಪೋಗಿ ಸೇತುವೆಯನೆ ಕಟ್ಟಿ
ಭೂತ ರಾವಣನ ಖ್ಯಾತಿಯಿಂದಲಿ ಕೊಂದ ೭

ವಾರಿಜಾಕ್ಷಿಯರ ಕೂಡಿ ನೀರಾಟದೊಳು ಪೊಕ್ಕು
ನೀರೆಯರ[೧] ಮನ ಅಪಹಾರಮಾಡಿದ ಕೃಷ್ಣ ೮

ಚಿತ್ತಜಪಿತ ನೀನು ಬತ್ತಲೆಯೊಳು ಬಂದು
ಉತ್ತಮ ಸ್ತ್ರೀಯರ ವ್ರತಗಳಳಿದ್ಯಂತೆ ೯

ಸುಂದರ ವಾಜಿಯ ಚೆಂದಾದಿಂದೇರುತ
ಮಂದಗಮನೆಯರ ನಂದವಳಿದ್ಯಂತೆ ೧೦

ದೋಷರಹಿತ ನಮ್ಮ ಶೇಷವಿಠ್ಠಲನೆ
ಬ್ಯಾಸರವಿಲ್ಲದೆ ಪೋಷಿಸಿ ಸಲಹಲು ೧೧

೧೫

ಬಾರನ್ಯಾತಕೆ ಕೃಷ್ಣ ಬಾರನ್ಯಾತಕೆ ಪ

ನಾರಿಯರ ಭಯವಿಂತಿಹುದೊ ಧೀರ ಕೃಷ್ಣಗೆ ಅ.ಪ

(ಪಾಠಾಂತರ : ೧. ನಾರಿಯರ)

ಪರಿಯ ಮನಕೆ ಹರುಷಪಡಿಸಿ
ಪರಿಯ ಕರೆಸಿ ಮನದೊಳಿರಿಸಿ
ಹೊರಗೆ ಬಿಡರೆಂಬೊ ಭಯಕೆ
ಮರೆಯೊಳಿದ್ದುಕಾಲ ಕಳೆಯುವ ೧

ಮದಗಜಗಮನೆಯರೆಲ್ಲ
ಮದನಕದನ ದೊಳಗೆ ಸೋಲಿಸಿ
ಮುದದಿ ಎನ್ನಬಿಡದೆ ಮನೆಯೊಳು
ಸದರದಿಂದ ನೋಡುವರೆಂದು ೨

ಆಣಿ ಮುತ್ತಿನ ಮಾತನಾಡಿ
ಜಾಣ ಪ್ರಾಣನಾಥ ವಿಠಲನ
ವಿನಯದಿಂದ ಕರೆದು ತಂದರೆ
ವನಜಮುಖಿಯೆ ಹರುಷ ಪಡುವೆ ೩

## ೧೬

ಬಾರೋ ಬೇಗ ತೋರೋ ಮುಖವನು ನಿನ್ನ
ಬಾರಿಗೆ ಬಿದ್ದೆನು ಪಾರಗಾಣಿಸೊ ಪ

ಅಂಗಜನಯ್ಯಾ ಭುಜಂಗ ಶಯನಾ ಶ್ರೀ
ರಂಗ ಎನ್ನಾ ಅಂತರಂಗಕ್ಕೆ ನೀ ೧

ಕಂಜಲೋಚನ ನಾ ನಿನಗಂಜಲಿ ಮುಗಿಯುವೆ
ಕುಂಜರೇಶ ವರದ ಭುಜಂಗ ಶಯನ ೨

ಘನ್ನಮಹಿಮ ಸನ್ಮತಿಯ ಪಾಲಿಸು ಪ್ರ
ಸನ್ನ ಪ್ರಾಣನಾಥ ವಿಠಲರಾಯನೆ ೩

## ೧೭

ಯಾರವನು ಹೊರಗೆನಿಂತ ಬಾರಾನ್ಯಾಕವನು ಪ

ಮಾರಸುಂದರ ಸುಕುಮಾರ ಶರೀರನು ಅ.ಪ

ನೀರಮುಳುಗಿ ಬಂದು ಘೋರಪರ್ವತ ತಂದು
ಧಾರುಣಿಯನು ಕದ್ದ ದನುಜನ ಕೊಂದು
ನರಹರಿ ರೂಪದಿ ತರಳಗೊಲಿದುಪುಟ್ಟ
ಚರಣದಿಂ ಧರಣಿಯನಳೆದ ಮಹಾತ್ಮನೋ ೧

ಕೊಡಲಿಯ ಪಿಡಿದು ತಾ ಬಿಡದೆ ಕ್ಷತ್ರಿಯರನ್ನು
ಮಡುಹಿ ಬಂದವನಿವನೇನೋ
ಮಡದಿಗಾಗಿ ದೊಡ್ಡಅಡವಿಯೊಳು ಮನೆಕಟ್ಟಿ
ಬಿಡದೆ ಗೋಕುಲದಲ್ಲಿ ನೆಲೆಸಿರುವಾತನೋ ೨

ಬೆತ್ತಲೆ ನಿಂತ್ಹತ್ತಿ ಮತ್ತೆಕುದುರೆಯ
ಚಿತ್ತಬಂದಂತೆ ತಾ ತಿರುಗುವನೋ
ಉತ್ತಮನಾದ ಶ್ರೀ ಪ್ರಾಣನಾಥವಿಠಲನು
ಎತ್ತನೋಡಿದರು ಸುತ್ತುತ್ತಲಿರುವನು ೩

## ೧೮

ರಾಧಕೃಷ್ಣಪಾಲಿಸೊ ರಾಧಕೃಷ್ಣಪಾಲಿಸೊ ಪ

ನಂದಕುಮಾರ ನವನೀತ ಚೋರ
ಸುಂದರಾಕಾರ ಅಗಣಿತ ಗುಣಗಂಭೀರ ೧

ಉದಧಿ ಶಯನ ಉಡುರಾಜವದನ
ಮದಮುಖ ಕಂಸಾಸುರನ ಮದನಿವಾರಣ ೨

ಗಾನವಿನೋದನೆ ದೀನಾಧಾರನೆ
ಪ್ರಾಣನಾಥವಿಠಲನೆ ಪವನಾತ್ಮನೇ ೩

## ೧೯

ರಾಮನ ನೋಡ ಬನ್ನಿರೆ ಭಾಮೆಯರೆಲ್ಲ ಪ

ರಾಮನ ನೀವು ನೋಡ ಬನ್ನಿರೆ ಕಾಮಿತಾರ್ಥವಬೇಡಿಸುಖಿಸಿರೆ
ಸ್ವಾಮಿ ನೀನೆ ಗತಿ ಎಂದರೆ ಕಾಮಿತಾರ್ಥವನೀವ ದೊರೆಯನ ಅ.ಪ

ಸೀತೆಗೋಸುಗ ಸೇತುವೆಯ ಕಟ್ಟಿ ಧೂರ್ತ ರಾವಣನ ಘಟ್ಟಿಸಿ
ಖ್ಯಾತಿಯಿಂದಲಿ ರಥವನೇರಿ ಸೀತೆಸಹಿತ ಬರುವನಂತೆ ೧

ಹರಿಯುನರನಾಗುತಲಿ ಬಂದು ವರ
ಅಯೋಧ್ಯಾಪುರದಿ ನಿಂದು
ಮರೆವ ಸಿಂಹಾಸನವನೇರುತ ಹರುಷದಲಿ ತಾ ಕೂಡುವನಂತೆ ೨

ಮಾನನಿಧಿ ಪ್ರಾಣನಾಥವಿಠಲ ಸಾನುರಾಗದಿ ಭಜಿಸುವರಸುರ
ಧೇನುವಂದದಿ ಸಲಹುವನು ಮಾನಿನಿಯರು ಮನ್ನಿಸುತ ಬೇಗ ೩

## ೨೦

ಸ್ವೀಕರಿಸೈ ಲೋಕನಾಥನೆ ಪ್ರಖ್ಯಾತಪ್ರಿಯನೆ ತಾಂಬೂಲವ ಪ

ನೀಲವೇಣಿಯು ಜಾಲಮಾಡದೆ ಶೀಲದಿಂ ಈ ವೀಳ್ಯವ
ವೇಳೆಯರಿತು ತಂದಿಹೆನು ಗೋಪಾಲಬಾಲ ತಾಂಬೂಲವ ೧

ಕಮಲ ನಯನೆ ಕಮಲವದನೆ ವಿಮಲ ಮನದಲಿ ವೀಳ್ಯವ
ಕ್ರಮದಿ ತಂದು ನಿಂದಿರುವೆನೊ ಸುಮಧುರವಾದೀ
ತಾಂಬೂಲವ ೨

ಗಾನಲೋಲನೆ ದೀನಪಾಲನೆ ಪ್ರಾಣನಾಥವಿಠಲನೆ
ಸಾನುರಾಗದಿ ತಂದ ವೀಳ್ಯವ ಪ್ರಾಣನಾಥನೆ ಕರುಣದಿಂ ೩

## ೨೧

ಹಾರಹಾಕುವೆ ಮಾರಸುಂದರ ಶರೀರ ಸುಕುಮಾರಗೆ ಪ

ಮರುಗ ಮಲ್ಲಿಗೆ ಜಾಜಿಸಂಪಿಗೆ ಸುರಗಿಬಕುಳ ಪಾದರಿ
ಪರಿಪರಿಯಿಂದ ಹಾರ ಕಟ್ಟಿ ಹರಿನಾ ನಿನ್ನ ಕೊರಳಿಗೆ ೧

ಕಮಲ ಪುಷ್ಪದ ಹಾರವನ್ನು ವಿಮಲ ಮನದಿ ತರದಿಹೆ
ಸುಮಶರಪಿತ ಕೊರಳ ಕೊಟ್ಟರೆ ನಮಿಸಿ ನಿಮಗೆ ಹರುಷದಿ ೨

ಮಾನಿನಿಯರ ಮೊರೆಯಕೇಳಿ ಪ್ರಾಣನಾಥವಿಠ್ಠಲ
ತಾನೆ ಕರವನೀಡಿ ಹಾರವ ಗಾನಲೋಲ ಧರಿಸಿದ ೩

## ಮಹಾಲಕ್ಷ್ಮೀದೇವಿ

## ೨೨

ಅಂಗನೆ ರುಕ್ಮಿಣಿ ಮಂಗಳ ಪೀಠಕೆ ಸಂಗ ಸಖಿಯರು ಕರೆವರಲೆ
ಮಂಗಳ ಸುವೇಣಿ ಜಾಣೆ ಬಾರಮ್ಮ ಹಸಗೆ ಕರೆದರು ಪ

ಲೋಕಮಾತೆಯು ನೀಯೆನ್ನುತ ನಿನ್ನನು ಕಮಲ
ಮುಖಿಯರು ಕರೆಯುವರೆ
ಸಾಕು ಬಾರೆ ನಿನ್ನ ಮುಖ ಕಮಲ ತೋರೆ
ಬಾರಮ್ಮ ಹಸೆಗೆ ಕರೆದರು ೧

ಆಣಿ ಮುತ್ತಿನ ಹಸೆಯ ಪೀಠಕೆ ಜಾಣೆಯರು
ಬಾರೆಂದು ಕರೆಯುವರು
ಸಾನುರಾಗದಿ ಕಾಲಾಹಿವೇಣಿ ಕಲ್ಯಾಣಿ ದಯಮಾಡು
ಹಸೆಗೆ ಕರೆದರು ೨

ವನಜನಾಭ ಶ್ರೀಪ್ರಾಣನಾಥ ವಿಠಲನು ನಿನ್ನೆದುರು
ನೋಡುತ್ತಲಿರುವನು
ವನಜಮುಖಿಯರ ಕೂಡಿ ಸುಂದರ ಸುವದನೆ
ದಯಮಾಡು ಹಸೆಗೆ ಕರೆದರು ೩

## ೨೩

ಕಾಂತಾಮಣಿ ಶ್ರೀ ರುಕ್ಮಿಣಿ ಪ

ವದನ ಸುಶೀಲೆ ಮೃಗಮದ ಫಾಲೆ
ಸದಯೆ ನೀ ಭಕ್ತರ ಮುದದಿ ಪಾಲಿಸು ಇನ್ನು ೧

-----------------------
----------------------- ೨

ಜಗದ ಜನನಿಯೆ ನೀ ಬಗೆ ಬಗೆಯಿಂದಲಿ
ನಗೆ ಮುಖ ಪ್ರಾಣನಾಥ ವಿಠಲನ ಬದಿಯೊಳಿಪ್ಪೆ ೩

(ಸೂಚನೆ: ಈ ಪದದ ಎರಡನೇ ನುಡಿ ದೊರೆತಿಲ್ಲ _ಸಂ.)

## ೨೪

ನಾರಿ ನಾನರಿಯೆನೆ ನಿನ್ನಯ ಮಹಿಮ
ಕರುಣದಿ ಇಡು ಪ್ರೇಮ ಪ

ಬಾರಿ ಬಾರಿಗೆ ನಿನ್ನ ಭಜಿಸುವ ಭಕ್ತರ
ಪಾರುಗಾಣಿಸಿ ಪೊರೆ ನಾರಿ ಶಿರೋಮಣಿ ಅ.ಪ

ಕನಸು ಮನಸಿನೊಳ್ ನಿನ್ನಯ ಧ್ಯಾನ ಬಿಡದಲೆ ನಾ ಇನ್ನ
ನೆನಸಿ ನೆನಸಿ ಸುಖಿಸುವೆ ಮುನ್ನ ವನಜಾಕ್ಷಿಯೆ ನಿನ್ನ
ಅನುದಿನ ನಿನ್ನನು ಸ್ಮರಿಸುವ ಸುಜನರ
ಘನವನುಳುಹಿ ಕಾಯೆ ಮನಸಿಜನ ತಾಯೆ ೧

ಸೃಷ್ಟಿಯೊಳಗೆ ಶೆಟ್ಟಿ ಕೆರೆಯ ತಟದಲಿ ನೀ ನಿಂತು
ಶ್ರೇಷ್ಠಳೆನಿಸಿ ಭಕ್ತರ ಪೊರೆಯ ನಿತ್ಯದಿ ನೀನರಿತು
ಇಷ್ಟದಿ ಕೇಳುತ ಶಿಷ್ಟಜನರ ಅಘ
ಹಿಟ್ಟುಮಾಡಿ ಕಾಯೆ ಶ್ರೀ ಕೃಷ್ಣನ ಜಾಯೆ ೨

ಮದನನಯ್ಯನ ಮೋಹದ ರಾಣಿ ಮದಮುಖದ ಶ್ರೇಣಿ
ವಧಿಸಿದ್ಯೆಲೆ ಪರಮ ಕಲ್ಯಾಣಿ ಜಗದೊಳಗತಿ ಜಾಣೆ
ಮದಗೊಂಡನ ಪುರಿ ಸದನ ಮಾಡಿಕೊಂ
ಡೊದಗಿ ಭಕ್ತರ ಮುದವಪಡಿಸಿದ್ಯೆಲೆ ೩

ಜಗದೊಳು ನಿನಗೆ ಸರಿಯಾರೆ ಪರಿಪರಿ ವಯ್ಯಾರೆ
ಅಗಣಿತ ಗುಣಗಂಭೀರೆ ಸುಂದರ ಸುಕುಮಾರೆ
ಬಗೆಯಲಿ ಎನ್ನವಗುಣಗಣ ವೆಣಿಸದೆ
ಸೊಗದಿಂದಲಿ ಕಾಯೆ ನಗಧರನ ಪ್ರಿಯೆ ೪

ಅನುವನರಿತು ಪಾಲಿಸು ಮುನ್ನನಂಬಿದ ಮನುಜರನ
ಅನುದಿನ ನಿನ್ನ ಪಾದಧ್ಯಾನ ಮನಸಿಗೆ ಕೊಟ್ಟೆನ್ನ
ವನಜಾಕ್ಷಶ್ರೀ ಪ್ರಾಣನಾಥ ವಿಠಲನ
ಸನ್ನಿಧಾನವಿತ್ತು ಮನ್ನಿಸು ತಾಯೆ ೫

## ೨೫

ರಮಾಸಮುದ್ರನ ಕುಮಾರಿ ನಿನ್ನಸರಿ
ಸಮಾನರ್ಯಾರಮ್ಮ ಪ

ಉಮೇಶ ಮೊದಲಾದ ಅಮರ ನಿಕರವು
ಭ್ರಮಿಸಿ ನಿನ್ನ ಪಾದ ಕಮಲ ಭಜಿಪುದು ಅ.ಪ

ಕರುಣಾವಾರಿಧಿಯೆಂದು ಶರಣ ಜನರು ನಿನ್ನ
ಸ್ಮರಣೆ ಮಾಡುತ ಲಿಪ್ಪರೆ
ಹರಿಣಾಕ್ಷಿ ಕೇಳ್ನಿನ್ನ ಕರುಣಾದಿಂದಲಿ ಅಘ
ಹರಣ ಮಾಡಿ ನಿನ್ನ ಚರಣಾವ ತೋರಿಸಮ್ಮ ೧

ಅಪಾರ ಮಹಿಮನ ವ್ಯಾಪಾರಗಳ ತಿಳಿದು
ಕಾಪಾಡುವೇ ಜಗವಾ
ಕೋಪರಹಿತಳಾಗಿ ಶ್ರೀಪತಿಯೊಳು ಎಮ್ಮ
ತಾಪತ್ರಯವ ಪೇಳಿ ಕಾಪಾಡಬೇಕಮ್ಮ ೨

ವಾಸವ ವಂದಿತ ಸಿರಿಶೇಷವಿಠ್ಠಲನೊಳು
ವಾಸವ ಮಾಡುವಳೆ
ಘಾಸೀ ಮಾಡದೆ ಎನ್ನ ಈ ಸಮಯದೊಳು
ವಾಸುದೇವಗೆ ಪೇಳಿ ಪೋಷಿಸಬೇಕಮ್ಮ ೩

## ವಾಯುದೇವರು

### ೨೬

ಎಲ್ಲಿರುವೆ ತಂದೆ ಬಾರೊ ಮಾರುತಿ ಪ

ಎಲ್ಲೆಲ್ಲಿನೋಡಿದರು ಅಲ್ಲಿ ನಿನ್ನ ಕೀರುತಿ
ಅಲ್ಲಿನಿನ್ನಕೂಡಿರುವ ನಿತ್ಯಾಶ್ರೀಪತಿ ಅ.ಪ

ವಾರಿಧಿಯ ಹಾರಿ ನೀ ಸೇರಿ ತ್ವರದಿ ಲಂಕೆಯ
ಕ್ರೂರರನ್ನು ಕೊಂದು ಕುರುಹ ತಂದ ಮಹರಾಯ ೧

ದುರುಳ ಕುರುಪನನ್ನು ಕೊಂದು ತರಳೆಯಮಾನ
ಹರುಷದಿಂದ ಪೊರೆದು ನೀ ಮೆರೆದ್ಯೊ ಸುಮ್ಮಾನ ೨

ಯತಿಯ ರೂಪವ ಧರಿಸಿ ನೀ ಸಿರಿಪತಿಯ ಪಾದವ
ಹಿತದಿ ಸತತ ಭಜಿಸಿ ಶೇಷ ವಿಠ್ಠಲನ ಮೋದಿಸಿದಿ ೩

### ೨೭

ನಡೆದು ಬಾರಯ್ಯ ಪ್ರಾಣರಾಯ ಪಿಡಿ ಎನ್ನ ಕೈಯಾ ಪ

ಕಡುಬಡಜನರಿಗೆ ಒಡೆಯನಾಗಿ ನೀ
ಸಡಗರದಲಿ ಕರ ಪಿಡಿದು ಪೊರೆವುದಕೆ ೧

ಭಾಗ್ಯಪುರಿಯೊಳಗೆ ಭಾಗವತರಿಗೆಲ್ಲ
ಯೋಗ್ಯಮಾರ್ಗವನು ಬೇಗನೆ ತೋರಲು ೨

ಅನಾಥನಾಥ ಪ್ರಾಣನಾಥ ವಿಠ್ಠಲನ ದೂತನೀ
ನೆನೆಸಿ ಭಕ್ತಜನರ ಸಂತೋಷಪಡಿಪುದಕೆ ೩

## ೨೮

ಬಾಗಿ ಬೇಡುವೆ ಪ್ರಾಣರಾಯ ಭಕ್ತಪ್ರಿಯ ಪ

ಯೋಗಿವಂದಿತ ಭಾಗವತ ಜನಪ್ರಿಯ ಅ.ಪ

ಚಿತ್ರಾವತಿಯ ತೀರವಾಸ ಭಕ್ತಪೋಷ
ಗಾತ್ರ ಮರೆದು ನಿನ್ನ ಸ್ತೋತ್ರ ಮಾಡುತಲಿ ೧

ಬಂದೆ ನೀನೇ ಗತಿಯೆಂದು ಎನ್ನ ತಂದೆ
ಮುಂದಿನಾಗಮಗಳ ಒಂದು ನಾನರಿಯೆ ೨

ಅನಾಥ ರಕ್ಷಕನೆಂದು ಎನ್ನಬಂಧು
ಪ್ರಾಣನಾಥವಿಠಲ ಸರ್ವರಿಗೆ ಬಂಧು ಎಂದು ೩

## ಸರಸ್ವತಿ

## ೨೯

ವಾಣಿಯೆ ಬ್ರಹ್ಮನ ರಾಣಿಯೆ ನಿನ್ನ ಪಾದ
ಕಾಣದೆ ನಿಲ್ಲಲಾರೆ ಕಾಮಿನಿಯೆ ಪ

ದೇವಿಯೆ ಎನ್ನನು ಕಾವೆಯೆಂದೆನುತಲಿ ಭಾವಿಸಿ
ನಿನ್ನನು ಬಯಸಿದೆನೆ
ಭಾವವ ತಿಳಿದ್ಯೆನ್ನ ಕಾಯೆ ಕಮಲಮುಖಿ ಕಾಣದೆ
ನಿಲ್ಲಲಾರೆ ಕಾಮಿನಿಯೆ ೧

ಅಜನ ರಾಣಿಯೆ ನಿನ್ನ ನಿಜಭಕುತಿಯೊಳು
ನಾಭಜಿಸುವೆನಮ್ಮ ಭುಜಗ ವೇಣಿ
ತ್ರಿಜಗವಂದಿತೆ ನಿನ್ನನಿಜ ಪದ ಕಮಲವ ಕಾಣದೆ
ನಿಲ್ಲಲಾರೆ ಕಾಮಿನಿಯೆ ೨

ವಾಸವಮುಖ ಸುರೇಶರು ನಿನ್ನನು ಆಶಿಸುತಿರುವರೆ
ಭಾಸುರಾಂಗಿ
ಬೇಸರಿಸದೆನೀ ಶೇಷವಿಠಲನ ತೋರೆ ಕಾಣದೆ
ನಿಲ್ಲಲಾರೆ ಕಾಮಿನಿಯೆ ೩

## ಭಾರತೀ ದೇವಿ

### ೩೦

ಪಾಲಿಸಮ್ಮ ಭಾರತಾದೇವಿ ಪ

ಶೀಲಮತಿಯ ಎನಗೆ ಕೊಟ್ಟು ಅ.ಪ

ಭಾರನಿಮ್ಮದಮ್ಮಕಾಯೆ ಮಾರುತಿ ಮನಪೂರ್ಣ ಪ್ರಿಯೆ
ಕೋರುವೆ ನಿನ್ನ ಪಾದವನ್ನು ತೋರಿ ನೀಡೆ ಜ್ಞಾನವನ್ನು ೧

ಪಂಚಭೇದ ತಾರತಮ್ಯ ಸಂಚಿಂತನೆಯನ್ನೆ ಕೊಟ್ಟು
ಪಂಚಬಾಣನ ಪಿತನ ಚರಿತೆ ವಂಚಿಸದಲೆ ಪೇಳಿಸಮ್ಮ ೨

ನಿನ್ನನಂಬಿದ ಭಕ್ತಜನಕೆ ಘನ್ನಸುಖವ ಕೊಟ್ಟು ಪರಕೆ
ಸನ್ನುತಾಂಗ ಶೇಷವಿಠಲನನ್ನು ತೋರಿ ಸಲಹಿದಾಪರಿ ೩

## ರುದ್ರದೇವರು

### ೩೧

ಉಮೇಶಾ ಪರಿಪಾಲಿಸೊ ಪ

ಉಮೇಶ ಪಾಲಿಸು ರಮೇಶನ ಪಾದ
ಕಮಲಗಳಿಗೆ ಭ್ರಮರನೆನಿಸಿ ೧

ಕಾಲನಿಯಾಮಕ ನೀನಾಗಿ ಜಗವನು
ಲೀಲೆಯಿಂದಲಿ ಕಾವ ಶೂಲ ಪಾಣಿಯೆ ೨

ಈಶವಂದಿತ ಸಿರಿ ಶೇಷಾವಿಠ್ಠಲನ
ದಾಸನೆನಿಸಿ ಸಂತೋಷಗೊಳಿಸೊ ೩

## ಯತಿಗಳು (ಶ್ರೀ ಬ್ರಹ್ಮಣ್ಯತೀರ್ಥರು)

### ೩೨

ಕೈಪಿಡಿದು ಪಾಲಿಸೈ ಬ್ರಹ್ಮಣ್ಯಗುರುವೇ ಪ

ಅಯ್ಯನೀನೆಂದು ನಿನ್ನಡಿಗೆ ವಂದಿಸುವೇ ಅ.ಪ

ಮೂಢಮತಿಗಳು ಬಂದು ಬೇಡಿ ಕೊಳ್ಳಲು ಕರುಣ
ನೀಡಿ ನಿನ್ನವರನ್ನು ಕಾಯ್ದರೀತಿ
ಗಾಢದಿಂದಲಿ ಬಂದು ಮೂಢನಾದೆನ್ನನು
ಗೂಢದಿಂದಲಿ ಕಾಯೊ ಗುಣನಿಧಿಯೆ ಗುರುವೇ . . ೧

ಪುರುಷೋತ್ತಮಾರ್ಯರ ವರಪುತ್ರನೆಂದೆನಿಸಿ
ಹರುಷದಿಂದಲಿ ಬಂದ ಭಕ್ತಜನರ
ಮೊರೆಯಲಾಲಿಸಿ ಸ್ವಾಮಿ ಸ್ಮರಣೆಯ ಕೊಟ್ಟೆನ್ನ
ಹರುಷಪಡಿಸುವ ಗುರುವು ನೀನೆಂದು ನಾ ಬಂದೆ ೨

ವರಕಣ್ವನದಿ ಕೂಲದಲಿ ಕಲ್ಮಷ ತೊಳೆದು
ಪರ್ಮೆಯಿಂದಲಿ ಶಿಶುವ ಪಾಲಿಸಿದ ಗುರುವೆ
ಸಾರ್ವಭೌಮನ ಗುಣವ ಸರ್ವದಾ ಪಾಡುತಲಿ
ಸರ್ವಜನರನು ಕಾವೆ ಸರ್ವಕಾಲದಲಿ ೩

ಸರ್ವಗುಣ ಪೂರ್ಣ ಬ್ರಹ್ಮಣ್ಯಪುರ ವಾಸ
ನರಹರಿಯ ಪಾದವನು ಸ್ಮರಿಸಿನಿತ್ಯ
ಸರಸದಲಿ ಅಬ್ಬೂರು ಪುರವಾಸಿಗಳನೆಲ್ಲ
ಅರ್ಭಕರ ತೆರನಂತೆ ರಕ್ಷಿಸುವ ಗುರುವರ್ಯ ೪

ಮಣಿದು ಬೇಡುವೆ ನಿನ್ನ ಚರಣದಾಶ್ರಯವಿತ್ತು
ಅಣುಗನೆಂದೆನಿಸೆನ್ನ ಸಲಹಬೇಕೊ
ಗುಣನಿಧಿ ಶ್ರೀ ಪ್ರಾಣನಾಥ ವಿಠ್ಠಲನ
ಘನ ಚರಣ ಸ್ಮರಣೆಯ ನೀಯೊ ಗುರುವೆ ೫



## ಶ್ರೀವಿನಾಯಕ

೧

ಏಕದಂತ ಪಿನಾಕಿ ಸುತ ಜಗ
ದೇಕನಾಥನ ನಾಭಿಮಂದಿರ
ಲೇಖಕಾಗ್ರಣಿ ವಿಷ್ಣುಕೀರ್ತನ ಮಾನಿ ಸಾಧಕನೆ
ಜೋಕೆ ಯಿಂದ ಪರಾಕು ನುಡಿಯುವೆ
ನೂಕಿ ವಿಘ್ನವ ಸಾಕು ನಮ್ಮನು
ನೋಕನೀಯನ ಭಜಿಸಲನುವಾಗೆಂದು ಬೇಡುವೆನು ೧

ಕಾಣೆ ನಿನಗೆಣೆ ಮೂರುಲೋಕದಿ
ಮಾನ್ಯನಾಗಿಹೆ ಸರ್ವರಿಂದಲು
ಶ್ರೀನಿಧಿಯ ದಯದಿಂದ ಪ್ರಾಣಾವೇಶಸಂಯುತನೆ
ಧ್ಯಾನ ಮಾಡುವೆ ವಿಶ್ವತೈಜಸ
ನನ್ನು ಮಹದಾಕಾಶಮಾನಿಯೆ
ಆನತಾಮರಧೇನು ಸಿದ್ಧಿವಿನಾಯಕನೆ ನಮಿಪೆ ೨

ದೈತ್ಯಗಣಗಳಿಗಿತ್ತು ವರವು
ನ್ಮತ್ತರನು ಮಾಡುತಲಿ ಶ್ರೀಪುರು
ಷೋತ್ತಮನ ಸೇವಿಸುವೆ ವಿದ್ಯಾಧೀಶ ಸುಖಭೋಕ್ತ
ಮಾತರಿಶ್ವನ ದಾಸರಿಗೆ ಹರಿ
ಭಕ್ತಿ ವಿಷಯ ವಿರಕ್ತಿ ನೀಡುವೆ
ಶಕ್ತಿ ನೀ ನಾಲ್ಕೆರಡು ಕಲ್ಪದಿ ಸಾಧಿಸಿರೆ ಪದವಿ ೩

ವಕ್ರ ತುಂಡನೆ ನೀಗಿಸೆನ್ನಯ
ವಕ್ರಬುದ್ಧಿ ವಿವೇಕನೀಡುತ
ದಕ್ಕಿಸೈ ಶಾಸ್ತ್ರಾರ್ಥ ಜಯನವ ಚಾರುವಟು ಗಣಪ
ರಕ್ತಗಂಧಪ್ರೀಯ ಸೋಮನ
ಸೊಕ್ಕು ಮುರಿದೆಯೊ ಭೂಪ ಭಕ್ತಿಯ
ಉಕ್ಕಿ ಸೈ ಹರಿಯಲ್ಲಿ ತವಕದಿ ಮಂಗಳಪ್ರದನೆ ೪

ರಂಗ ಮಂದಿರ ದಕ್ಷಿಣಸ್ಥವಿ
ಹಂಗಗಮನನ ರಾಣಿ ರುಕ್ಮಿಣಿ
ಯಂಗದಲಿ ಪುಟ್ಟುತಲಿ ದಿತಿಜಾಂತಕನೆನಿಸಿಕೊಂಡು
ಗಂಗೆಪಿತನನು ಸೇವಿಸಿದೆ ಮಾ
ತಂಗಮುಖ ಮಹಕಾಯ ನಾರೀ
ಸಂಗವರ್ಜಿತ ಬೀರು ಕರುಣಾಪಾಂಗ ದೃಷ್ಟಿಯನು ೫

ಮೊದಲು ಪೂಜೆಯ ನಿನಗೆ ವಿಹಿತವು
ವಿಧಿ ಭವಾದ್ಯರ ಪೊರೆವ ವಿಶ್ವನು
ಮುದದಿ ನೀಡಿಹ ವರವ ಸಿದ್ಧಿಯ ಕೊಡುವೆ ಭಕ್ತರಿಗೆ
ಮದದಿ ಬಿಡುವರಿಗೆಲ್ಲ ಖೇದವೆ
ಒದಗಿ ಬರ್ಪುದು ಬಾಗಿ ಭಜಿಸುವೆ
ಸದಯನಾಗುತ ವಿಷ್ಣು ಭಕ್ತರ ಸಂಗ ನೀಡೆನಗೆ ೬

ವ್ಯಾಪ್ತ ದರ್ಶಿಯೆ ವಂದಿಸುವೆ ಪರ
ಮಾಪ್ತ ಹರಿ ಭಕ್ತರಿಗೆ ನೀನಿಹೆ
ಸೂಕ್ತ ಸಾಧನೆ ಗೈಸು ಖೇಶನೆ ಸೋಮಪಾನಾರ್ಹ
ಆರ್ತನಿಹೆ ಬಹುಮೂಢ ಖರೆವೇ
ದೋಕ್ತಮರ್ಮವ ಭಾಸಗೈಸಿ ಕೃ
ತಾರ್ಥನೆನಿಸೈ ಮೃದ್ಭವ ವಿರೂಪಾಕ್ಷ ತತ್ವೇಶ ೭

ಬರೆದೆ ಭಾರತ ವೇದವ್ಯಾಸರ
ಕರುಣದಿಂದಲಿ ಭಕ್ತಿಯೋಗಿಯೆ
ಶರಣು ಶೇಷಶತಸ್ಥರಿಗೆ ಗುರುವಿರ್ಪೆ ಹೇರಂಭ
ದುರಳ ಗಣಗಳ ಕಾಟತಪ್ಪಿಸಿ
ಹರಿಗೆ ಸಮ್ಮತವಿಲ್ಲ ದೆಡೆಯಲಿ
ಮರುಳುಗೊಲ್ಲದ ಮನವು ನನಗಿರಲೆಂದು ಹರಸೆಂಬೆ ೮

ಜಯಜಯತು ವಿಶ್ವಂಭರ ಪ್ರೀಯ
ಜಯಜಯವು ಮೈನಾಕಿತನಯಗೆ
ಜಯಜಯವು ಶ್ರೀಕೃಷ್ಣವಿಠ್ಠಲನ ದಾಸವರ್ಯನಿಗೆ
ಜಯಜಯವು ಸದ್ವಿದ್ಯೆಕೋಶಗೆ
ಜಯಜಯವು ಮೀನಾಂಕ ಭ್ರಾತೃವೆ
ಜಯಜಯವು ವಿಘ್ನೇಶ ಮಂಗಳಮೂರ್ತಿ ಗಣಪನಿಗೆ ೯

೨

ವಂದಿಪೆ ಮುದದಿಂದಲಿ ನಾನು
ವಂದಿಪೆ ಮುದ್ದು ಗಣಪಗೆ ವಂದಿಪೆ ಪ

ನಂನಂದನನಾಮ ಮನದೊಳು ಆ-
ನಂದದಿ ಭಜಿಸುವ ಚಂದ್ರಶೇಖರಸುತಗೆ ಅ.ಪ.

ಆಕಾಶಕಭಿಮಾನಿ ಶ್ರೀಕಂಠವರಪುತ್ರ
ರಾಕೇಂದುವದನ ಶ್ರೀಕಾಂತ ನಿಜಭಕ್ತ
ಏಕಾಂತದಲಿ ಹರಿ ಆಕಾರತೋರಿಸಿ
ನೂಕುತಭವಪಾಶ ಸಾಕು ಸಾಕು ಎಂದು ೧

ವರವರದಾಯಕ ಸುರಗಣಪೂಜಿತ
ವರಕರಿಮುಖವೇಷ ವರಸರ್ಪಕಟಿಸೂತ್ರ

ಸಿರಿಕಾಂತಸೇವೆಗೆ ಬರುವ ವಿಘ್ನಂಗಳೆಲ್ಲ
ಭರದಿಂದ ತರಿಯುತ ಕರುಣದಿ ಸಲಹೆಂದು ೨

ವೇದವ್ಯಾಸರಶಿಷ್ಯ ಮೋದಕಗಳ ಪ್ರಿಯ
ಮದನನಸೋದರ ಮುದವಿದ್ಯೆದಾಯಕ
ಮಧ್ವಾಗಮದಲಿ ಅದ್ಭುತ ಎಮ್ಮನು
ಶುದ್ಧರನು ಮಾಡೋ ಸಿದ್ಧಿ ವಿನಾಯಕನೆಂದು ೩

ಏಕದಂತನೆ ವರ ಆಖುವಾಹನ
ಭಕ್ತರ ಶೋಕ ಹರಿಸೊ ಬೇಗ ಲೋಕ ವಂದಿತನೆ
ರಕ್ತಾಂಬರ ತನು ರಕ್ತಗಂಧಪ್ರಿಯ ವಿ-
ರಕ್ತಿನೀಡುತ ಹರಿಭಕ್ತನೆಂದೆನಿಸು ಎಂದು ೪

ಪಾಶಾಂಕುಶ ಶಶಿದರ್ಪಭಂಜನ
ಶ್ರೀಶನಾಭಿವಾಸ ವಿಶಾಲಕರ್ಣಯುತ
ನಾಶಗೈಸುತವಿಷಯ ವಾಸನೆಗಳೆಲ್ಲ
ವಿಶ್ವೋಪಾಸಕ ಪ್ರಭು ಶ್ವಾಸಾವೇಶಯುತನೆಂದು ೫

ಚಾರುದೇಷ್ಣನೆ ನಿನ್ನ ಚರಣಕ್ಕೆ ಶರಣೆಂಬೆ
ಸರಿನೀನು ಧನಪಗೆ ಗುರುಶೇಷಶತರಿಗೆ
ತರಿದು ತಾಪತ್ರಯ ವರಜ್ಞಾನ ವೈರಾಗ್ಯ
ಹರಿಭಕ್ತಿ ಹರಿ ಧ್ಯಾನ ನಿರುತ ಕೊಡು ಎಂದು ೬

ಜಯತೀರ್ಥ ಹೃದಯದಿ ವಾಯುವಿನೊಳಿಪ್ಪ
ನವನೀತ ಧರಿಸಿಹ ಸಿರಿ ತಾಂಡವ ಕೃಷ್ಣವಿಠಲ
ರಾಯನ ಧ್ಯಾನ ಕಾಯಾ ವಾಚಾ ಮನಸಾ
ದಯಮಾಡಿ ಸಲಹೈಯ್ಯ ಜೀಯಾ ಗಣಪನೆಂದು ೭

## ಶ್ರೀಹರಿ ಕೀರ್ತನೆ

### ೩

ಅಗಲದಿರೋ ಮನ ಮಂದೀರದಿಂದ ಲೆನ್ನ
ಎಂದೆಂದಿಗೂ ಕೃಷ್ಣ ಪ

ಅಗಲದಿರೋ ಬ್ರಹ್ಮಾದಿ ವಂದಿತ
ಸುಗುಣಗಣ ಪರಿ ಪೂರ್ಣ ಏಕನೆ
ನಿಗಮಗೋಚರ ವಿಶ್ವ ಪ್ರೇರಕ
ಸಗುಣ ನಿರ್ಗುಣ ನಿರಜ ನಿಸ್ಸೀಮ ಅ.ಪ.

ಸೃಷ್ಟಿಗೊಡೆಯನೆ ನೀನೆ– ಶ್ರೇಷ್ಠನು ಸರ್ವತ್ರ
ಕಷ್ಟವಿಲ್ಲದೆ ಸಕಲ– ಚೇಷ್ಟೆಯ ನಡಿಸುವೆ
ಕೊಟ್ಟು ದೇಹಾದಿಗಳ– ಬಿಟ್ಟೇ ಜೀವರ ಭವದಿ
ಗಿಟ್ಟೀಸೆ ತಮ್ಮ ತಮ್ಮ– ಪಟ್ಟಾ ಮುಕ್ತಿಯ ಬೇಗ
ಒಟ್ಟಿನಿಂದಲಿ ಜೀವ ಜಗವಂದಿಷ್ಟು ಚಲಿಸದು
ಬಿಟ್ಟು ನಿನ್ನನು ಗುಟ್ಟು ತಿಳಿಯದೆ ಭವದಿ ಕಂ–
ಗೆಟ್ಟು ಬಳಲಿದೆ ಭಕ್ತಬಾಂಧವ
ನಷ್ಟಕಷ್ಟಗಳಿಲ್ಲದಾ ಸಂತುಷಷ್ಟ ನೀಡುವ ಪ್ರಭುವೆ ಕರುಣಾ–
ದೃಷ್ಟಿ ಬೀರುತ ಭಕ್ತಿ ಭಾಗ್ಯವ ಪುಷ್ಟಿಗೈಸುತಲೆನಗೆ ಸಂತತ ೧

ಶ್ರೀಶಾನೊಬ್ಬನೆ ಸರ್ವ ತಂತ್ರ ಸ್ವತಂತ್ರನು
ನಾಶರಹಿತನಿಗೆಲ್ಲಾ ದಾಸರೆ ಸರಿಸತತಾ
ವಾಸುದೇವನು ಜೀವ ಜಗದಿಂ ವಿಲಕ್ಷಣನು
ಈಸುಜ್ಞಾನವನೀಯೋ ಜನ್ಮಜನ್ಮಾಂತರಕು
ದೋಷದೂರ ವಿಶೇಷ ಮಹಿಮ ಪೂರ್ಣ ವಿಶ್ವಗ ಶಶ್ವದೇಕ ವಿ–
ಲಾಸ ಮಿಷಣಾಭರಣ ಭೂಷಿತ ಸಾಮಸರ್ವಾಧಾರ ನಿರುಪಮ

ಓಸು ಶಬ್ದಗಳಿಂದ ವಾಚ್ಯನೆ- ನಾಶಗೈಸುತ ಕರ್ಮತ್ರಯಗಳ
ದಾಸ ನಿನ್ನವ ನೆಂದು ಕರುಣದಿ ಭಾಸನಾಗುತ
ಹೃದಯಗುಹೆಯಲಿ ೨

ನಿತ್ಯನಿಗಮಾತೀತ-ನೀನೆ ಸತ್ಯರ ಸತ್ಯ
ನಿತ್ಯತೃಪ್ತನು ಸ್ವರತ-ಮುಕ್ತೇಶ ಚಿನ್ಮಯನೂ
ನಿತ್ಯಜೀವಗೆ ನೀನಿರ್ನಿಮಿತ್ತ ಬಂಧು ಸತತ
ನಿತ್ಯಸ್ತೋತ್ರವನು ನುಡಿಸು-ಮೃತ್ಯೋಮೃತ್ಯುವೆ ದೇವಾ
ನೀತಬಲಸುಖ ಜ್ಞಾನ ಸರ್ವೈ-ಶ್ವರ್ಯ ಸದ್ಗುಣ
ಧಾಮ ವಿಶ್ವೋ
ತ್ಪತ್ತಿ ಸ್ಥಿತಿಲಯ ಕರ್ತ ಪರಿಪರಿ ಜೀವ ಸತ್ತಾದಿ ಭಾಸಕ
ನಾಥ ಮುಕ್ತಾಮುಕ್ತ ವಂದಿತ - ಭೂತಿ ಭೂರಿದನಾಂತಾತ್ಮ
ಖ್ಯಾತ ಸರ್ವೋತ್ತಮ ಪರತ: ಪರಾಕ್ಷರ ವಿಷ್ಣುಸರ್ವಜ್ಞ ೩

ಅಂಬುಜಾಕ್ಷನು ನೀನೇ-ಉಂಬುವೆ ಸರ್ವಸಾರ
ತುಂಬಿರುವೆ ಒಳಹೊರಗೆ-ಬೆಂಬಲನು ಜಗಕೆಲ್ಲ
ಬಿಂಬ ನೀ ಚಲಿಸೆ ಪ್ರತಿ ಬಿಂಬಾ ನಾ ಚಲಿಸುವೆ
ನಂಬಿದೆ ಸಲಹಯ್ಯ-ಕಂಬುಚಕ್ರಾಂಕಿತನೆ
ಕುಂಭಿಣೀಪತಿ ಕೃಷ್ಣಕೈಬಿಡೆ ಗೊಂಬೆ ಸರಿನಾಲ್ಲವೇನೈ
ಡಿಂಬದೊಳಗಿನ ವೈರಿವೃಂದವು ಹಂಬಲಿಸಲೆಡೆಗೊಡವುಭವ
ದೊಂಬ ಅಡಗಿಸು ದಕ್ಷಣಾಕ್ಷಿಗ-ಸ್ಥಂಭರೂಪಿಯೆ ಶರಣುಶರಣು
ವೆಂಬೆ ಸ್ವಾಮಿಯೆ ಪಾದಪಂಕಜ ದುಂಬಿ
ಎನಿಸೈ ನೀಡಿ ವಿಜ್ಞಾನ ೪

ಮಂದರೋದ್ಧರ ಗೋವಿಂದ ನಿನ್ನಯ ಮಹಿಮೆ
ಇಂದಿರೆಗಾಗದು ಸಾಕಲ್ಯ ತಿಳಿಯೆಸಿದ್ಧವಿದೂ
ಛಂದಾ ಛ್ಛಾದಿತ ಗಾತ್ರ-ಬಂಧ ಮೋಕ್ಷಪ್ರದನೆ
ಎಂದು ಕಾಂಬೆನೋ ನಿನ್ನ-ಮಂದನಾನಿಹೆ ಜಗದೀ

ಮಂದಜಾಸನ ಸದ್ಮ ಪೂರ್ಣಾನಂದ ನಿನ್ನಯ ನಾಮ ವೃಂದದಿ
ಬಂಧಿಸಿಹೆ ಜಗವೆಲ್ಲ ವಿಷ್ಣುವೆ-ಛಂದಬೃಹತೀಪತಿಯೆ ನೀನ್ನೈ
ತಂದೆ ಜಯಮುನಿ ವಾಯು ಅಂತರ ನಿಂದು ತಾಂಡವ
ನಾಡಿ ಮೆರೆಯುವ
ಇಂದಿರಾಪತಿ ಕೃಷ್ಣವಿಠಲನೆ-ನಿಂದು ತೋರುತ ನಿನ್ನ ರೂಪವ ೫

೪

ಅದ್ಭುತ ಅದ್ಭುತ ಪರಮಾದ್ಭುತನೆ ಪ

ಮಧ್ವರ ಚರಣದಿ ಬಿದ್ದ ಜನರಪರಿ
ಶುದ್ಧಗೈದು ಸುಖ ಸಿದ್ಧಿಗೊಳಿಪ ಹರಿ ಅ.ಪ




ಪದ್ಮನಾಭ ಅನವದ್ಯ ಪರಾತ್ಪರ
ಶುದ್ಧ ಸುಖಾತ್ಮಕ ಕದ್ದನೆ ಬೆಣ್ಣೆಯನು
ಮಧ್ವರ ದೇವನು ಪದ್ಮಾಲಯ ಪತಿ
ಸಿದ್ಧಿ ಸುವಂದಿತ ಕದ್ದನೆ ಕನ್ಯೆಯನು ೧

ಮೇದಿನಿ ಗೈದವ ಮೇದಿನಿ ತಂದವ
ಮೇದಿನಿ ಸತಿಪತಿ ಮೇದಿನಿ ಅಳಿಯನೆ
ವೇದವ ತಂದವ ವೇದಸು ಬೋಧಕ
ಬುದ್ಧನು ಆಗುತ ವೇದವ ನುಳುಹಿದನೆ ೨

ಸತ್ಯವತೀ ಸುತ ಸತ್ಯನ ಸತ್ಯನು
ಬತ್ತಲೆ ನಿಲ್ಲುತ ಸತಿಯರ ಕೆಡಸಿದನೆ
ಕತ್ತಲೆ ಕಾಣದ ಉತ್ತುಮ ದೇವನು
ಮಿಥ್ಯಾಜ್ಞಾನವ ಬಿತ್ತಿದನೆ ೩

ಅನ್ನಾದನ್ನನು ಅನ್ನದ ಬೃಹತೀ
ಅನ್ನನು ಸತಿಯರ ಅನ್ನವ ಬೇಡಿದನೆ
ಉಣ್ಣದೆ ರಾಜನ ಅನ್ನವ ವಿದುರನ
ಅನ್ನವ ನುಂಡನು ಸಣ್ಣವನೆನ್ನದಲೆ ೪

ತಂದೆಯ ಕೊಂದು ಕಂದನ ಸಲಹಿದ
ಕಂದನ ಕೊಂದು ತಂದೆಯ ಸಲಹಿದ
ನಿಂದೆಯ ಸುರಿಸಿರೆ ನಂದವ ನೀಡಿದ
ವಂದಿಸಿ ರಾಜ್ಯವ ಮುಂದಿಡೆ ಜರಿದವನೆ ೫

ಅಣ್ಣನ ಕೊಂದು ತಮ್ಮನ ಸಲಹಿದ
ಸಣ್ಣನು ತಮ್ಮನ ಅಣ್ಣನ ಮಾಡಿದ
ಅಣ್ಣ ತಮ್ಮಂದಿರ ನುಣ್ಣಗೆ ಸವರಿದ
ಅಗಣ್ಯ ಮಹಿಮ ಮೈಗಣ್ಣಗೆ ವಲಿದಿಹನೆ ೬

ಭಾರೀ ಗಿರಿಧರ ನಾರಿಯು ಆದನು
ಮಾರನ ಪಡೆದವ ನಾರೇರಿ ಗೊಲಿದನೆ
ನಾರಿಯು ಮೊರೆಯಿಡೆ ಸೀರೆಯ ಕರೆದವ
ಜಾರನು ಎನಿಸುತ ಶೀರೆಯ ಚೋರನೆ ೭

ಇಲ್ಲಿಹೆ ಅಲ್ಲಿಹೆ ಎಲ್ಲಾಕಡೆಯಿಹ
ಎಲ್ಲರ ಒಳಗಿಹ ಎಲ್ಲರ ಹೊರಗಿಹ
ಎಲ್ಲಾ ಪ್ರೇರಿಸಿ ಎಲ್ಲಾ ನಡಿಸುವ
ಎಲ್ಲವ ಬಲ್ಲನು ಬಲ್ಲ ವರಿಲ್ಲವೆ ೮

ಅಣುಕಿವ ಅಣುತಮ ಘನಕಿವ ಘನತಮ
ಅಣು ಘನ ಮಾಡುವ ಘನ ಅಣುಮಾಡುವ
ಅಣುವಲಿ ಅಡಗಿಪ ಘನವನು ಬಲ ಬಲ
ತೃಣ ಸಹ ಚಲಿಸದು ಚಿನುಮಯ ನಿಲ್ಲದೆ ೯

ಜಾಗರ ಸ್ವಪ್ನ ಸುಷುಪ್ತಿಗಳೆಲ್ಲವ
ಆಗಿಸಿ ಕಾಯುವ ಯೋಗಿಸು ಭೋಕ್ತನು
ಬೀಗರ ಮನೆಯಲಿ ಸಾಗಿಸಿ ಯಂಜಲ
ತೇಗಿದ ತಿನ್ನುತ ಶಾಖವ ನಿಜಕರುಣಿ ೧೦

ಲೋಕವ ಸೃಜಿಸುವ ಲೋಕವ ನಳಿಸುವ
ಲೋಕನು ಪಾಲಕ ಲೋಕ ವಿಲಕ್ಷಣನೆ
ನಾಕರ ನಾಯಕ ನಾಕಗತಿ ಪ್ರದ
ಶೋಕವಿದೂರಗೆ ತಾಕಿತು ಕೊಡಲಿ ಬತ ೧೧

ಎಲ್ಲಾ ನಾಮವು ಇವನದೆ ಸರಿಸರಿ
ಎಲ್ಲಾ ರೂಪವು ಕೂಡ್ರವ ದಿವನಿಗೆ
ಎಲ್ಲಾ ಚೇತನ ಜಡದಿಂ ಭಿನ್ನನು
ಎಲ್ಲಾ ಕಾಲದಿ ಒಂದೇ ಸಮನಿಹ ೧೨

ಎಲ್ಲಾ ರೂಪಗಳೊಂದೇ ಸಮ ಬತ
ಎಲ್ಲಾ ರೂಪದನಂತ ಗುಣಂಗಳು
ಎಲ್ಲಾ ರೂಪವು ನಿತ್ಯಸು ಪೂರ್ಣವು
ಎಲ್ಲಾ ಮಹಿಮೆಯ ಯಾರು ಕಾಣರು ೧೩

ಜೀವರ ಬಿಂಬನು ಜೀವನ ಸಹವಿಹ
ಜೀವರಿ ಗುಣಿಸುವ ಸುಖ ದುಃಖಂಗಳ
ದೇವನು ಹರಿತಾ ಸಾರ ಸುಭೋಕ್ತನು
ಜೀವರಿ ಗಲ್ಲವೆ ಕರ್ಮದ ಲೇಪವು ೧೪

ನಿಗಮಕು ಸಿಲಕದ ಅಗಣಿತ ಮಹಿಮನು
ನಗೆಮೊಗ ಶ್ರೀ ಕೃಷ್ಣವಿಠಲ ಪರಾತ್ಪರ
ಸಿಗುವನು ಭಕ್ತಿಗೆ ಸರಿಮಿಗಿಲಿಲ್ಲವೆ
ಬಗೆಯನೆ ದೋಷವ ಶರಣೆಂದವರ ೧೫

## ಸುಳಾದಿ

### ೫

### ಧ್ರುವತಾಳ

ಅನ್ಯವಾರ್ತೆಯ ಬಿಡಿಸು ನಿನ್ನ ವಾರ್ತೆಯ ತಿಳಿಸು
ಇನ್ನಾದರು ಕೈಪಿಡಿದು ನಿನ್ನ ದಾಸರಲಿ ಸೇರಿಸು
ಹೊನ್ನು ಹೆಣ್ಣು ಮಣ್ಣಿಂದ ಹುಣ್ಣು ಹುಣ್ಣು ಹುಣ್ಣಾಗಿ ನೊಂದೆನೊ
ಕುನ್ನಿಯಂತಾಯ್ತ್ಯಯ್ಯ ಎನ್ನ ಬಾಳು ಕೇಳು
ಅನ್ಯರಿ ಗಾಲ್ಪರಿಯೆ ಚೆನ್ನಫಲವೇನೊ
ಬೆನ್ನು ಬಿದ್ದೆನು ನಿನಗೆ ಘನ್ನ ಕರುಣಾಳುವೆ
ಚಿನ್ಮಯ ಮೂರುತಿ ಪ್ರ ಪನ್ನರ ಪರಿಪಾಲ
ಎನ್ನ ಭಾಗ್ಯವೆಲ್ಲೆ ನಿನ್ನದೇ ಸಿದ್ದವು
ಎನ್ನದೆಂಬುವ ದಿನ್ನು ಮನ್ನಮಾಡಿಸಬೇಕು
ಇನ್ನು ಬೇಡವು ತಡವು ಮನ್ನಿಸಿ ಸಲಹೈಯ
ಘನ್ನ ಜಯಮುನಿ ವಾಯುವಂತರ ಸಿರಿ
ಕೃಷ್ಣ ವಿಠಲರಾಯನಿನಗೆ ನಮೊ ನಮೊ ಯಂಬೆ
ನಿನ್ನ ಸಮ್ಮತ ನೀಡು ನಾನಿನ್ನ ದಾಸ ನಾನಿನ್ನ ದಾಸ ೧

### ಮಟ್ಟತಾಳ

ಊರೊಳಗೆ ಇರಿಸೈಯ ಊರಿಂದ ಓಡಿಸೊ
ಸೇರಿಸಿ ಬಾಂಧವರ ಜರಿಸೋ ಜರಿಸೋಯನ್ನ
ಸಾರಿ ಸಾರಿಸಿ ಬೈಸು ವೀರ ಮಾರುತಿ ಪ್ರೀಯ
ಸೂರೆ ನೀಡುತ ಜ್ಞಾನ ಕ್ರೂರರಿಂದಗಲಿಸಿ
ಸಾರ ಸಂತರ ಗಣದಿ ಸೇರಿಸುತ್ತನುದಿನ
ಬಾರಿ ಬಾರಿಗೆ ನಿನ್ನ ಚಾರು ನಾಮಗಳನ್ನು
ಕೇರಿ ಕೇರಿಲಿ ಬೀರಿ ನೀರ ಜಾಕ್ಷನೆ ಏಕ
ಮೇರೆ ಇಲ್ಲದ ದೇವ ಈರ ಪ್ರೇರಕನೆಂದು
ಸಾರಿ ಸಾರುವ ಭಾಗ್ಯ ಹೇರು ಹೇರಾಗೀಯೋ

ಶೂರ ಜಯ ಮುನಿಹೃಸ್ಥ ವಾಯುವಂತರವಿರ್ಪ
ಸಿರಿ ಕೃಷ್ಣವಿಠಲನೆ ಪರಿಪಾಲ ಸರ್ವರಿಗೆ ೨

ತ್ರಿವಿಡಿತಾಳ

ನಾರಿ ಜನರು ಎಲ್ಲ ದೂರು ಮಾಡಿದ ರೆನ್ನ
ಹರಿ ನೀನು ಜರಿದರೆ ಆರು ಯಿಲ್ಲವೊಯನಗೆ
ನೆರೆ ನಂಬೀದವರನ್ನ ಜರಿದು ಹಾಕುವರೇನೋ
ಹಿರಿಯ ರಂದದಿಯನಗೆ ಹುರುಡು ಏನೂ ಇಲ್ಲ
ವಿರಕ್ತಿ ಭಕ್ತಿಗಳರಿಯೆ ಹರಿ ನಾಮ ಗತಿಯೊಂದೆ
ಮೀರಿ ಬರುವ ದುರಿತ ಬೇರು ಕೀಳುವುದಕ್ಕೆ
ಸಾರಿದೆ ತವಪಾದ ಸಿರಿ ಪದ್ಮಜ ವಂದ್ಯ
ಬೀರು ನಿನ್ನಯ ಕರುಣ ತೋರು ಹೃದಯದಿ ರೂಪ
ಮೂರೊಂದು ಅವಸ್ಥೆಯಲಿ ಚರಣದಿರಿಸು ಮನವ
ಸರ್ವತ್ರ ನಿನ್ನಿರವು ತೋರಿಸುಯನಗಿನ್ನು
ತೊರೆದು ಬದುಕಲಾರೆ ಹರಿಯೇ ಗತಿಯೆಂಬ
ಸರ್ವ ಶಬ್ದಘೋಷ ಹರಿನಾಮ ವೆಂತೆಂಬ
ಸರಸ ಜ್ಞಾನವ ನೀಡೊ ಸರ್ವಾಂತರನೆ ಶರಣು
ಸೂರಿ ಜಯ ಮುನಿ ಹೃಸ್ಥ ವಾಯುವಂತರ್ಯಾಮಿ
ಸಿರಿ ಕೃಷ್ಣ ವಿಠಲನೆ ವಿರಕ್ತಿ ಭಕ್ತಿಯ ಬೆರಿಸೊ ೩

ಜೊತೆ

ಪಾರಿಲ್ಲ ಭವಕ್ಕೆಂಬೆ ತ್ವರಿತದಿ ಕೈಪಿಡಿಯೊ
ಶರಣರ ಭಯ ಹರಣ ಶ್ರೀ ಕೃಷ್ಣವಿಠಲ

೬

ಆವೂರು ಈ ಊರು ಯಾವೂರು ಆದರೇನು ಪ

ಕಾವೋರು ಶ್ರೀಹರಿ ಲೇಸಾಗಿ ಇರಲೂ ಅ.ಪ

ನೀರಜನಾಭನ ಕಾಳಿಂಗ ಮಥನನ ಪಾರಿಜಾತವ ತಂದ
ರುಕ್ಮಿಣಿ ಪತಿಯ ಸಾರುತ್ತ ಪಾಡುತ್ತ ಪೊಗಳುತ್ತಬೇಡುತ್ತ
ಚರಣಾವ ನೆರೆನಂಬಿ ತಿರುಗುವ ದಾಸರಿಗೆ ೧

ಆರು ಆಳಿದರೇನು ಆರು ಅಳಿದರೇನು
ಮಾರುವ ಧಾರಣಿ ಏರಿದರೇನು ಇಳಿದರೇನು
ಊರೆಲ್ಲ ಎದುರಾದರೇನು ಹಿತವಾದರೇನು
ಕರಿರಾಜವರದನ ಕೊನೇರಿ ವಾಸನ ಕರುಣವ ಪಡೆದವಗೆ ೨

ಕಾಸು ಎಂದರೆ ಪ್ರಾಣ ಸಾಮಾನ್ಯಜನರಿಗೆ
ಈ ಶರೀರವ ಕಷ್ಟದಿ ಬಿಡುವಾಗ ಬಾಹುದೈ
ವಾಸವಾನುತ ಪಾದ ಸೋಮಶೇಖರ ವಂದ್ಯ
ಶೇಷಗಿರೀಶನ ದಾಸಾನು ಎಂತೆಂದು ಕುಣಿವವಗೆ ೩

ಮೂರುಲೋಕದ ಅರಸು ಸಾರಂಗ ಪಾಣಿಯು
ನೀರಜಭವಾಂಡ ಉದಯಕೆ ಕಾರಣ ಅಷ್ಟಕರ್ತ
ಸಿರಿಪದ್ಮಜಾಸನ ವಂದ್ಯ ದೇವಾದಿದೇವನ
ಮೀರಿ ನಡೆವುದುಂಟೆ ಈ ಚರಾಚರ ಜಗದೊಳು ಮನವೇ ೪

ಊರೆಲ್ಲನೆಂಟರು ಉಣಬಡಿಸುವರಿಲ್ಲ
ಸಿರಿಯಿದ್ದಕಾಲಕ್ಕೆ ಎಲ್ಲರು ನೆಂಟರಯ್ಯ
ಸಿರಿತನ ತಾ ತಪ್ಪಿ ಬಡತನ ಬಂದರೆ
ಯಾರಿಗೆ ಯಾರೈಯ್ಯ ಮೋರೆಯ ತಿರುಹುತ
ನಡಿನಡಿಯೆಂಬರು ೫

ಹರಿ ಊರು ನಮ್ಮೂರು ಹರಿವೋರು ನಮ್ಮೋರು
ಹರಿನಾಮ ಬಂಧುವು ಹರಿನಾಮ ಬಳಗ
ಹರಿಹರಿ ಎಂದರೆ ದುರಿತವು ಪರಿಹಾರ
ಹರಿಗುರು ಚರಣವೆ ಪರಗತಿ ಸಾಧನ ಮನವೇ ೬

ಕೋರಿ ಕೋರಿದ ವರವ ನೀಡುವ ಪ್ರಭುವು
ಸಿರಿಜಯಮುನಿ ಹೃಸ್ಥವಾಯುಗ
" ಶ್ರೀ ಕೃಷ್ಣವಿಠಲಾ" ಸಾರಿದ ಜನರನು ಪೊರೆಯುವ
ಕರುಣದಿ ನೆರೆನಂಬುಮನವೆ ಭಯಬೇಡ ಮನವೇ ೭

೭

ಏನೆಂದ್ಹೇಳಲಿ ತಂಗಿ _ ಏನೆಂದ್ಹೇಳಲಿ ತಂಗಿ _ ಏನೆಂದ್ಹೇಳಲಿ
ರಂಗನ ಮಹಿಮೆಯ ಏನೆಂದ್ಹೇಳಲಿ ಪ

ಘನ್ನಸಿರಿವಿಧಿ ಧ್ಯಾನಕೆ ನಿಲುಕದ
ಪೂರ್ಣಾನಂದನ ಅಗಣಿತ ಮಹಿಮೆಯ ಅ

ಎಲ್ಲವ ಬಲ್ಲನು ಎಲ್ಲವ ಮಾಡುವ
ಎಲ್ಲರ ಒಡೆಯನು ಇಲ್ಲದ ಸ್ಥಳವಿಲ್ಲ
ಬಲ್ಲವರಿಲ್ಲವೆ ಫುಲ್ಲನಾಭನ
ನಲ್ಲನು ಲಕ್ಷ್ಮಿಗೆ ಗೊಲ್ಲನು ಆದನೆ ೧

ಅಂಗನೆ ಲಕ್ಷ್ಮಿಯ ಸೊಗಸಿಗೆ ನಿಲುಕದ
ಅಂಗನೆ ಇಲ್ಲದೆ ಮಗನನು ಪಡೆದವ
ಹಿಂಗದ ತಾನೆ ಅಂಗನೆ ಯಾದವ
ರಂಗನ ಗೋಕುಲ ಹೆಂಗಳ ಕೂಡಿದನೆ ೨

ತಂದೆಯ ಕೊಂದನು ಕಂದನ ಸಲಹಿದ
ಕಂದನ ಕೊಂದನು ತಂದೆಯ ಸಲಹಿದ
ಬಂಧುಗಳೆನ್ನದೆ ಕೊಂದನು ವಂಶವ
ತಂದೆಯು ಇಲ್ಲದೆ ಕಂದನು ಆಗುವನೇ ೩

ದಾನವ ನೀಡಿದ ದಾನಿಯ ತುಳಿದನು
ಮಾನವ ತೆಗೆದಾ ಹೀನನ ಸಲಹಿದ
ದೀನರ ಸಲಹುವ ದಾನವರಳಿವನು
ಜ್ಞಾನಿಗಮ್ಯನು ಮಾನಸ ಹಂಸನ ೪

ಹಸಿವೆಯ ಅರಿಯದ ಅಸಮದೇವನು
ಸೊಸಿಯು ನೀಡಿದ ಶಾಖವ ತಿಂದನೆ
ಹಸನಾಗಿ ತೇಗುತ ಪಶುಪತಿ ಋಷಿಯನು
ವಶವಾಗಿ ಮಾಡಿದ ಮಾಸದಮಹಿಮನು ೫

ನಾಲ್ಮೊಗನಯ್ಯನು ಸುಳ್ಳನು ಹೇಳುತ
ಕಳ್ಳನು ಆದನು ಗೊಲ್ಲರ ಭಕ್ತರಿಗೆ
ಮೆಲ್ಲನೆ ಕುರುಕುಲ ಎಲ್ಲವ ಸವರಿದ
ಬಲ್ಲಿದ ಕೃಷ್ಣಗೆ ಇಲ್ಲವೆ ಸಮರಧಿಕ ೬

ಜಗವನು ಮಾಡುವ ಜಗವನು ಪಾಲಿಪ
ಜಗವನು ಅಳಿಸುವ ಮಗುವಾಗಿ ಬಂದನೆ
ಜಗಜೀವ ಭಿನ್ನನು ಜಗದೊಳು ವ್ಯಾಪ್ತನು
ನಗುತಲಿ ಬಾಯಲಿ ಜಗವನು ತೋರಿದನೆ ೭

ಯಾಗವ ನಡೆಸಿದ ಯಾಗವ ಕೆಡಿಸಿದ
ಯೋಗವ ಚರಿಸುತ ಯೋಗವ ಬೋಧಿಪನೆ
ಬಾಗುವ ಭಕ್ತರ ನೀಗುವ ಕಲುಷವ
ಆಗಮವಂದಿತ ಸಾಗರಶಯನನೆ ೮

ಹತ್ತವತಾರವ ನೆತ್ತಿದ ಮಹಿಮನು
ಉತ್ತಮ ಭಕುತರ ತೆತ್ತಿಗನಾದನೆ
ಬತ್ತಲೆ ಶಿಶುವಾಗಿ ಬಿತ್ತಿದ ಮೋಹವ
ಬೆಸ್ತರಕುವರಿಗೆ ಆತ್ಮಜನಾದವನೆ ೯

ಚಕ್ರವಪಿಡಿದವ ನಕ್ರನ ತರಿದವ
ಶಕ್ರನಕಾಯ್ದವ ವಕ್ರೆಯ ಕೂಡಿದನೆ
ರಕ್ಕಸಯವನನ ಠಕ್ಕಿಲಿ ಅಳಿಸುತ
ಭಕ್ತನಪೊರೆದಾ ಯುಕ್ತಗಳೊಡೆಯನೆ ೧೦

ನಾರೆಂದೊದರಿದ ಉರುತರ ಪಾಪಿಯ
ಭರದಿಂಪೊರೆಯೊ ಕರುಣಾಸಾಗರನೆ
ನರಹರಿದೇವನು ಪರಿಪರಿರೂಪನು
ಪರಿಪರಿಲೀಲೆಗೆ ಮೇರೆಯೆ ಇಲ್ಲಾವೇ ೧೧

ವಾರಿಯಲಾಡುವ ಭಾರವ ಹೊರುವಾ
ಕೋರೆಯ ತೀಡುವ ಘೋರವ ತೋರುವನೇ
ವೀರರತರಿಯುವ ಕ್ರೂರರಸವರುವ
ಜಾರನು ಆಗುವ ವೈರಿಗಳ್ವಂಚಿಪ ಏರುವ ತೇಜಿಯನೆ ೧೨

ಅದ್ಭುತ ರೂಪವ ಕದನದಿ ತೋರಿದ
ಬದರಿಯನಿಲಯಗೆ ತುದಿಮೊದಲಿಲ್ಲಾವೆ
ಉದರದಿ ಮಗುವನು ಮುದದಿಂಸಲಹಿದ
ಮುದಮುನಿ ಪ್ರಿಯನು ಹೃದಯದಿ ವಾಸಿಪನೆ ೧೩

ವಿಷವನು ಕುಡಿದಾ ವೃಷಭವಾಹನ
ಅಸುರನ ಭಯದಿಂ ಘಾಸಿಲಿ ಓಡುತಿರೇ
ಮೋಸದಿ ಯುವತಿಯ ವೇಷವ ಧರಿಸುತ
ಅಸುರನ ಅಳಿಸುತ ಪಶುಪತಿ ಸಲಹಿದನೇ ೧೪

ಭರದಿಂ ರಥವೆತ್ತಿ ನರನಂ ಕಾಯ್ದನು
ಧರಣಿಯ ಒತ್ತುತ ಕುರುಪನ ಕೆಡಹಿದನೇ
ಮರೆಸುತ ರವಿಯನು ಪೊರೆದನು ಚೇಲನ
ಸುರವರಪೋಷಕ ಸಿರಿಪತಿ ಚದುರನ ೧೫

ಗಂಗೆಯಪಡೆದ ಮಂಗಳ ಮಹಿಮನು
ಹಿಂಗದೆ ಗೋಪರ ಸಂಗಡ ಆಡಿದನೇ
ತಿಂಗಳ ಬೆಳಕಲಿ ಶೃಂಗರ ಸೊಬಗನು
ಹೆಂಗಳ ಕೂಡುತ ಸಂಗೀತ ಪಾಡಿದನೆ ೧೬

ಕಾಳಿಯ ಫಣೆಯಲಿ ಕಾಳಿಂದೀಶನು
ತಾಳಕೆ ಕುಣಿಯುತ ಕೊಳಲನ್ನೂದಿದನೆ
ಘೂಳಿಗಳಳಿಯುತ ನೀಲಳತಂದವ
ಕಾಳಿಯಮನೆಯಲಿ ಊಳಿಗ ಮಾಡಿದನೇ ೧೭

ನಾರಿಯು ಮೊರೆಯಿಡೆ ಸೀರೆಯನೀಡಿದ
ವಾರಿಜಾಕ್ಷನು ಸೀರೆಯ ಚೋರನೆ
ನೀರೊಳು ಮುಳುಗಿದ ಪೋರರಿಗೆಲ್ಲ
ತೋರಿದ ಜಗವನು ಸೂರಿಗಳೊಡೆಯನೆ ೧೮

ಗರುಡನ ಏರುವ ಧರಣಿಯ ರಮಣನು
ಏರುತಹುಡುಗರ ತುರುಗಳ ಕಾಯ್ದನೆ
ಮಾರನಪಡೆದ ಮುರಹರಕೃಷ್ಣನು
ಗಿರಿಯನು ಎತ್ತುತ ಹರುಷವ ಬೀರಿದನೇ ೧೯

ಶೃತಿಗಳು ಪೊಗಳುವ ವ್ಯಾಪ್ತನ ನಿತ್ಯನ
ನಿತ್ಯದಿ ಸ್ತುತಿಸಲು ಪಾತಕ ಹೋಗುವುದೇ
ಪೂತನಿ ಅಂತಕ ಗತಿ ಮತಿ ಪ್ರೇರಕ
ದಾತನು ಎಂತೆನೆ ಪ್ರೀತಿಲಿ ಸಲಹುವನೆ ೨೦

ಮಜ್ಜಿಗೆ ಕಡೆಯುವ ರಜ್ಜುವಿನಿಂದಲಿ
ಮೂರ್ಜಗನಯ್ಯನು ಕಟ್ಟಿಸಿಕೊಂಡಾನೆ
ಲಜ್ಜೆಯ ಬಿಡುತಲಿ ಗೆಜ್ಜೆಯ ಕಟ್ಟುತ
ಘರ್ಜಿಸಿ ಪಾಡಲು ಹೆಜ್ಜೆಯ ತೋರುವನೆ ೨೧

ದಾಸರ ಪೋಷಿಪ ಶೇಷಗಿರೀಶನ
ವಿಶೇಷವೆ ಬಣ್ಣಿಸೆ ಶೇಷಗೆ ಆಗದೆ
ದೋಷವು ಇಲ್ಲದ ವಾಸುದೇವನೆ
ತೋಷವ ನೀಡುವ ಸಾಸಿರ ನಾಮಕನೆ ೨೨

ಜಯಮುನಿ ಅಂತರ ವಾಯುವಿನಲ್ಲಿಹ
ಜಯಕೃಷ್ಣವಿಠಲನು ಜೀಯನೆ ಜಗಕೆಲ್ಲ
ನಯಭಯದಿಂದಲಿ ಹಯಮುಖನೊಲಿಸಲು
ಭಯವನು ಹರಿಸುತ ನ್ಯಾಯದಿ ಪಾಲಿಪನೇ ೨೩

## ಸುಳಾದಿ

## ೮

### ಧ್ರುವತಾಳ

ಒಂದು ವೇಳೆ ನಗಿಸುವಿ ಒಂದು ವೇಳೆ ಅಳಿಸುವಿ
ಒಂದು ವೇಳೆ ಅಳಿಸುವಿ ನಗಿಸುವಿ ಹಿಂದೆ ಮಾಡಿದವನ್ಯಾರೋ
ಇಂದು ನುಡಿದು ನುಡಿಸುವನ್ಯಾರೋ ಇಂದು ಹಿಂದು
ಮುಂದುನೀನೇಗತಿ ನಂದನಂದನ ಮುಕುಂದ ಮಾಧವ
ಸಿಂಧುಶಯನ ಅರವಿಂದನಯನ ಬಂಧುವು ನೀನೆ
ಎನಗೆ ಬಳಗವು ನೀನೆ
ತಂದೆ ತಾಯಿಯು ನೀನೆ ಅನ್ಯರ ಕಾಣೆ
ಕಂದನೆಂತೆಂದು ಬಂದು ಸಲಹೈಯ್ಯ
ಸಂದೇಹ ಬ್ಯಾಡ ನಿನ್ನ ನಂಬಿದವನೋ ನಾನು
ಮುಂದಿನ ದಾರಿಕಾಣದೆ ಬಳಲುತ್ತಿರುವೆ
ಕಂದಿಕುಂದಿದೆನು ಮನದೊಳಗೆ ಭಕ್ತ-
ಬಾಂಧವ ಶ್ರೀಕೃಷ್ಣವಿಠಲನೆ ನೀನು ಅಂದು ಇಂದೆನ್ನದೆ
ಇಂದೇಸಲಹೋ ದ್ವಂದ್ವ ಪಾದಗಳಿಗೆ ನಮೋನಮೋ ೧

### ಮಟ್ಟತಾಳ

ಯಾರು ಒಲಿದು ಮಾಡುವದೇನು ಯಾರು
ಮುನಿದು ಮಾಡುವುದೇನು
ಊರುಜನರೆಲ್ಲ ನಕ್ಕಾರಾಗುವುದೇನು ಊರನಾಳುವ
ಧೊರೆ ಮನ್ನಿಸಿದರೇನು ಮುನಿದರೇನು
ಘೋರ ಸಂಸಾರಶರಧಿಯ ದಾಟಿಸಬಲ್ಲರೆ
ಮರಳಿ ಮರಳಿ ಬರುವ ಜನನ ಮರಣಂಗಳ
ಹರಿಸಿ ಪೊರೆಯ ಬಲ್ಲರೇನೋ ಕಂಸಾರಿ
ಸಿರಿ ಪದ್ಮಜವಂದ್ಯ ಅತುಳಮಹಿಮ ನಮ್ಮ
ಸಿರಿ ಕೃಷ್ಣವಿಠಲನ ಚರಣಸರೋಜವಲ್ಲದೆ
ಬೇರೆ ತಾರಕವಿಲ್ಲ ಶರಣು, ಶರಣು, ಶರಣು ೨

### ತ್ರಿವಿಡಿತಾಳ

ಇಲ್ಲಿ ನೀನೇಗತಿ ಅಲ್ಲಿ ನೀನೇ ಗತಿ
ಎಲ್ಲೆಲ್ಲು ನೀನೇ ಗತಿ ಮಲ್ಲ ಮರ್ಧನನೆ
ಬಲ್ಲವರಾರು ನಿನ್ನ ಸಾಕಲ್ಯ ಶರಣ್ಯೆಯ್ಯ
ಗೊಲ್ಲನೆನಿಸಿ ಗೋಪಿಯರಿಗೊಲಿದೆ
ಚೆಲ್ವಸುಂದರಿಯಾಗಿ ಅಸುರರನಳಿದೆ
ಬಲಿಯ ತುಳಿದು ಬಾಗಿಲಕಾಯ್ದೆ
ಮೆಲ್ಲನೆ ದುರ್ಯೋಧನನ ಹಾರಿಸಿದೆ
ಹುಲ್ಲಿನಿಂದಲಿ ಕಾಕಾ ಸುರನ ತುಳಿದೆ
ಹುಲ್ಲೆನೆಪದಿ ಸತಿಯನಗಲಿಕೆ ನಟಿಸಿದೆ
ಕ್ಷುಲ್ಲ ಬೈಯ್ಗಳ ಬೈಯ್ದವನ ಇಂಬಿಟ್ಟುಕೊಂಡೆ
ಸೊಲ್ಲಲಾಲಿಸಿ ನರಸಿಂಹ ನೀನಾದೆ
ಸುಳ್ಳು ಬೋಧಿಸಿ ಬತ್ತಲೆ ನಿಂದೆ
ಪುಲ್ಲನಾಭನಾಗಿ ಮಗನ ಪಡೆದೆ
ನಲ್ಲ ನಿರುಪಮ ಶ್ರೀ ಕೃಷ್ಣ ವಿಠಲನೆ
ಬಲ್ಲಿದರಿಗತಿ ಬಲ್ಲಿದನು ಅಪ್ರತಿಮಲ್ಲ

ನಿಲ್ಲೋ ಎನ್ನ ಮನದಿ ಸರ್ವದಾ ದೇವಾದಿದೇವ
ದೇವಾದಿದೇವ ೩

**ಅಟ್ಟತಾಳ**

ಸ್ನಾನ ಸಂಧ್ಯಾವಂದನದಿ ಮೆಚ್ಚಿಸಲರಿಯೆ
ಮೌನ ಜಪತಪ ನೇಮ ಹೋಮ ಒಂದನರಿಯೆ
ದಾನ ಧರ್ಮಗಳ ಸುಳಿವನ್ನರಿಯೆ
ಅನುದಿನಶ್ರವಣ ಮನನಾದಿ ಸಾಧನ ವನರಿಯೆ
ಜ್ಞಾನಮಾರ್ಗದ ಧೂಳಿ ಸಹ ಕಂಡರಿಯೆ
ತನುಮನ ಧನ ಪ್ರಾಣಗಳನೊಪ್ಪಿಸಿದೆನೊ
ಶ್ರೀನಿವಾಸ ಜಯತೀರ್ಥ ವಾಯ್ವಂತರ್ಗತ ಶ್ರೀಕೃಷ್ಣವಿಠಲ
ನಿನ್ನ ನಾಮ ಉಣ್ಣಿಸಿ ಕಾಯೋ ನಿನ್ನ ನಾಮ
ಉಣ್ಣಿಸಿ ಕಾಯೋ ೪

**ಆದಿತಾಳ**

ಏನುಮಾಡಿದರೇನು ಏನು ಓದಿದರೇನು
ಕಾನನ ದೊಳಗೆ ತಿರುಗಿ ಬೆಂಡಾದರೇನು
ದಾನವಾಂತಕ ನಿನ್ನ
ದಯವಾಗೋ ತನಕ ನಾನು ನಾನು ಎಂದು
ಹೀನ ಮಾನವನಾದೆ ನೀನು ನೀನು ನಿನ್ನಾಧೀನವು
ಶ್ರೀನಿವಾಸಾಮಾನಾಭಿಮಾನವು ನಿನ್ನ ದೈಯ್ಯ ದೇವ
ಸಾನುರಾಗದಲಿ ನಿನ್ನ ನಿಜದಾಸನ ಮಾಡೋ
ವಾಣಿಪಿತ ಶ್ರೀಜಯತೀರ್ಥ ವಾಯ್ವಂತರ್ಗತ ಶ್ರೀಕೃಷ್ಣ ವಿಠಲ
ನಿನ್ನಡಿಗಳಿಗೆ ನಮೋನಮೋ ಎಂಬೆ ಶರಣು ೫

**ಜೊತೆ**

ಹರಿಯೇ ಗತಿ ಹರಿಯೇ ಮತಿ ಹರಿಯೇ ದೈವ
ಹರಿಯೇ ಸರ್ವವು ಶ್ರೀಕೃಷ್ಣವಿಠಲನ ಮೊರೆ ಹೊಕ್ಕು ಬೇಗನೆ
ಸೂರೆಗೊಳಿರೋ ಮುಕುತಿ, ಸೂರೆಗೊಳಿರೋ ಮುಕುತಿ ॥

೯

ಒಲ್ಲೆ ಒಲ್ಲೆ ಸ್ವಾಮಿ ಒಲ್ಲೆ ಒಲ್ಲೆ ಪ

ವಲ್ಲಭ ಶ್ರೀ ಕೃಷ್ಣವಿಠಲನಲ್ಲದೆ
ಬೇರೆ ವಲ್ಲಭನನು ನಾ ಅ.ಪ.

ಹರಿ ನಿಮ್ಮ ಗುಣಗಳ ಪಾಡದೆ ಇರಲೊಲ್ಲೆ
ಚರಿತೆ ನಿಮ್ಮದು ನಿತ್ಯ ಕೇಳದೆ ಇರಲೊಲ್ಲೆ
ಚರಣ ಪೂಜೆಯನಿರುತ ಮಾಡದೆ ಇರಲೊಲ್ಲೆ
ದೊರೆಯೆ ನಿಮ್ಮನು ಬಿಟ್ಟು ಬೇಡೆ ಅನ್ಯರ ನಾನು ೧

ದುಷ್ಟಜನರ ಸಂಗ ಎಂದೆಂದಿಗುವಲ್ಲೆ
ಶಿಷ್ಟಜನರ ಸಂಗ ಎಂದಿಗು ಬಿಡಲೊಲ್ಲೆ
ಅಷ್ಟಕರ್ತನು ಜಗಕೆ ವಿಷ್ಣು ಒಬ್ಬನೆ ಬಲ್ಲೆ
ಕಷ್ಟ ನೀಡುವ ಭವವ ಎಂದೆಂದಿಗು ಮುಂದೆ ೨

ದುರಿತ ರಾಶಿಯ ಮತ್ತೆ ಮಾಡಲು ನಾನೊಲ್ಲೆ
ಅರಿಷಡ್ವರ್ಗಂಗಳ ಜಯಿಸದೆ ಬಿಡಲೊಲ್ಲೆ
ಗುರುಪಾದ ಪದ್ಮಗಳ ಒಲಿಸದೆ ಬಿಡಲೊಲ್ಲೆ
ಪರನಾರಿಯರ ಸಂಗ ಎಂದೆಂದಿಗು ಒಲ್ಲೆ ೩

ಉತ್ತಮೋತ್ತುಮ ಕೃಷ್ಣಸಾರದೆ ಇರಲೊಲ್ಲೆ
ಭೃತ್ಯ ನಿನ್ನವನೆಂದು ಸಾರದೆ ಇರಲೊಲ್ಲೆ
ನಿತ್ಯ ಶೃತಿಯ ಆಜ್ಞೆ ನಡಿಸದೆ ಬಿಡಲೊಲ್ಲೆ
ಸುತ್ತಿ ಕಾಯುವೆ ನಮ್ಮ ಬಲ್ಲೆಬಲ್ಲೆನು ಸತ್ಯ ೪

"ಶ್ರೀ ಕೃಷ್ಣವಿಠಲ"ನೆ ಪರಮಾಪ್ತ ಸರಿಬಲ್ಲೆ
ಏಕೋವಿಷ್ಣುವು ವಾಕು ಸತ್ಯವೆಂಬುದ ಬಲ್ಲೆ
ಏಕ ಭಕ್ತಿಯ ಬಿಟ್ಟು ಏನೇನು ನಾನೊಲ್ಲೆ
ಶ್ರೀಕಾಂತನನು ಬಿಟ್ಟು ಕ್ಷಣವು ಜೀವಿಸಲೊಲ್ಲೆ ೫

## ಅಶ್ವಧಾಟೀ

### ೧೦

ಕಾಯೊ ಕೃಷ್ಣನೆ ಕಾಯೊ ಕೃಷ್ಣನೆ ಕಾಯೊ
ಕೃಷ್ಣನೆ ಎಮ್ಮನು ಪ

ಮಾಯ ರಮಣನೆ ಕಾಯ ಒಪ್ಪಿಸಿ ಜೀಯ
ನಂಬಿದೆ ನಿನ್ನನು ಅ.ಪ

ಸಾರ ಮಾರ್ಗದ ದಾರಿ ಕಾಣದೆ ಸಾರಿ ಬೇಡುವೆ ನಿನ್ನನು
ನೀರಜಾಕ್ಷನೆ ಘೋರಭವದಿ ಪಾರುಗಾಣಿಸೊ ಎಮ್ಮನು ೧

ದುಷ್ಟನಾಶಕ ಶಿಷ್ಟಪಾಲಕ ಶ್ರೇಷ್ಠಮೂರುತಿದೇವನೆ
ಕಷ್ಟಓಡಿಸಿ ಇಷ್ಟಪಾಲಿಸೊ ಅಷ್ಟಕರ್ತನೆ ಬೇಗನೆ ೨

ವೇದಗೋಚರ ಯಾದವೇಂದ್ರ ಸುಧಾಮ ರಕ್ಷಕ ಕೃಷ್ಣನೆ
ನಂದಗೋಪ ಸುಕಂದ ನಾಮಕ ರಾಧೆವಂದಿತ ಚರಣನೆ ೩

ಗೋಪಿ ಮೋಹಕ ಪಾಪಮೋಚಕ ತಾಪಸ ಪ್ರಿಯರೂಪನೆ
ಕೋಪಮಾಡದೆ ಪಾಪಿ ಎನಗೆ ರೂಪ ತೋರಿಸೊ ಬೇಗನೆ ೪

ದೋಷದೂರ ವಿನಾಶವರ್ಜಿತ ಕೇಶಿ ಸೂದನ ಶೂರನೆ
ಆಶೆ ಬಿಡಿಸಿ ಕ್ಲೇಶ ಓಡಿಸಿ ದಾಸನೆನಿಸೊ ಬಿಂಬನೆ ೫

ವೇಣುನಾದ ವಿನೋದ ಸುಂದರ ಜಾಣೆ ರುಕ್ಮಿಣಿ ಅರಸನೆ
ಸಾನುರಾಗದಿ ಜ್ಞಾನದಂಬಕ ದಾನ ಮಾಡೊ ದಾನಿಯೆ ೬

ಶ್ಯಾಮಸುಂದರ ಮಾಮನೋಹರ ಭೀಮ ವಿಕ್ರಮ ಭೂತಿಯೆ
ಸಾಮಸನ್ನುತ ರಾಮಚಂದಿರ ಕಾಮಜನಕನೆ ಕಲ್ಕಿಯೆ ೭

ಸಿಂಧು ಶಯನನೇ ಬಂಧಮೋಚಕ ಮಂದರಾದ್ರಿಧಾರನೇ
ಬಿಂಧುಮಾಧವ ಮಂದಹಾಸದ ಸುಂದರಾಂಗ ರೂಪನೆ ೮

ಲಕ್ಷ್ಮಣಾಗ್ರಜ ಪಕ್ಷಿವಾಹನ ಅಕ್ಷರೇಡ್ಯ ಸುಲಕ್ಷಣ
ಮೋಕ್ಷದಾಯಕ ಲಕ್ಷ್ಮಿರಮಣನೆ ರಕ್ಷಿಸಯ್ಯ ಸರ್ವದಾ ೯

ವಾರಿಜನೇತ್ರ ವಾರಿಜನಾಭ ವಾರಿಜಾಸನ ವಂದ್ಯನೆ
ವಾರಿಮಂದಿರ ಸೂರಿ ಶೇಖರ ಮೇರೆಗಾಣದ ಮಹಿಮನೆ ೧೦

ಸರ್ವರಕ್ಷಕ ಸರ್ವಭಕ್ಷಕ ಸರ್ವಸಾಕ್ಷಿಯೆ ಸರ್ವನೆ
ಸರ್ವವ್ಯಾಪ್ತನೆ ಸರ್ವವಂದ್ಯನೆ ಸರ್ವವಾಚ್ಯದ ಈಶನೆ ೧೧

ಪೂರ್ಣಗುಣನೆ ಪೂರ್ಣಶಕ್ತನೆ ಪೂರ್ಣಭೋಧರ ಪ್ರಿಯನೆ
ಪೂರ್ಣರೂಪನೆ ಪೂರ್ಣಪೂರ್ಣನೆ ಪೂರ್ಣ ತಂತ್ರ ಸ್ವತಂತ್ರನೆ ೧೨

ಬಾಲ ಲೀಲ ಕಲಾವಿಭೂಷಿತ ಲೀಲ ಮಾನುಷ ವಿಗ್ರಹ
ಲೋಲ ಸುಂದರ ಜಾಲ ಮೋಹಕ ಕಾಲನಾಮಕ ಪುರುಷ ೧೩

ಕಾಳಿಮರ್ಧನ ಕಾಳಿವರದ ಕಾಳಿಯನುಜ ಕೇವಲ
ಮೌಳಿಯಿಂದಲಿ ಕಾಲಿಗೆರಗುವೆ ಪಾಲಿಸಯ್ಯ ಈಗಲೇ ೧೪

ಶಕಟ ಭಂಜನ ನಿಕಟ ಸರ್ವರ ಕುಟಿಲ ವರ್ಜಿತ ಶ್ರೇಷ್ಟನೆ
ನಕ್ರತರಿದ ಚಕ್ರಪಾಣಿಯೆ ಫಕ್ಕನೊಲಿಯೊ ಶುಕ್ರನೇ ೧೫

ವಿಪ್ರಸತಿಯರ ಕ್ಷಿಪ್ರದಿಂದಲಿ ತಪ್ಪದೆ ಪೊರೆದಾತನೆ
ತಪ್ಪುನೋಡದೆ ಒಪ್ಪಿಕೊಂಡು ಅಪ್ಪ ಒಲಿಯೊ ವೆಂಕಟ ೧೬

ಪಾಂಡವ ಪ್ರಿಯ ಪುಂಡಮರ್ದನ ಅಂಡಜಾಧಿಪ ಅಂಡಗ
ಭಂಡನೆನಿಸದೆ ತೊಂಡನೆನಿಸೊ ಪಾಂಡುರಂಗ ವಿಠ್ಠಲಾ ೧೭

ಸೋಮಶೇಖರ ಭಾಮೆ ಪೂಜಿತ ಕಾಮಿತ ಪ್ರದಸಾಮನೆ
ತಾಮಸಾರಿಯ ನೇಮದಿಂದಲಿ ನಾಮನುಡಿಸೊ ಶೀಲನೆ ೧೮

ಸೋಮಕಾಂತಕ ಭಾಮ ರೂಪದಿ ಸೋಮಹಂಚಿದ ಜಾಣನೆ
ವಾಮದೇವಗೆ ಭ್ರಮೆಯ ಮಾಡಿದ ಶ್ರೀಮನೋಹರವಾಮನ ೧೯

ಇಂದ್ರಗೊಲಿದ ವೀಂದ್ರವಾಹನ ನಂದಗೋಕುಲ ಚಂದ್ರನೆ
ಬಂಧನಪ್ರದ ಬಂಧು ಸರ್ವರ ತಂದೆ ಕಾಯೋ ಬೇಗನೆ ೨೦

ವಿಜಯಸಾರಥಿ ವೃಜಿಜನಾರ್ದನ ಅಜಭವಾದಿ ಪೂಜಿತ
ತ್ರಿಜಗವಂದಿತ ಭುಜಗಶಯನನೆ ಅಜಿತ ಶಾಶ್ವತ ವಿಷ್ಣುವೆ ೨೧

ಏಕನಾಯಕ ನಾಕಮಂದಿರ ಶ್ರೀ ಕಳತ್ರ ಅನೀಕನೆ
ವಾಕು ಲಾಲಿಸು ನೂಕುಭವವನು ಏಕರೀತಿಲಿಮೆರೆವನೆ ೨೨

ಜೀವ ಪ್ರೇರಕ ಜೀವಭಾಸರ ಜೀವರಾಶ್ರಯ ಭಿನ್ನನೇ
ದೇವದೇವನೆ ಕಾವುದೆಮ್ಮನು ಕೋವಿದಪ್ರಿಯ ಕಪಿಲನೆ ೨೩

ಅನ್ನನಾಮಕ ಅನ್ನದಾಯಕ ಅನ್ನುಉಂಬುವ ಅತಿಥಿಯೆ
ಮಾನ್ಯಮಾನದ ಜ್ಞಾನಿಗಮ್ಯನೆ ಬೆನ್ನುಬಿದ್ದೆ ಅನಂತನೆ ೨೪

ಸಾರ ಉಣ್ಣುವ ಗಾರು ಉಣ್ಣದ ಮಾರುತೀಶನೆ ಸ್ವರತನೆ
ಧೀರ ಜಯಮುನಿ ವಾಯು ಅಂತರ ಮೆರೆವ ಸಿರಿಪತಿ
ಕೃಷ್ಣವಿಠಲನೆ ಬಿಂಬನೆ ೨೫

## ೧೧

ಕೃಷ್ಣ ಕೃಷ್ಣ ಬೇಡಿಕೊಂಡೆ ಕೃಪೆಯ ಪಾಲಿಸೋ ಪ

ಎಷ್ಟು ಎಷ್ಟು ಕೇಳಿಕೊಂಡೆ ಎಳ್ಳಷ್ಟು ದಯಬಾರದೇ ಅ.ಪ

ಜನನ ಮರಣ ಹೊಳೆಯ ಸೇರಿ ಮುಳುಗಿ ಮುಳುಗಿ
ಬಳಲುತಿಹೆನು
ಧಣಿಯು ನೀನು ನೋಡುವಾರೆ ಮುಣಿದು ಬೇಡ್ವೆ
ಎತ್ತೋ ಕರುಣಿ ೧

ನಿನ್ನ ಬಿಟ್ಟು ಇರುವೆನೆನೋ ನಿನ್ನದಯದಿ ನನ್ನ ಬದುಕು
ನಿನ್ನ ಮರೆತೆ ತಪ್ಪುಕ್ಷಮಿಸು ನಿನ್ನ ದಾಸ ಪ್ರಾಣರಾಣೆ ೨

ಈಗ ಆಗ ಎಂದು ಹೇಳಿ ಭೋಗದಲ್ಲೇ ರತಿಯ ನೀಡಿ
ನಾಗಶಯನ ನಾಮಸುಧೆಯ ಬೇಗ ಕೊಡದೆ ಬಿಡುವರೇನೋ ೩

ದೊಷಿನಾನು ಸತ್ಯದೇವ ದೋಷರೂರ ನಿನಗೆ ಶರಣು
ದಾಸನೆಂದು ಭಕ್ತಿಯಿತ್ತು ನಾಶಮಾಡೋ ಕುಂದುಗಳ ನೀ ೪

ಲೋಕವೆಲ್ಲ ಪೊರೆದ ನಿನಗೆ ಸಾಕೆ ಎನ್ನ ಕಷ್ಟವೇನೋ
ನೂಕಬೇಡ ದೇವ ಎನ್ನ ನಾಕ ದೊರೆಯೆ ಪುಣ್ಯಶ್ಲೋಕ ೫

ಬರಿಯ ಶುಂಠ ನಾನು ಹರಿಯೆ ಅರಿಯೆದಾರಿ ವಲಿಸೆನಿನ್ನ
ಶರಣ ಜನರ ಬಿಡನು ಎಂಬ ಬಿರುದೊಂದೆ ಧೈರ್ಯವೆನಗೆ ೬

ಶಿರಿಯರಮಣ “ಕೃಷ್ಣವಿಠಲ” ಶರಣು ಜ್ಞಾನ ಸುಖದ
ಚರಣವೆರಡು ತೋರಿಸೆನಗೆ ನಿರುತ ಹೃದಯ ಕಮಲದಲ್ಲಿ ೭

## ೧೨

ಕೆಟ್ಟೆ ಕೆಟ್ಟೆ ಕೆಟ್ಟೆ ಕೃಷ್ಣ ದೃಷ್ಟಿಕೊಟ್ಟು ಕೈಯ ಪಿಡಿಯೋ ಪ

ಇಷ್ಟ ಮೂರ್ತಿ ಬಿಟ್ಟರೆನ್ನ ಕಷ್ಟಬಿಡಿಸೆಯಾರ ಬೇಡಲೋ ಅ.ಪ

ಕಟ್ಟಿತಾಳಿ ತೊರೆಯೆ ಗಂಡ ಕಷ್ಟವಲ್ಲೆ ಸತಿಗೆ ಪೇಳು
ಶಿಷ್ಠ ದೊರೆಯೆ ದಾಸನೆಂಬಿ ಶ್ರೇಷ್ಠತಾಳಿ ಕಂಠದಲ್ಲಿದೆ
ಬಿಟ್ಟಿ ಏನೋ ಬಿರದು ಎಲ್ಲ ಕಟ್ಟಿಕೊಂಡು ಮೆರೆಯುತಿಹುದು
ಕೆಟ್ಟದೂರು ತಟ್ಟದಿರದು ಭ್ರಷ್ಠನೆನಿಸಬೇಡೊ ಎನ್ನ ೧

ಎಡವಿ ಬೀಳೆ ಮಗುವು ತಾಯಿ ಕಡಿವಳೇನು ಪೊಡವಿಗೊಡೆಯ
ಅಡಿಯ ಪಿಡಿದ ದಾಸನಾನು ಬಡವನಾದರೇನೂ ನುಡಿಯೋ
ಬಿಡದು ನನ್ನ ಭಾರ ನಿನಗೆ ತಡವು ಯಾಕೋ ಬರಿದೆ ಬಿಂಕ
ಸಡಲಿ ಸುತ್ತ ಮಾಯಪಾಶ ದೃಢವ ಮಾಡು ಭಕ್ತಿ ವಿರಕ್ತಿ




ದೋಷಿಯಾದರೇನು ನಾನು ದೋಷದೂರನಲ್ಲೆ ನೀನು
ನಾಶಮಾಡು ಬೀಸಿದೃಷ್ಠಿ ಮೀಸಲಲ್ಲೆ ನಿನಗೆ ಸ್ವಾಮಿ
ಈಶ ಕರುಣಕುಂಟೆ ಮೇರೆ ಓಸು ಜಗದ ಭಾಸವೆಲ್ಲ
ಶ್ರೀಶ ನೀನು ಕೊಟ್ಟರುಂಟು ದಾಸಪೋಷ ಶ್ವಾಸನಾಣೆ ೩

ಗಂಟು ಕಳ್ಳ ನೀನೆ ಸತ್ಯ ಭಂಟನೆನ್ನ ಸ್ವತ್ತು ನೀನೆ
ನೆಂಟ ಬೇರೆ ಇಲ್ಲದಿರಲು ಅಂಟಿಸಿರುವೆ ವಿಷಯ ಕಂಟಕ
ತಂಟೆ ಬಿಟ್ಟು ಈಗಲೇನೆ ಅಂಟಿಕೊಳ್ಳೊ ಮನದಿ ಗಟ್ಟಿ
ಕುಂಟು ಕಲೆಯ ಸುಟ್ಟುಬಿಟ್ಟು ಉಂಟು ಮಾಡು ಎಲ್ಲ ನನಗೆ ೪

ಬೆಟ್ಟದೊಡೆಯ ಶ್ರೀನಿವಾಸ ಎಷ್ಟರವನೊ ನಾನು ಭೃತ್ಯ
ಗಟ್ಟಿಮಾತು ನುಡಿದೆನೆಂದು ಸಿಟ್ಟುಬೇಡ ಪಾದ ಪಿಡಿದಿಹೆ
ಸುಟ್ಟು ಸುಟ್ಟು ಭವದಿ ಬೆಂದು ಇಷ್ಟು
ನುಡಿದೆ ಜಯಮುನೀಂದ್ರ
ಶ್ರೇಷ್ಟಹೃಸ್ಥಮಧ್ವ ಶ್ರೀ ಪ್ರೇಷ್ಟದೈವ ಕೃಷ್ಣವಿಠಲ ೫

## ೧೩

ಕೈಯ ಬಿಡುವರೇ ಕೃಷ್ಣ ಕೈಯ ಬಿಡುವರೇ ಪ

ಹೇಯ ವಿಷಯದಲ್ಲೆ ಇರಿಸಿ ಜೀಯ ನಿನ್ನ ವಿಷಯ ಮರೆಸಿ
ತೋಯಜಾಕ್ಷ ಭಕ್ತಿ ಕೊಡದೆ ಹಾಯಗೊಡದೆ ಭವ ಸಮುದ್ರ ಅ.ಪ

ಬಿಂಬ ನೀನು ಸಿದ್ಧಪ್ರತಿಬಿಂಬ ನಾನು ಸಿದ್ಧವಿರಲು
ತುಂಬಿ ಪರಿವ ನದಿಯ ಮಧ್ಯೆ ಅಂಬಿಗನೆ ತ್ಯಜಸಿದಂತೆ ೧

ಕಲಿಯ ಕಾಟ ವಿಷಯ ದಾಟಗೆಲುವ ಶಕ್ತಿ ಎನಗೆ ಉಂಟೆ
ಒಲಿಯದಿರಲು ನೀನೆ ದಯದಿ ಸುಲಭದೇವ ನೆನಿಸಿ ಹೀಗೆ ೨

ಕಾಯ ಸೊಬಗು ಗುಣವ ನೋಡಿ
ತಾಯಿ ಬಿಡುವಳೇನು ಶಿಶುವ
ಮಾಯೆ ಸುಳಿಯಲ್ಲಿರಲು ಸಹಾಯ ಮಾಡದೇನೆ ಬದಿಗ ೩

ಶಿಷ್ಟನಲ್ಲ ದುಷ್ಟಕರ್ಮ ಭ್ರಷ್ಟನೆಂಬ ಮಾತು ಮೂಟೆ
ಕಟ್ಟಿಪೇಳು ಬಿಟ್ಟು ನಿನ್ನ ಎಷ್ಟು ಕರ್ಮಮಾಡಲಾಪೆ ೪

ಹಿಂದಿನವರು ತಾವೆ ಮುಂದೆ ಬಂದರೇನೊ ಬಿಟ್ಟು ನಿನ್ನ
ಒಂದು ತೃಣವು ಚಲಿಸದಲ್ಲ ತಂದೆ ಮನವ ಮಾಡದಿರಲು ೫

ನಾನು ಎಂದು ಹೀನನಾದೆ ನೀನು ಸ್ವಾಮಿ ನಾನು ಭೃತ್ಯ
ಶ್ರೀನಿವಾಸ ಶರಣು ಶರಣು ಜ್ಞಾನವಿತ್ತು ಕಾಯೊ ಮುಂದೆ ೬

ನಿನ್ನ ನಂಬಿ ಇರುವೆ "ಶ್ರೀ ಕೃಷ್ಣವಿಠಲ" ಸತ್ಯಸತ್ಯ
ಅನ್ಯರನ್ನು ಕಾಣೆನಪ್ಪ ನಿನ್ನ ಚಿತ್ತ ನನ್ನ ಭಾಗ್ಯ ೭

## ವೆಂಕಟೇಶ ಕಲ್ಯಾಣ

### ೧೪

ಚರಿತೆ ನಿನ್ನದು ಪೊಗಳಳಲವೇ ಪರಮ ಪುರುಷ
ಶ್ರೀವೆಂಕಟ ದೊರೆಯೆ ಪ

ಪರಿಸರ ವಿಧಿಗಳ ಕುಣಿಸಿ ಆಡುವಂಥ ಸರಸದಿಂದಲಿ
ವಿಶ್ವಸೃಷ್ಟಿಯಗೈದಂಥ
ನಿರುತ ಉರದಲ್ಲಿದ್ದು ಚರಣಸೇವಿಸುವಂಥ ವರಸಿರಿ
ತಾನಿನ್ನು ಅರಿಯೆನು ಎಂತೆನಲು ಅ.ಪ

ಸುರವರ ನಾಗೆಂದು ಅರಿಯೆಭೃಗುವು ತಾನು
ಜರಿದಂ ಪಾರ್ವತಿ ಪತಿ ಹರ ವಿಧಿಗಳೆನೆಲ್ಲ
ಬರುವ ಬಗೆಯ ಕಂಡು ಸುರತ ಕೇಳಿಯಸೋಗು
ಧರಿಸಿ ಮಲಗಿರಲಂದು ಜರಿದುವದಿಯಲು ವಕ್ಷ
ಹರಿಸಿ ದುಗುಡವ ಮುನಿಗೆ ವರಸಿ ಚರಣದ ಕಣ್ಣು
ತರಿದು ಸಾಧನೆ ಅಧಿಕ ಸಿರಿಗೆ ಪ್ರೇರಿಸಿ ಕೋಪ
ತೊರೆದು ಧಾಮವ ಬೇಗ ಧರೆಗೆ ಇಳಿಯುತ ಬಂದು
ಗಿರಿಯ ಹುತ್ತವ ಸೇರಿ ಸುರಿಸೆ ವಿಧಿಯು ಪಾಲು
ಕರುಣದಿಂದಲಿ ಕೊಂಡು ದೊರೆಯ ಸೇವಕ ಗೋವ
ಹರಿಸೆ ಕೊಡಲಿಯ ನೆತ್ತೆ ಶಿರವನೊಡ್ಡುತ ರಕ್ತ
ಧಾರೆ ಚಿಮ್ಮಿಸಿನಭದಿ ಬರಲು ಚೋಳನು ದೊರೆಗೆ
ಕ್ರೂರ ಶಾಪವನಿತ್ತು ಕರೆಸಿಗುರುಗಳಮದ್ದು
ತರಲು ಹೊರಟದೇವ ನಿರುತ ಚಿನ್ಮಯಗಾತ್ರ
ಉರು ವೈದ್ಯ ಧನ್ವಂತ್ರಿ ನಿರುಪಮ ನಾಟಕದೆ ೧

ಸಾಮ ವಿಶ್ವದ ಸಾರ್ವಭೌಮ ಬೇಡಿದೆ ರಚಿಸೆ
ಧಾಮ ಕ್ರೋಧನ ಕಂಡು ಪ್ರೇಮದಿಂದಲಿ ಬಕುಳೆ
ವಾಮ ಕಂದನು ಆಗಿ ಭಾಮೆ ಪಾಕವನುಂಡು
ಕಾಮ ವರ್ಜಿತ ಪೂರ್ಣ ಕಾಮ ಕುದುರೆಯನೇರಿ
ಕಾಮ ಬೇಟೆಯೋಳ್ ನಿಜ ಕಾಮಿನಿಯನು ಕಂಡು
ದ್ಧಾಮ ಮೋಹವ ತೋರಿ ಭೂಮಿಜಾತೆಯ ಘಟಿಸೆ
ಭಾಮೆ ಬಕುಳೆಯ ಕಳಿಸಿ ಧರ್ಮದೇವತೆಯೆನಿಸಿ
ಗ್ರಾಮ ತಿರುಗುತ ಪೋಗಿ ಜಾಮಾತ ಸನ್ನಾಹ
ಜಾಣ್ಮೆಯಿಂದಲಿನಡೆಸಿ ಕಾಮಿತಾರ್ಥವ ಕೊಂಡು
ಧಾಮ ಸೇರಲು ಬಕುಳೆ ಹೇಮಮಯ ದಾರಿದ್ರ
ನೇಮದಾಟವ ತೋರಿ ಹೇಮಗರ್ಭನ ಕರಿಸೆ
ಸೋಮಶೇಖರ ಕೊಡಿಸೆ ಹೇಮರಾಶಿಯ ತಂದು
ಭೀಮರುಜೆಗಳ ನಟಿಸೆ ಸೋಮಸೋದರಿಕರಿಸಿ
ಮಾಮನೋಹರಗೈದ ಸೀಮೆಇಲ್ಲದಂಥ ೨

ಮದುವೆ ಹಬ್ಬಿಸಿ ಭಕ್ತ ಹೃದಯ ತುಂಬುವ ನಂದ
ಮುದದಿ ಬೆಳೆಸೆ ಪಯಣ ವದಗೆ ಶುಕರಾತಿಥ್ಯ
ಸದಯಗೊಳ್ಳುತ ತೃಪ್ತಿ ಬದಿಗರೆಲ್ಲರಿಗಿತ್ತು
ಮದನಮೋಹನ ತೇಜ ಮದುವೆ ಊರನು ಸೇರಿ
ಕುದಿವ ಕುತೂಹಲದಿ ಅದ್ಭುತ ಸ್ವಾಗತವ
ಪದುಮಾವತಿಯ ತಂದೆ ಹೃದಯ ಪೂರ್ವಕ ನೀಡೆ
ಆದರದಿ ಸ್ವೀಕರಿಸಿ ಪಾದದ್ವಂಧ್ವವ ನೀಡಿ
ವೇಧಾದಿ ನಿಜವೃಂದ ಮೇದಿನೀ ಸುರವೃಂದ
ಸಾಧು ಸಜ್ಜನ ಸಂಗ ಮೋದ ಮೆಲ್ಲಲು ಕೂಡಿ
ವೇದ ಘೋಷವುಗೈಯೆ ವಾದ್ಯದುಂದುಭಿ ಮೊಳಗೆ
ವೇದವೇದ್ಯನು ಮದುವೆ ವೇದಿಕೆಯನು ಏರಿ
ಕಾದುಕೊಂಡಿಹ ಜನಕೆ ಸಾಧಿಸುತಲಭೀಷ್ಟ
ಪದ್ಮಾವತಿಯ ಕರ ಸಾದರ ಪಿಡಿದಂಥ
ಖೇದ ತರಿಯುತ ನಿಜ ಮೋದದಾನವ ಗೈವ ೩

ತಿರುಪತಿ ತಿಮ್ಮಪ್ಪ ಸುರಗಣ ಜಗದಪ್ಪ
ವರಸಮರಿಲ್ಲಪ್ಪ ಭರದಿ ಕಸಿವಕಪ್ಪ
ಅರಿತವರಿಲ್ಲಪ್ಪ ಧರಿಸಿಹ ಸಿರಿಯಪ್ಪ
ಕರುಣ ಸುರಿಸುವನಪ್ಪ ಉರುಗಗಿರಿಯಲ್ಲಿಪ್ಪ
ಗರುಡ ಗಮನನಪ್ಪ ಸುರತರು ಇವನಪ್ಪ
ಗಿರಿಸಪ್ತ ದೊರೆಯಪ್ಪ ಹರಿಕೆ ಕೊಳ್ಳುವನಪ್ಪ
ಅರಿಮಾರಿ ಸರಿಯಪ್ಪ ಶರಣರ ಪೊರೆಯಪ್ಪ
ಕರೆಕರೆ ಬೇಡಪ್ಪ ಸ್ವರತ ಸುಖಮಯನಪ್ಪ
ಅರವಿದೂರನಪ್ಪ ಮರೆವ ಶರಣರ ತಪ್ಪ
ಸರ್ವಹೃದಯಗನಪ್ಪ ಪರಿಪೂರ್ಣಗುಣನಪ್ಪ
ಅರಿಶಂಖಧರನಪ್ಪ ಉರಿವ ರವಿಯಲ್ಲಿಪ್ಪ
ಸರ್ವಮುಕ್ತರಿಗಪ್ಪ ಬಿರಿವ ಖಳರೆದೆಯಪ್ಪ
ಮರುತ ಮಂದಿರನಪ್ಪ ಪರಿಮರ ಹೌದಪ್ಪ
ಪೊರೆದೆ ಮಾಧವನಪ್ಪ ವರಲೀಲಾ ಮಯನಪ್ಪ
ಪರಮ ಅದ್ಭುತನಪ್ಪ ಪರಮಾತ್ಮಹೌದಪ್ಪ
ಕರಣ ಚೋದಿಪನಪ್ಪ ಕರಣಕ್ಕೆಸಿಗನಪ್ಪ
ದುರಿತ ಪಾವಕನಪ್ಪ ಪರಮ ಪಾವನನಪ್ಪ
ಹರನ ಅಪ್ಪನಿಗಪ್ಪ ಪರಮೋಚ್ಚಹೌದಪ್ಪ ೪

ಬಾದರಾಯಣ ಪೂರ್ಣ ಭೋಧ ತೀರ್ಥರ ದೈವ
ಸಾಧುಸಜ್ಜನ ಪ್ರಾಪ್ಯ ಮೋದ ಚಿನ್ಮಯಗಾತ್ರ
ವೇದ ವಿಭಜಿಸಿ ನಿಂದ ಖೇದವಿದ್ಯೆಯ ಕೊಂದ
ವಾದಿವಾರಿಣೆ ಸಿಂಹ ವಾದಿರಾಜರ ಹೃದಯ
ಮೋದ ಹಯಮುಖ ಶುದ್ಧ ವೇದರಾಶಿಯತಂದ
ವೇಧಗರುಹಿದ ಕರುಣಿ ಖೇದ ನೀಡುತಲಿದ್ದ
ಆದಿದೈತ್ಯರ ಕೊಂದು ಮೇದಿನಿಯನು ಎಯ್ದೆ
ಶ್ರೀಧರ ನರಸಿಂಹ ಗೋಧರಮಹಿದಾಸ
ಕಾದುಕೊ ಶ್ರೀ ವಿಷ್ಣು ಭೇದ ವಿದ್ಯೆಯಮನಕೆ
ಭೋಧಿಸು ವರ ಕಪಿಲ ಸಾಧು ಋಷಭದತ್ತ

ಯಾದವ ಕುಲರನ್ನ ಕಾಯ್ದೆ ಗೋಪಿಯ ರನ್ನ
ಸೀಳ್ದೆ ಕೌರವರನ್ನ ಪೇಳ್ದೆ ಪಾರ್ಥಗೆ ಗೀತೆ
ಶುದ್ಧ ಜಯಮುನಿಹೃಸ್ಥ ಮಧ್ವ ಇಂದಿರೆನಾಥ
ಮುದ್ದು ಕೃಷ್ಣವಿಠಲ ಬಿದ್ದೆ ಪಾದದಿ ಶರಣು ೫

## ೧೫

ಛಂದದಿಂದ ಬಂದು ಸಲಹೊ ಫಂಡರೀಶ ನಿನ್ನ ನಂಬಿದೆ ಪ

ತಂದೆ ನೀನೆ ಸರ್ವರಿಗೆ ಅನಿಮಿತ್ತ ಬಂಧುವಲ್ಲವೆ ಅ.ಪ

ದೋಷಿನಾನು ಮೂಢನಾನು ವಲಿಯೆನೆಂದು ಏಕೆ ಹೇಳು
ದೋಷದೂರ ಜ್ಞಾನರೂಪ ಬಿಂಬ ನಿನ್ನ ದಾಸನಲ್ಲವೆ ೧

ಎಲ್ಲಾ ಸತ್ತಾದಾತ ನೀನು ಇಲ್ಲ ನಿನಗೆ ಭೇದವೇನು
ನಲ್ಲ ಶರಣು ಎಂದಮೇಲೆ ವಲ್ಲೆ ಎನ್ನೆ ಬಿರುದು ಪೋಗದೆ ೨

ಕಾಕುಮಾಡಿ ಎನ್ನ ಜಗದಿ ನೂಕಿ ಬಿಟ್ಟು ಭಂಟರಲ್ಲಿ
ಸಾಕದೇನೆ ಬಿಟ್ಟರೀಗ ಲೋಕನಗದೆ ಭಕ್ತರಾಣೆ ೩

ಮುಂದುಮಾಡಿ ಹಿಂದೆ ಎನ್ನ ಹಿಂದು ಮಾಡಿ ಈಗ ನಗುವೆ
ಇಂದಿರೇಶ ನಿನ್ನ ನ್ಯಾಯ ಮಂದನಾನು ಅರಿಯೆ ಶರಣು ೪

ಲಕುಮಿ ಮೊದಲು ಎಲ್ಲಾ ಜಗಕೆ ಶಕುತ ನೀನೆ ಒಬ್ಬ ಆಶ್ರಯ
ಮುಕುತರೊಡೆಯ "ಕೃಷ್ಣವಿಠಲ" ಭಕುತಿ
ನೀಡಿಕಾಯೋ ಬೇಗನೆ ೫

## ೧೬

ಜಯತೀರ್ಥ ಗುರು ಹೃದ್ಗುಹಾಂತರ ವಾಸ
ವಾಯ್ವಂತರ್ಗತ ಶ್ರೀ ಕೃಷ್ಣಯ್ಯ ಜೀಯಾ ಪ

ಕಾಯ್ವೆಯ ನಿನ್ನವ ನಿವನೆಂದು ಅನುದಿನದಿ
ಕಾಯ ಮನ ವಚನದಲಿ ನಿನ್ನ ನೆನವಿರಲಿ
ಜೀಯಾ ಶ್ರೀ ವಿಜಯರಾಯರ ಸೇವೆ
ಕಾರ್ಯಗಳಿಗಭಯವ ನಿಡ್ವೆಯಾ ಜೀಯಾ ೧

ಲೌಕಿಕದಲ್ಲಿಹನೆಂದು ನಿರಾಕರಿಸದೇಲೆ
ನಿನ್ನ ಏಕಾಂತ ಭಕುತಿಯನಿತ್ತು ಸಲಹೋ
ಶ್ರೀ ಕಳತ್ರನೆ ಇವನ ವ್ಯಾಕುಲಗಳ ಹರಿಸಿ
ಕೃಪಾಕಟಾಕ್ಷದಿ ನೋಡಿ ಕಾಯಬೇಕೈಯಾ ೨

ಭಕ್ತವತ್ಸಲ ನಿನ್ನ ಭಕ್ತನಿವನೆಂದೆನಿಸು
ಭಕ್ತಿಬಲಜ್ಞಾನ ಸಾಧನವನಿತ್ತು
ಶಕ್ತನೆನಿಸಿಹಪರದಿ ಭಕ್ತಿನಿನ್ನೊಳು ಇರಲಿ
ಮುಕ್ತರೊಡೆಯ ಕೃಷ್ಣವಿಠಲ ಶ್ರೀ ವೆಂಕಟೇಶ ೩

## ೧೭

ತಂಗಿ ಹೇಳೆ ಚೆಲುವ ಕೃಷ್ಣನು ದೊಡ್ಡವನೇನೆ
ಬಲುದೊಡ್ಡವನೇನೆ ಪ

ರಂಗನ ಪೊಗಳುವ ಹೆಡ್ಡರ ಮಾತನು ಕೇಳುವರೇನೆ
ಅಕ್ಕಕೇಳುವರೇನೆ ಅ.ಪ

ಹಿರಿದಾಗಿ ಕೃಷ್ಣನು ವೇದವ ತಂದು ಸರಸಿಜೋದ್ಭವಗಿತ್ತನೆ
ಕೃಷ್ಣಸರಸಿಜೋದ್ಭವಗಿತ್ತನೆ
ನೀರೊಳಗಿರುವ ಮೀನಾಗೋದು ಗಾರುಡಿವಿದ್ಯವೆ ಇದು
ಗಾರುಡಿವಿದ್ಯವೆ ೧

ಶೃಂಗಾರಲೋಲನು ಹಿಂಗದ ಅಮೃತವ ಸುರರಿಗೆ ಹಂಚಿದನೆ
ಕೃಷ್ಣಸುರರಿಗೆ ಹಂಚಿಚನೆ
ಅಂಗನೆಯಾಗಿ ಹೀಂಗೆ ಮಾಡೋದು ವಂಚನೆಯಲ್ಲವೆ
ಇದು ವಂಚನೆಯಲ್ಲವೆ ೨

ಸಂದರಾಂಗನು ವರಹನಾಗುತ ಭೂಮಿಯನೆತ್ತಿದನೆ ಕೃಷ್ಣ
ಭೂಮಿಯನೆತ್ತಿದನೆ
ಹಂದಿಯವೇಷದಿ ದಿತಿಜನ ಕೊಂದೂದು ಮೋಸದವಿದ್ಯವೆ
ಇದುಮೋಸದ ವಿದ್ಯವೆ ೩

ಪರಿಪರಿವ್ಯಾಪ್ತಿಯ ತೋರುತ ಕೃಷ್ಣನುನರಹರಿ ಆದನೆ
ಕೃಷ್ಣನು ನರಹರಿ ಆದನೆ
ಪೋರನ ಮಾತಿಗೆ ಕರುಳನು ಬಗೆದುದು ಘೋರಕೃತ್ಯವೆ
ಇದು ಘೋರಕೃತ್ಯವೆ ೪

ಘನವಾಮನ ಆಗುತ ಕೃಷ್ಣನು ಇಂದ್ರನ ಸಲಹಿದನೆ
ಕೃಷ್ಣ ಇಂದ್ರನ ಸಲಹಿದನೆ
ಅಣ್ಣನ ಸಲಹಲು ತಮ್ಮನ ತುಳಿದುದು ಯಾತರ ನ್ಯಾಯವೆ
ಇದು ಯಾತರೆ ನ್ಯಾಯವೆ ೫

ಪೊತ್ತು ಕೊಡಲಿಯ ತಿರುಗುತಕೃಷ್ಣನು ಭೂಪರ ತರಿದನೆ
ಕೃಷ್ಣ ಭೂಪರ ತರಿದನೆ
ಪೆತ್ತತಾಯಿಯ ಕಡಿಯುವ ಮಗನು ಘಾತುಕನಲ್ಲವೆ
ಅವನು ಘಾತುಕನಲ್ಲವೆ ೬

ಶ್ರೀಪತಿ ಆದರು ಪಿತನ ಮಾತಿಗೆ ಆಡವಿಯೊಳ್ ಚರಿಸಿದನೆ
ಕೃಷ್ಣ ಅಡವಿಯೊಳ್ ಚರಿಸಿದನೆ
ಕಪಿಗಳಕೂಡೆ ಓಡಾಡುವುದು ಒಡೆಯರ ಲಕ್ಷಣವೆ ಇದು
ಒಡೆಯರ ಲಕ್ಷಣವೆ ೭

ಗೋಪತಿ ಕೃಷ್ಣನು ಪ್ರೀತಿಗೆ ಒಲಿಯುತ ಗೋಪೆರ ಕೂಡಿದನೆ
ಕೃಷ್ಣಗೋಪೆರ ಕೂಡಿದನೆ
ಶ್ರೀಪತಿಯಾಗಿ ಅನ್ಯರ ಬೆರೆದುದು ಪಾಪವಲ್ಲವೆ ಇದು
ಪಾಪವಲ್ಲವೆ ೮

ಉತ್ತುಮ ಬುದ್ಧನು ಆಗುತ ಕೃಷ್ಣನು ದೈತ್ಯರ ನಳಿಸಿದನೆ
ಕೃಷ್ಣ ದೈತ್ಯರ ನಳಿಸಿದನೆ
ಬೆತ್ತಲೆ ನಿಂತು ಸ್ತ್ರೀಯರಕೆಡಿಸುವ ಭಂಡನಲ್ಲವೇ ಇವನು
ಭಂಡನಲ್ಲವೇ ೯

ಚೆಲುವ ರಾಹುತನಾಗಿ ಕೃಷ್ಣ ಧರ್ಮವ ನುಳುಹುವನೆ
ಕೃಷ್ಣ ಧರ್ಮವನುಳುಹುವನೆ
ಒಳ್ಳೆಯ ಮಾತಿಲಿ ಸುಳ್ಳನು ಹೇಳಿದೆ ಕೋಪ ಬೇಡವೆ
ಅಕ್ಕ ಕೋಪ ಬೇಡವೇ ೧೦

ಜೀಯ ಜಯಮುನಿ ವಾಯುವಿನಂತರ ಶ್ರೀ
ಕೃಷ್ಣವಿಠಲನೆ ಅವನು ಶ್ರೀ ಕೃಷ್ಣವಿಠಲನೆ ಅತನು
ಶ್ರೀಕೃಷ್ಣವಿಠಲನು ಅವನಾದರೆ ಜೀಯನೆ ಅವನೆಮಗೆ
ಅಕ್ಕ ಜೀಯನೆ ಅವನೆಮಗೆ ೧೧

## ೧೮

ತಾಂಡವಾಡು–ತಾಂಡವಾಡು ತಾಂಡವಾಡು–ಶ್ರೀ ಕೃಷ್ಣವಿಠಲ ಪ

ತೊಂಡನಾನು_ ತೊಂಡನಾನು_
ತುಂಡುಮಾಡು ಭಂಡ ಭವವ ಅ.ಪ.

ಅಂದು ಇಂದು ಎಂದು ಏನು _ ಹಿಂದು ಮುಂದು
ಒಂದು ಅರಿಯೆ
ಇಂದಿರೇಶ ನಂದದಿಂದ ಮುಂದೆ ಬಂದು ಛಂದ ದಿಂದ ೧

ಹಾಗೋ ಹೀಗೋ _ ಹ್ಯಾಗೋ ಕಾಣೆ _ ಕೂಗಿ ಕೂಗಿ
ಬಾಗಿ ಬಾಗುವೆ
ಯಾಗ _ ಯೋಗ _ ಭೋಗ ಮುಕ್ತಿ ಎಲ್ಲ ನೀನೆ ಬೇಗ ಸಾಗಿ ೨

ದೋಷ ದೂರ _ ವಾಸುದೇವ _ ಶ್ರೀ ಕೃಷ್ಣವಿಠ್ಠಲ ನಿತ್ಯ
ದೋಷಿಯಾದರೇನು ನಾನು ಶ್ವಾಸ ಶಿಷ್ಯ _ ನಿತ್ಯಭೃತ್ಯ ೩

## ೧೯

ದಾರಿ ತೋಚದಲ್ಲಾ ನನಗೆ ಏನು ಪ

ನೀರಜಾಕ್ಷ ನಿನ್ನ ನೊಲಿಸುವ ಅ.ಪ

ಓದಿವಾದ ಗ್ರಂಥಗಳ ವಿದ್ಯಾ ವಿಧಿ ಸಾಧಿಸುತ
ವೇದವ್ಯಾಸ ನಿನ್ನ ಪ್ರೀತಿ ಸಾಧಿಸಲು ಮೂಢನಾನು ೧

ಉಂಡು ಕೂತು ಮುದುಕನಾದೆ ಕಾಯಬೆಳಸಿ
ದಂಡಕಾಲ ಕಳೆದುದಯ್ತು
ಮಂಡೆಗೀಗ ಹತ್ತದವು ಫಂಡರೀಶ ಕೃಪೆಯಮಾಡೊ ೨

ಹಾಡಿಪಾಡಿ ವಲಿಸಾಲು ರಾಗ ಈ ಭಾವ ತಾಳ ಕಾಣೆ
ಕಾಡು ಕೋಣನಂತೆ ಇರ್ಪೆ ನೀಡಿ ಸಲಹೊ ಸರ್ವ ಶಕ್ತಿ ೩

ದಾನಧರ್ಮತೀರ್ಥಯಾತ್ರೆ ನಾನು ಮಾಡೆ ಹುಟ್ಟು ಬಡವ
ಶ್ವಾನನಂತೆ ತಿರಿದು ಉಂಬೆ ಸಾಧ್ಯವೇನು ನೀನೇ ನುಡಿಯೊ ೪

ನೆಂಟರಿಷ್ಟರೆಲ್ಲ ಎನ್ನ ಕೈಯ ಬಿಟ್ಟು ಹೋದರೈಯ
ಒಂಟಿಯಾಗಿ ಅಲೆದು ಅಲವೆ ಭಂಟನೆನಿಸಿ ಕಾಯಬೇಕೊ ೫

ದಾಸನಾಗಿ ಬಾಳೋದಕ್ಕೆ ಆಶೆಯಿನ್ನು ತೊಲಗಲಿಲ್ಲ
ಮೊಸವೇನೆ ಬರಿಯ ವೇಷ ದೋಷದೂರ ಶ್ರೀಶವಲಿಯೊ ೬

ಹಿಂದಿನವರ ಕಾರ್‍ಯ್ದಬಗೆಯು ಇಂದಿನವರಿಗೆ ಬರಿಯ ಕಥೆಯು
ಮಂದನೆನ್ನ ಈಗ ಪಿಡಿದು ಮುಂದು ಮಾಡೊ ನಿನ್ನ ಖ್ಯಾತಿ ೭

ಶರಣ ಜನರ ಬಿಡನು ಎಂಬ ಖರೆಯಬಿರುದು ನಿನ್ನದೆಂದು
ಹಿರಿಯರಿಂದ ಅರಿತುಬಂದೆ ಪರಮ ಕರುಣಿ ಕೈಯ ಪಿಡಿಯೊ ೮

ಕ್ರಿಮಿಯ ಪೊರೆದ "ಕೃಷ್ಣವಿಠಲ" ಶ್ರಮವೆ
ನಿನಗೆ ಯೆನ್ನ ಪೊರೆಯೆ
ಕ್ಷಮಿಸಿ ದೋಷ ಪೊರೆಯೊ ಬೇಗ ನಮಿಪೆ ನಂಬಿ ನಿನ್ನನೀಗ ೯

## ೨೦

ದ್ರೋಹಿಯೋ ನಾನಿನಗೆ ದ್ರೋಹಿಯೋ ಪ

ಪಾಹಿ ಬ್ರಹ್ಮಜವಂಶ ಪಾಪ ಬ್ರಾಹ್ಮಣ ಪ್ರಿಯ ಅ.ಪ

ಸ್ವಪ್ನ ಜಾಗ್ರತೆ ನಿದ್ರೆ ಮೋಕ್ಷಾವಸ್ಥೆಯಲ್ಲಿ
ಗೊಪ್ಪ ತೈಜಸ ವಿಶ್ವ ಅಪ್ಪತುರೀಯನಾಗಿ
ತಪ್ಪದೆ ಸಲಹುವ ದಾತ ನಿನ್ನನ್ನು ಬಿಟ್ಟು
ಬೆಪ್ಪನಂದದಿ ನರರ ಯೆಂಜಲ ಬಯಸುವೆ ೧

ಬಿಂಬ ಮೂರ್ತಿಯು ನೀನು ಪ್ರತಿ ಬಿಂಬನಾನಿನಗೆ
ತುಂಬಿ ಅಂತರ್ಬಹಿ ಮೆರೆವ ವಿಷ್ಣುವೆ ನಿನ್ನ
ನಂಬಿದೆ ದೃಢದಿಂದ ಬರಿದೆ ಹಂಬಲಿಸುವೆ
ಬೆಂಬಲನಾಗಿದ್ದು ತುಂಬೊ ನಿನ್ನಯ ಭಕ್ತಿ ೨

ಸತಿ ಸುತ ಪಿತರಲ್ಲಿ ತಿಳಿಯದೆ ನಿನ್ನಿರವ
ಹಿತರವರು ಬರಿದೆಂಬ ಭ್ರಾಂತಿಯ ನೀಗದೆ
ಖತಿಯ ಪಡುವೆನು ಭವದಿ ಕುಮತಿಯನಗೆಮುಂದೆ
ಗತಿಯೇನು ಜಗದೀಶ ಮರೆತು ನಿನ್ನನು ದೇವ ೩

ಕಸವ ರಸವೆಂದು ಬಯಸುವೆ ವಿಷಯವ
ರಸವ ವಿಷವೆಂದು ತೊರೆದು ಜೀವಿಸುತಿರ್ಪೆ
ಅಸಮವಿಷಣವಿಷ್ಣು ಆತ್ಮಾಖ್ಯಾತನ ನಿನ್ನ
ತುಸಸಹ ನೆನೆಯದೆ ಹುಸಿಯ ದಾಸನಾಗಿ ೪

ನನ್ನದಲ್ಲದ ಒಡವೆ ನನ್ನದೆಂದು ತಿಳಿವೆ
ನಿನ್ನ ಸ್ವಾಮಿತ್ವವ ಮರದು ಮೆರೆಯುತಿರ್ಪೆ
ನನ್ನದೇ ಸ್ವಾತಂತ್ರವೆಂದು ತಿಳಿದು ಭವದಿ
ಹುಣ್ಣು ತಿಂದೆನು ದೊರೆಯೆ ಕೊಡದೆ ನಿನ್ನದುನಿನಗೆ ೫

ವೇದ ವೋದುವ ನಾನು ನಾನೆನೀನೆಂಬುವೆ
ಭೇದವ ತಿಳಿಯದೆ ಭಜಿಸುವೆ ಕುವಿದ್ಯೆ
ಬಾದರಾಯಣಗುದರ ಭೇದವ ನುಡಿಯುವೆ
ಮಧ್ವಮಂದಿರ ಕೃಷ್ಣ ನೀನಿಲ್ಲ ವೆನ್ನುತ ೬

ಪೂರ್ಣ ಗುಣದವ ನಿನ್ನ ನಿರ್ಗುಣನೆಂಬುವೆನು
ಪೂರ್ಣರಲ್ಲದ ಸುರರ ಸಾಟಿ ನಿನಗೆಂಬುವೆನು
ಪೂರ್ಣಬೋಧರ ಕರುಣ ಕೊಡಿಸದ್ದಿದರೆಯಿನ್ನು
ಜ್ಞಾನ ಮಾರ್ಗವ ಕಾಣೆ ಸ್ವಾಮಿ ಜಗಜ್ಜನಕ ೭

ಜನನ ಮರಣ ರಹಿತ ಜನಿಸುವೆ ನಮ್ಮೊಡನೆ
ಕ್ಷಣ ಬಿಟ್ಟಗಲದಲೆಮಗೆ ಉಂಡುಣಿಸುತಿಪ್ಪೆ
ಅನಿಮಿತ್ತ ಬಂಧುವೆ ಮರೆತು ನಿಮ್ಮುಪಕಾರ
ದನುಜರ ಸೇವಿಸುತ ಹಾಳು ಮಾಡಿದೆ ಬಾಳು ೮

ದಾರಿತಪ್ಪಿ ನಡೆದು ನಿರಯ ಭಾಜನ ನಾದೆ
ದೂರವಾಯಿತು ಮುಕುತಿ ದಾರಿಕಾಯುವರ್‍ಯಾರೊ
ಧೀರ ಜಯತೀರ್ಥ ವಾಯು ಅಂತರದಿರ್ಪ
ನೀರಜಾಕ್ಷನಮ್ಮ ಶ್ರೀ ಕೃಷ್ಣವಿಠಲನೆ ೬

## ೨೧

ನಂಬಿದೆನೊ ನಿನ್ನ _ ನಿಖಿಳ ಗುಣಗಣ ಪೂರ್ಣ ಪ

ಅಂಬುಜಾಸನ ಜನಕ ನರಹರಿ
ಅಂಭ್ರಣೀ ಜಗನ್ನಾಥ ನಾಯಕ
ಬಿಂಬ ವಿಷ್ಣುವೆ ನಿಖಿಳವಿಶ್ವಕೆ
ತುಂಬಿ ಭಕ್ತಿಯ ಕಾಯೋ ಕರುಣಿ ಯೇ ಅ.ಪ.

ತಂದೆಕಾರಣ ಭವದೀ- ನೀ ಎನ್ನ
ಬಂದೆನಲ್ಲದೆ ನಿಜದೀ- ಸುಖಪೂರ್ಣ
ನಿಂದು ನಡೆಸದೆ ಭವದೀ- ದಾಟಿನ್ನ
ಎಂದಿಗಾದರು ಗೆಲ್ಲುವೆನೆ ಘನ್ನ
ಬಂಧನಪ್ರದ ನೀ ಬಂಧಮೋಚಕ
ತಂದ ವಿಷ್ಣುವೆ ಮೂಲಕಾರಣ
ವೆಂದು ಶೃತಿಗಳವೃಂದ ನುಡಿವುವು
ಬಂದು ನಿನಗಿಂತಧಿಕರಾರ್‍ಯೆ
ನಿಂದು ಹೃದಯದಿ ಸರ್ವಕಾಲದಿ
ತಂದು ಉಣಿಸುವೆ ಸಕಲ ವಿಷಯವ
ಬಂಧಿ ನಾನಿಹೆ ಜಡವೆ ನೀ ಬಿಡೆ
ಮುಂದಿನಾಗತಿ ಬೇಗ ತೋರ್‍ಯೆ
ಇಂದಿರೇಶ ಮಹೇಂದ್ರ ಸುಖಮಯ
ಕಂದರಾಶ್ರಯ ಬ್ರಹ್ಮಮಂದಿರ
ನಂದಿವಾಹನ ತಾತ ವಿಭುವರ

ಚಂದಗೋಚರ ಸಾರ್ವಭೌಮನೆ
ಕೊಂದುನಕ್ರನ ಗಜವ ಸಲಹಿದೆ
ನಂದನೀಡಿದೆ ಪಾರ್ಥಮಡದಿಗೆ
ತಿಂದು ಎಂಜಲ ಕಾಯ್ದೆ ಶಬರಿಯ
ಗಂಧ ಕೊಳ್ಳುತ ಕಾಯ್ದೆ ಕುಬ್ಜೆಯ
ಕಂದ ಕೂಗಲ್ ಬಂದೆ ಕಂಭದಿ
ಇಂದ್ರ ಗೋಸುಗ ಬಲಿಯ ಬೇಡದೆ
ಮಂದರಾದ್ರಿಯ ಪೊತ್ತೆ ಸುರರಡೆ
ಸುಂದರಾಂಗಿಯುಆದೆ ಹಾಗೆಯೆ
ಹಿಂದೆ ಈತೆರ ನಿತ್ಯತೃಪ್ತನೆ
ಬಂದು ಸಲಹಿದ ಭಕ್ತವೃಂದವ
ಮಂದನಾದರು ಶರಣುಬಿದ್ದವ
ನೆಂದು ಸಲಹೈ ಪೂರ್ಣಕರುಣಿಯೇ ೧

ಕೂಡಿಸುತ ಮನ ವಿಷಯ ಬಲೆಯಲ್ಲೀ
ಮಾಡಿಸುವೆ ಮಾಡಿದ್ದ ದಿನದಿನದೀ
ಗೂಢ ನಿನ್ನಯ ಭಕ್ತಿ ಕೊಡಲೊಲ್ಲೀ
ಕೇಡುಮೋಹ ಸಜಾಡ್ಯ ಹರಿಸಿಲ್ಲೀ
ಓಡಿಓಡಿಸೆ ಜಗವು ನಡೆವುದು
ನೋಡಿನೋಡಿಸೆ ನಾವು ನೋಳ್ಪೆವು
ಮಾಡಿಮಾಡಿಸೆ ಕರ್ಮವಾಹುದು
ಪ್ರೌಢ ನಿನ್ನಯ ಬಲದ ವಿಶ್ವಕೆ
ಕಾಡಿಕಾಡಿಪ ವಿಷಯ ಬಿಡಿಸುತ
ಹಾಡಿಹಾಡಿಸಿ ನಿಮ್ಮ ಕೀರ್ತನೆ
ಆಡಿಆಡಿಸಿ ಸಾಧುಸಂಗದ
ಜಾಡುತೋರಿಸೊ ಭಕ್ತಿ ಮಾರ್ಗದ
ಕ್ರೋಢನರಹರಿ ಮತ್ಸ್ಯವಾಮನ
ಪ್ರೌಢ ಭಾರ್ಗವ ರಾಮಕೃಷ್ಣನೆ
ಗಾಡಿಕಾರ ಪರೇಶ ಬುದ್ಧನೆ

ದೂಡು ಕಲಿಯನು ಕಲ್ಕಿದೇವನೆ
ಕೂಡು ಮನದಲಿ ಬಾದರಾಯಣ
ನೀಡು ಜ್ಞಾನವ ಜೀಯ ಹಯಮುಖ
ಮಾಡು ದತ್ತಾತ್ರೇಯ ಕೃಪೆಯನು
ಈಡುಕಾಣದು ಕಪಿಲಮೂರ್ತಿಯೆ
ಬೀಡುಗೈದಿಹ ಬೀಜ ನಿದ್ರೆಯು
ನೋಡಗೊಡದ್ಯೆ ನಿನ್ನತುರ್ಯನೆ
ನಾಡುದೈವಗಳನ್ನು ಭಜಿಸಲು
ಓಡದದು ಎಂದೆಂದು ಸತ್ಯವು
ಮಾಡುತಲಿ ಸಾಷ್ಟಾಂಗ ನತಿಗಳ
ಜೋಡಿಸಿಹೆ ಶಿರ ಪಾದಪದ್ಮದಿ
ಗಾಢಪ್ರೇಮದಿ ಸಲಹು ಭೂಮನೆ
ಮೂಡಿಸುತನಿಜ ಭಕ್ತಿ ಜ್ಞಾನವ ೨

ಎನ್ನ ಯೋಗ್ಯತೆ ನೋಡೆ ಫಲವಿಲ್ಲ
ನಿನ್ನಕೃಪೆ ತೋರದಿರೆ ಗತಿಯಿಲ್ಲ
ಅನ್ಯ ಹಾದಿಯು ಯಾವುದೆನಗಿಲ್ಲ
ಘನ್ನಚಿತ್ತಕೆ ಬರಲು ತಡಿಯಿಲ್ಲ _ ಹೇನಲ್ಲ
ಪೂರ್ಣಜ್ಞಾನಾನಂದ ಶಾಶ್ವತ ಪೂರ್ಣ ಚಿನ್ಮಯ
ಪೂರ್ಣ ಮೂಲದಿ ಪೂರ್ಣ ನಂದದಿ
ಪೂರ್ಣ ಅವಯವಿ ಪೂರ್ಣಶಕ್ತನೆ
ಪೂರ್ಣಬೋಧ ಮುನೀಂದ್ರ ವಂದಿತ
ಪೂರ್ಣಕರುಣಾ ಶರಧಿ ದೇವನೆ
ಪೂರ್ಣನಿತ್ಯಾನಂದ ದಾಯಕ
ಪೂರ್ಣಮಾಡ್ಯೆ ಬಯಕೆ ತೂರ್ಣದಿ
ನೀನೆ ಸರ್ವಾಧಾರ ಪ್ರೇರಕ ನೀನೆ ರಕ್ಷಕ ಸರ್ವಶಿಕ್ಷಕ
ನೀನೆ ಸೀಮಾಶೂನ್ಯ ನಿಜ್ಞಯ ನೀನೆಪೊಗಳಿತನಿಖಿಳವೇದದಿ
ನೀನೆ ವಾಚ್ಯನು ಸರ್ವಶಬ್ದದಿ ನೀನೆ ಮುಕ್ತಾಯಕ್ತ ಸೇವಿತ
ನೀನೆ ದೋಷವಿದೂರ ಸ್ಥಾಣುವು ನೀನೆ ಸೃಷ್ಟಾ ದೃಷ್ಟಕರ್ತೃವು

ನಿನ್ನಸಮ ಉತ್ಕೃಷ್ಟರಿಲ್ಲವು ನಿನ್ನ ದಾಸರು ಸರ್ವಜೀವರು
ಭಿನ್ನರೈ ಸರ್ವತ್ರ ಸರ್ವರು ನಿನ್ನ ದಾಸರ ಭಾಗ್ಯಬೇಡುವೆ
ಜನ್ಮಜನ್ಮಕು ಇದನೆ ಬಯಸುವೆ ನಿನ್ನ ನಂಬಿಹೆ ನಿನ್ನನಂಬಿಹೆ
ಘನ್ನಜಯಮುನಿ ವಾಯುಮಂದಿರ ಚೆನ್ನ
ಸಿರಿಪತಿ ಕೃಷ್ಣವಿಠಲನೇ ೩

## ೨೨

ನಂಬಿದೇ ನರಹರಿಯೆ ನಾ ಪ

ನಂಬಿದೆನೊ ಬ್ರಹ್ಮಾದಿ ವಂದಿತ ಪೂರ್ಣ ಸುಗುಣ
ಕಂದಂಬ ನಿರುಪಮ ನಿತ್ಯಮುಕ್ತಾಮುಕ್ತ ಜೀವದ
ಬಿಂಬ ನಾಯಕ ನಿರಜ ಬ್ರಹ್ಮಜ ವಿಶ್ವ ಭಾಸಕ
ಅಂಭ್ರಣೀಪತಿ ಸರ್ವತಂತ್ರ ಸ್ವತಂತ್ರ
ಮುಕ್ತಿದನೇಕನೆಂಬುದಾ ಅ.ಪ

ನೊಂದು ನೊಂದೆನೊ ಭವದಿ ಹಿಂದುಮುಂದನು ಕಾಣೆ
ಬಂಧ ನೀಡುವ ನೀನೆ ಬಂಧಾ ಬಿಡಿಸಲುಬೇಕೊ ಸ್ವಾಮಿ
ತಂದೆ ನೀನನಿಮಿತ್ತ ಬಂಧುವು ಇಲ್ಲ
ಸಂಶಯವೆಂದು ಪೊಗಳುವೆ
ಪೂರ್ಣ ಪೂರ್ಣಾನಂದ ಸಜ್ಜನನಂದ ಕಾಮದ ಸಾಮ
ಶಾಶ್ವತ ಸಾರ್ವಭೌಮ ಮಹೇಂದ್ರನಮಿಸುವೆ
ಪೂರ್ಣಚಂದ್ರ ಸುತೇಜಭವಹರ ೧

ದಡ್ಡನೋ ನಾನಿನ್ನುಗುಡ್ಡತೆರವಿದೆ ಕರ್ಮ
ಅಡ್ಡಿಯಾಗಿದೆ ಸುಖಕೆ
ವಡ್ಡುವೆ ಸರ್ವಸ್ವನಿನಗೆ ದೊಡ್ಡವನು ನೀವಲಿಯೆ ಎನ್ನಯ
ದಡ್ಡತನ ನಿನ್ನೇನುಮಾಳ್ಪದು ಸಡ್ಡೆಮಾಡದೆ ದೋಷರಾಶಿಯ
ದೊಡ್ಡಹಿರಿಯರ ಕರುಣಕೊಡಿಸುತ ದುಡ್ಡುಕಾಸಿನ
ಮಮತೆ ತೊಲಗಿಸಿ

ಲಡ್ಡು ತಿನ್ನಿಸಿಜ್ಞಾನ ಭಕ್ತಿಯ ಜಾಡ್ಯಜರಿಸೈಹುಟ್ಟುಸಾವಿನ
ಗುಡ್ಡಹೊತ್ತ ಮಹಾಂತರೊಡೆಯನೇ ೨

ಹಣ್ಣೆಂದು ವಿಶಯದಾ ಹುಣ್ಣುಮೆದ್ದಿಹೆ ಸಿರಿ "ಕೃಷ್ಣವಿಠಲ"ನೆ
ನಿನ್ನಾಕರುಣವೆ ತಾರಕ ಇನ್ನುಮುನ್ನು ನಿನ್ನ ನಂಬಿಹೆ
ಜ್ಞಾನಮಾನವ ನೀಡ್ವದಾತನೆ ಸಣ್ಣವನ ಪಿಡಿದಿನ್ನು ನೀ
ಪ್ರಸನ್ನನಾಗೆಲೊ ದೇವದೇವನೆ ನಿನ್ನದಾಸರ ಭಾಗ್ಯವೊಂದೇ
ಸಾಕು ಸಾಕೈಯೆಂದು ಬೇಡುವೆ ಅನ್ಯರೊಳ್‌ರತಿ ಇಲ್ಲದಿರಲ್ಯೆ
ಮಾನ್ಯ ಮಧ್ವರ ಮತದಿ ನಿಲಿಸು ೩

## ೨೩

ನಂಬಿದ್ಯಾ ಮನವೇ ನಂಬಿದ್ಯಾ ಪ

ನಂಬಿದ್ಯ ಮನವೆ ಕೊಂಡಾಡಿದ್ಯ
ಆನಂದ ತೀರ್ಥರ ಮತವೆಸತ್ಯವೆಂದು ಅ.ಪ

ಇಂದಿರೆ ರಮಣನೆ ಪರದೈವವೆಂದು
ಬಂಧನಾದಿ ಅಷ್ಟಕರ್ತೃತ್ವ ಆತನದೆಂದು
ಕುಂದುಕೊರತೆಗಳಿಲ್ಲದ ಸರ್ವೇಶ ಶಾಶ್ವತನೆಂದು
ನಂದ ಕಂದನು ಸಾನಂದ ಗುಣ ಪೂರ್ಣ ಸ್ವರತನೆಂದು ೧

ನಾರಾಯಣನೆ ಸರ್ವೋತ್ತುಮನು ಎಂದು
ಸಿರಿ ಅಜಶಿವರೆಲ್ಲ ಹರಿಯಕಿಂಕರರೆಂದು
ಮುರವೈರಿ ಅಂತಃ ಬಹಿರ್ವ್ಯಾಪ್ತನು ಎಂದು
ಶಾರಂಗ ಪಾಣಿಯೆ ಸರ್ವಾಂತರ್ಯಾಮಿಯೆಂದು ೨

ಸಾಕಾರಸರ್ವೇಶ ನಿರ್ವಿಕಾರ ನೆಂದು
ಓಂಕಾರ ವಾಚ್ಯನೆ ಸರ್ವಾಧಾರ ಸರ್ವಗನೆಂದು
ಅಕಾರಾದಿ ಸರ್ವವರ್ಣಸ್ವರ ಶಬ್ದ ವಾಚ್ಯನುಎಂದು
ಅಕಳಂಕ ಚರಿತ ಅನಾದಿ ಅಜ ಅಪ್ರಮೇಯನೆಂದೂ ೩

ವೇದಗೋಚರ ತಾವೇದಾತೀತನೆಂದು
ವಿಧಿಸಿರಿ ವಂದಿತ ಸಾಕಲ್ಯದಿ ಅವಾಚ್ಯನೆಂದು
ಮಧುಸೂಧನನು ಚಿನ್ಮಯ ವಪುಷನೆಂದು
ಭೇದವಿಲ್ಲದ ರೂಪ ಗುಣಕ್ರಿಯ ಅವಯವನೆಂದು ೪

ನಾಶರಹಿತ ಕೇಶವನೊಬ್ಬ ಆರ್ತಿವರ್ಜಿತ ನೆಂದು
ಕ್ಲೇಶರಹಿತ ವಾಸುದೇವನು ವಿಧಿನಿಷೇಧ ವರ್ಜಿತನೆಂದು
ವಿಶ್ವೇಶ ಸರ್ವತಂತ್ರ ಸ್ವತಂತ್ರನು ಸಾರ್ವಭೌಮನು ಎಂದೂ
ವಾಸುಕಿ ಶಯನನು ಲೀಲೆ ಗೋಸುಗ ವಿಹಾರಮಾಳ್ಪನೆಂದು ೫

ಪುರುಷ ಸೂಕ್ತ ಪ್ರತಿಪಾದ್ಯ ಅಪ್ರಾಕೃತನೆಂದು
ವರಗಾಯತ್ರ್ಯಾದಿ ಸರ್ವಮಂತ್ರ ಪ್ರತಿಪಾದ್ಯನೆಂದು
ಪರಮ ಪುರುಷನೆ ಅಪವರ್ಗ ಗತಿದಾಯಕನೆಂದೂ
ಮಾರಮಣನ ಪಾದ ಭಜನೆಯೆ ಸಾರವೆಂದೂ ೬

ವಿರಂಚಿ ಜನಕನೆ ಸರ್ವತ್ರ ಸರ್ವರಲಿದ್ದು ಸರ್ವಕಾರ್ಯ
ಕಾರ್ಯಗಳನು ಮಾಡಿ ಮಾಡಿಸುವನೆಂದು
ಸರ್ವಜೀವರಿಗೆ ಕರ್ಮಗಳುಣಿಸಿ ತಾ ನಿರ್ಲೇಪನೆಂದೂ
ಖರಾರಿರೂಪಗಳೆಲ್ಲ ಅನಾದಿ ಶುಕ್ಲಶೋಣಿತವರ್ಜಿತವೆಂದು ೭

ಲಕ್ಷ್ಮಿರಮಣನು ಪಕ್ಷಪಾತ ರಹಿತನೆಂದು
ಪಕ್ಷಿವಾಹನನು ಕ್ಷರಾಕ್ಷರ ವಿಲಕ್ಷಣನೆಂದು
ಲಕ್ಷ್ಮಣಾಗ್ರಜನು ಕುಕ್ಷಿಯೊಳಗೆ ಬ್ರಹ್ಮಾಂಡ ರಕ್ಷಿಪನೆಂದು
ಇಕ್ಷು ಚಾಪನ ಪಿತನಚಿಂತಾದ್ಭುತನೆಂದು ೮

ಹಂಸಾದಿ ಹದಿನೆಂಟು ರೂಪಗಳ ಧರಿಸಿ
ಅಂಶಾಂಶರೂಪದಿ ಚೇತನಾ ಚೇತನ ದೊಳ
ಹೊರಗೆ ವ್ಯಾಪಿಸಿ
ಕಂಸಾರಿಸಕಲವ ನಡಿಸೀನಡಿಸುತ ಸುಖದುಃಖಗಳ
ಲೇಶಯೋಗ್ಯತೆ ಮೀರಗೊಡದಲೆ ಉಣಿಸುವನೆಂದು ೯

ಪತಿತ ಪಾವನ ಪರಾವರೇಶ ತ್ರಿಗುಣವರ್ಜಿತನೆಂದು
ಸತತ ಸ್ವಪ್ನ ಸುಷಪ್ತಿ ಜಾಗ್ರತೆ ಮೋಕ್ಷಾ ವಸ್ಥೆಗಳಲಿ
ಕೃತಿ ಪತಿಯು ವಿಶ್ವ ತ್ವೆಜಸ ಪ್ರಾಜ್ಞ ತುರ್ಯರೂಪಾದಿಂದ
ಮತಿ ಪ್ರೇರಕನಾಗಿ ಕಾದುಕೊಂಡು ಪೊರೆಯುವ ನೆಂದು ೧೦

ಸತ್ಯವತಿ ಸುತನು ಸತ್ಯ ಸಂಕಲ್ಪನೆಂದು
ಆತನೆ ನಿತ್ಯಾನಿತ್ಯ ಜಗದೀಶನಂತರ್ಯಾಮೀಯೆಂದು
ಮುಕ್ತಾ ಮುಕ್ತರ ನಾಥ ಮುಖ್ಯ ಬಿಂಬನು
ಚತುರಾನನಾದಿಗಳಿಗೆಲ್ಲಾ ಎಂದು ೧೧

ಅನಿಲ ಜೀವೋತ್ತಮ ಹರಿಯ ಪ್ರಥಮಾಂಗ
ಗುಣನಿಧಿ ಅನಾದಿ ಅಪರೋಕ್ಷ ಪ್ರಭುವು
ಅಣು ಮಹದ್ಘನ ರೂಪ ಚರಿತ ಭಾರತೀಶ
ವಾಣೀ ಪತಿಯ ಪದಾರ್ಹ ವಾತದೇವನು ಎಂದು ೧೨

ಹನುಮ ಭೀಮ ಮಧ್ವ ಮೂರಾವತಾರದ ದೇವ
ಅನುಪಮ ಬಲನಿಸ್ಸೀಮ ಪುರುಷತೇಜ
ತೃಣ ಮೊದಲಾದ ಸರ್ವಜೀವರಲ್ಲಿದ್ದು ಅವರ
ಗುಣಕರ್ಮಗಳುಣೀಸೀ ನಿಜಗತೀ
ಹರಿಯಾಜ್ಞೆಯಂತೀವನೆಂದೂ ೧೩

ದ್ವಾತ್ರಿಂಶಲ್ಲಕ್ಷಣ ಸಂಪನ್ನ ಗುರು ಮಧ್ವನೆಂದು
ಆತನೇಲೋಕಕ್ಕೆಲ್ಲ ಗುರವು ಎಂದು
ಈತ ಸಕಲಪೇಳಿದ ಮಾತಿಗೆ ಸರಿಯಿಲ್ಲವು ಎಂದು
ಪ್ರೀತಿಯಿಂದಲಿ ಭಜಿಪ ಭಕ್ತಗೇನೆ ಮುಕ್ತಿಯೆಂದು ೧೪

ಹರಿಯ ಮತವೆ ಹನುಮನ ಮತವು ಎಂದು
ಸಿರಿ, ವಿರಂಚಿ ಪವನ ವಾಣಿ ಭಾರತೀಯರಲ್ಲಿ
ಗರುಡ ಶೇಷ ಶಿವ ಶಕ್ರಾದಿಸರ್ವರೊಳಗೆ
ತಾರತಮ್ಯ ಪಂಚ ಭೇದವು ಸತ್ಯವೆಂದು ೧೫

ಭಾರತಿ ಪತಿಯದ್ವಾರವೆ ಹರಿಯು ಸ್ವೀಕರಿಪ ನೆಂದು
ಮುರಾರಿಯ ಒಲುಮೆಗೆ ಜ್ಞಾನಯುತಭಕ್ತಿಯೆ ಸಾಧನವೆಂದು
ಧರೆಯೊಳಗೆ ಹರಿನಾಮ ಸ್ಮರಣೆಗೆ ಸರಿಯಿಲ್ಲವು ಎಂದು
ಮಾರಮಣನ ಅನುಗ್ರಹವೆ ಮೋಕ್ಷದಾಯಕ ವೆಂದು ೧೬

ಅರಿಷಡ್ವರ್ಗಗಳಳಿಯುವುದೆ ವೈರಾಗ್ಯ ಮಾರ್ಗವೆಂದು
ಗುರುವಿನ ಕರುಣವೆ ಜ್ಞಾನಕ್ಕೆ ಕಾರಣವೆಂದು
ಸಾರಮಾರ್ಗಕ್ಕೆ ಸಾಧುಗಳ ಸಂಗವೆ ಮುಖ್ಯವೆಂದು
ನೀರಜಾಕ್ಷಗೆ ಸರಿ ಮಿಗಿಲು ಇಲ್ಲವೆಂದು ೧೭

ಜೀವ ಈಶಗೆ ಭೇದ ಈಶ ಜಡಕೆ ಭೇದ ವೆಂದು
ಜೀವ ಜೀವಕೆ ಭೇದ ಜಡ ಜಡಕೆ ಭೇದವೆಂದು
ಜೀವ ಜಡಕೆ ಭೇದ ಈ ಪರಿ ಪಂಚ ಭೇದವೆಂದು
ಸಾವಧಾನದಿ ತಿಳಿದು ಜಗತ್ಸತ್ಯವೆಂದು ಧೃಡದಿ ೧೮

ಸುರರೊಳುನರರೊಳು ಅಸುರರೊಳು ಎಲ್ಲೆಲ್ಲು
ತಾರತಮ್ಯವು ಅನಾದಿಯಿಂದಲಿ ಇರುತಿಹುದೆಂದು
ಸ್ವರೂಪಾನಂದಾವಿರ್ಭಾವವೆ ಮುಕ್ತಿಯೆಂದು
ಅರವಿಂದನಾಭಗೆ ಸರ್ವರು ಸದಾದಾಸರೆಂದು ೧೯

ಧನಕನಕ ವನಿತಾದಿಗಳೆಲ್ಲ ಹರಿಗೆ ಅರ್ಪಿತ ವೆಂದು
ಏನೇನು ಮಾಡುವುದೆಲ್ಲ ಶ್ರೀ ಕೃಷ್ಣನ ಸೇವೆಯೆಂದು
ದೀನ ಜನ ಮಂದಾರನಾಧೀನ ಸುಖದುಃಖಾಗಳೆಂದು
ಏನು ಬೇಡದೆ ಹರಿಯ ಸತತನೆನೆವೋದೆ ಸಾಧನ ವೆಂದು ೨೦

ನಾಕೇಶ ಜಯತೀರ್ಥ ವಾಯ್ವಂತರ್ಗತನಾದ
ಶ್ರೀಕೃಷ್ಣ ವಿಠಲಾನೆ ಮಮಸ್ವಾಮಿ ಸರ್ವಸ್ವವೆಂದು
ಸಕಲ ಕರ್ಮಗಳರ್ಪಿಸುತ ತ್ರಿಕರಣ ಶುದ್ಧಿಯಿಂದಲಿ
ಮಾಕಳತ್ರನ ಸತತ ಭಜಿಸುತ್ತಿರಬೇಕು ಎಂದು ೨೧

೨೪

ನನಗಾವ ಬಲವಿಲ್ಲ ನಿರುಪಮನೆ ಹೇಳೈಯ
ವನಜ ಸಂಭವ ಜನಕ ತವ ಚರಣ ವಲ್ಲದಲೆ ಪ

ಮಣಿದು ಬೇಡುವೆನೈಯ ಪ್ರಣತಾರ್ಥಿ ಹರಕೃಷ್ಣ
ಜನುಮಗಳ ಹರಿಸುತಲಿ ಭವಬಂಧ ಬಿಡಿಸೈಯ ಅ.ಪ

ನರರ ನಂಬಿದೆ ನೈಯ ಸಿರಿಯುರಿಗೆ ಬಾಯ್ಬಿಟ್ಟೆ
ಅರಿಯದಲೆ ತವ ಮಹಿಮೆ ಬರಿದೆ ಬಳಲಿದೆಭವದಿ
ಧೊರೆ ತನವು ಸವಿಯಹುದೆ ತವ ಸವಿಯ ಕಂಡವಗೆ
ಜರಿಯ ದಲೆ ಬಡವನನು ಕರೆದು ಪಾಲಿಸು ತಂದೆ ೧

ಹಣ ವನಿತೆ ಭೂ ವಿಷಯ ಉಂಡುಂಡು ಬೆಂಡಾದೆ
ತನುಜ ಕರಣಗಳಿನ್ನು ಶತ್ರುಗಳ ಸಮವಿಹವು
ಗುಣ, ಪೂರ್ಣ ಬಿಂಬನನು ನೆನೆಯ ಗೊಡದಲೆ
ನಿತ್ಯ ಇನಸುತನ ಪುರದೆಡೆಗೆ ಸೆಳೆಯುತಿಹವೋ ಸ್ವಾಮಿ ೨

ನರರಿಗಾಶ್ರಯ ಸುರರು ಸುರರಿಗಾಶ್ರಯ
ನೀರ ಮರುತಗಾಶ್ರಯ ಸಿರಿಯು ಸಿರಿರಮಣನೀನಿರಲು
ಚರಣ ಸೇವಕ ನೆನ್ನ ನರರಿಗೊಡ್ಡುವರೇನೊ
ಸರ್ವೇಶ ಅಕ್ಷರನೆ ಮೊರೆ ಹೊಕ್ಕೆ ಸಲಹೈಯ ೩

ದೇವ ದೇವರ ದೇವ ದೇವತ್ವ ನೀಡುವನೆ
ಕಾವ ಜೀವರ ನಿಚಯ ಸಾರ್ವಭೌಮನು ನೀನು
ನೀವಲಿದು ಪೊರೆಯದಿರೆ ಆಗುವುದೆ ಸುಖಮುಕ್ತಿ
ನಾವಿಕನು ನೀನೆಂದು ನಂಬಿದೆನು ಕೈಪಿಡಿಯೊ ೪

ಅಗಲಿ ಬದುಕಿರಲಾರೆ ಗೋಪ ಪುರುಷನೆ ನಿನ್ನ
ಸುಗಮ ಮಾಡಿಸು ಪಥವ ಸರ್ವಜ್ಞ ತವಪುರಕೆ
ನಗವೈರಿ ಜಯತೀರ್ಥ ವಾಯು ವಂತರದಿರ್ಪನಗೆ
ಮೊಗದ ಶ್ರೀಕಾಂತ ಕೃಷ್ಣವಿಠಲನೆ ಬೇಗ ೫

## ೨೫

ನಾ ನಿನ್ನ ಮರೆತರೆ ನೀ ಯನ್ನ ಮರೆವರೆ
ದೀನ ವತ್ಸಲ ರಂಗ ದಾನವಾಂತಕ ಕೃಷ್ಣ ಪ

ಜ್ಞಾನಗಮ್ಯನೆ ನಿನ್ನ ಧ್ಯಾನ ದೊಳಿಟ್ಟೆನ್ನ
ಮಾನದಿಂದಲಿ ಕಾಯೋ ಶ್ರೀನಿವಾಸ ಪ್ರಭುವೆ ಅ.ಪ.

ದಿನಕರನ ಜನರು ನೆನೆಯದೆ ಬಿಟ್ಟರೆ
ಜನರನ್ನು ಬೆಳಗದೆ ದಿನಕರ ಬಿಡುವನೆ
ಹೀನವಿಷಯದಿ ಮುಳುಗಿ ತೇಲುವ ಎನ್ನ
ನೀನಾಗಿ ಪೊರೆದರೆ ಘನತೆಯಲ್ಲವೆ ದೇವಾ ೧

ಪೆತ್ತ ಮಕ್ಕಳು ಬಲು ಕತ್ತೆಗಳಾದರು
ಹೆತ್ತ ತಾಯಿಯು ತಾನು ಎತ್ತದೆ ಬಿಡುವಳೆ
ಮತ್ತನಾನಾದರು ಉತ್ತಮೋತ್ತಮಸ್ವಾಮಿ
ವಾತ್ಸಲ್ಯತೋರಯ್ಯ ಹಸ್ತಿವರದ ಧೊರೆಯೇ ೨

ಗೋವತ್ಸಹಾಲಿಗೆ ಗೋವಿನಗುದ್ದಲು
ತವಕದಿ ಉಣಿಸದೆ ಗೋವು ಬಿಡುವುದೇ
ತವಪಾದ ಕಮಲದಿ ಅವಿನೀತನಾದರೆ
ಸುವಿವೇಕ ಜ್ಞಾನವ ಈಯದಿರುವರೇನೋ ೩

ಕರಿ ಧೃವ ಭಕ್ತರ ಪೊರೆಯಲಿಲ್ಲವೆ ನೀನು
ಘೋರಪಾಪಗಳ ತರಿದೆ ಅಜಾಮಿಳಗೇ

ವರವಿತ್ತು ವ್ಯಾಧಗೆ ವರಕವಿಯೆನಿಸಿದೇ
ಭಾರವೆ ನಾನಿನಗೆ ಕರುಣಾಸಾಗರ ರಂಗ ೪

ಜಯಮುನಿ ಅಂತರ ವಾಯುವಿನೊಳಗಿಪ್ಪ
ರಾಯ ಶ್ರೀಕೃಷ್ಣವಿಠಲನೆ ನಂಬಿದೆ
ಕಾಯವಚ ಮನದಿ ಜೀಯನೆ ಗತಿಯೆಂಬೆ
ನೋಯಿಸದೆ ಭವದಿ ದಯಮಾಡಿ ಸಲಹಯ್ಯ ೫

೨೬

ನಾರಾಯಣತೇ – ನಮೋ ನಮೋ
ತಾರಕ ಪದಯುಗ – ನಮೋ ನಮೋ ಪ

ಪಾರಾಶರತೇ ನಮೋ ನಮೋ ಗುಣ
ವಾರಿಧಿ ಸುಖಮಯ – ನಮೋ ನಮೋ ಅ.ಪ

ಇಂದಿರೆ ಮನುಕುಮುದೇಂದು ಪರಾವರ
ನಂದಗುಣಾರ್ಣವ ನಮೋ ನಮೋ
ಸಿಂಧುಶಯನ ಅರವಿಂದ ಸುನಾಭ
ಮಹೇಂದ್ರ ವಿನಾಂತನೆ ನಮೋ ನಮೋ ೧

ಸುಂದರ ವೀ ಜಗ _ ತಂದೆ ಮಹಾಬಲ
ಕುಂದು ವಿದೂರನೆ ನಮೋ ನಮೋ
ಬಂಧ ವಿಮೋಚಕ ಮಂದಜ ಭವಮನ
ಸ್ಪಂದನ ಕರುಣಿಯೆ ನಮೋ ನಮೋ ೨

ಸುಂದರ ತಮ ಅರವಿಂದ ಸುಲೋಚನ
ಕಂಧರ ಪಾಣಿಯ ನಮೋ ನಮೋ
ನಂದನ ಕಂದ ಮುಕುಂದ ಜನಾರ್ಧನ
ಛಂದಸು ವೇದ್ಯನೆ ನಮೋ ನಮೋ ೩

ನಾಶರಹಿತ ಸ್ವತಂತ್ರಗುಣಾತ್ಮಕ
ವಾಸುದೇವತೇ ನಮೋ ನಮೋ
ಭೇಶಕಾಂತಿ ಮುಕ್ತೇಶ ಪರಾಮೃತ
ವಿಶ್ವಜೂತಿ ಬಲ ನಮೋ ನಮೋ ೪

ಶೇಷಶಯನ ವಾರಾಸಿಗೇಹ
ಮಾಯೇಶ ಸನಾತನ ನಮೋನಮೋ
ಓಸು ಜಾಡಾಜಡ ರಾಸಿ ಬಿಂಬಗುಣ
ಭಾಸಕ ನಾಯಕ ನಮೋ ನಮೋ ೫

ದೇವ ದೇವ ಜಗ ಪಾವನ ಚರಿತ
ವಿಭಾವರಿ ಚರಹರ ನಮೋ ನಮೋ
ಜೀವರ ಜೀವ ವಿಭಾವ ಸುನಾಯಕ
ಭಾವುಕ ಜನಪ್ರಿಯ ನಮೋ ನಮೋ ೬

ಅಂಡಜವಾಹನ ಪುಂಡರೀಕನುತ
ಪಾಂಡುರಂಗತೇ ನಮೋ ನಮೋ
ತೊಂಡವತ್ಸಲಾಖಂಡ ವಿಜಯ
ಕೋದಂಡಪಾಣಿ ತೇ ನಮೋ ನಮೋ ೭

ವೆಂಕಟೇಶ ಭವ ಸಂಕಟ ನಾಶಕ
ಶಂಕರ ಮಹಿಮನೆ ನಮೋ ನಮೋ
ಸುಂಕ ಸುಲಿವ ಬಿರುದಾಂಕಿತ ಕುಟಿಲಾ
ಟಂಕರಹಿತ ತೇ ನಮೊ ನಮೋ ೮

ಶಿಷ್ಟವರದ ಪರಮೇಷ್ಠಿ ಜನಕ
"ಶ್ರೀ ಕೃಷ್ಣವಿಠಲ" ವಿಭು ನಮೋ ನಮೋ
ಅಷ್ಟಕರ್ತ ಶಿಪಿವಿಷ್ಟಸುನಾಮಕ
ಧಿಟ್ಟ ನೃಸಿಂಹನೆ ನಮೋ ನಮೋ ೯

## ೨೭

ನ್ಯಾಯ ವೇನೋ ಕೃಷ್ಣಯ್ಯ _ ನ್ಯಾಯವೇನೋ ಪ

ಜೀಯ ನಿನ್ನ ಸ್ಮರಣೆ ಕೊಡದೆ ಎರಡು ಭ್ರಷ್ಟ ಮಾಡಿಸೋದು ಅ.ಪ.

ಇತ್ತಲಿಲ್ಲ ಅತ್ತಲಿಲ್ಲ ಅರ್ಥಮಾನ ಹೋಯಿತಲ್ಲಾ
ಕತ್ತೆಯಂತೆ ಕಾಲ ಕಳೆಸಿ ಸುತ್ತಿ ಸುತ್ತಿ ಚರಿಸೋದು ೧

ಹೊಟ್ಟೆಬಟ್ಟೆಗಾಗಿ ಹೊಗಿ ಕೆಟ್ಟ ಜನರ ಸೇವೆ ಮಾಡಿ
ಸುಟ್ಟು ಸುಟ್ಟು ಹೋಯ್ತು ಕಾಯ ಭ್ರಷ್ಟನಾಗಿ ಮಾಡೋದೆನ್ನ ೨

ಮಾಯಪಾಶದಲ್ಲಿ ಹಾಕಿ ಹೇಯ ವಿಷಯ ಆಶೆಕೊಟ್ಟು
ನ್ಯಾಯ ಮಾರ್ಗ ತೋರದೇನೆ ನೋಯಿಸೋದು ಎನ್ನನೀನು ೩

ಮೋಸಮಾಡಿ ಪರರಗಂಟು ಆಶೆಯಿಂದ ಕೂಡಿಹಾಕಿ
ಘಾಸಿಭವದಲಿ ನೂಕಿ ಕ್ಲೇಶಪಡಿಸುವುದು ಎನ್ನ ೪

ಅಂದು ಇಂದು ಎಂದು ಹೇಳಿ ಮಂದನಾಗಿ ಕಾಲಕಳೆಸಿ
ಇಂದಿರೇಶ ನಿನ್ನ ಪಾದ ದ್ವಂದ್ವ ಧ್ಯಾನ ಮರೆಸೋದು ೫

ಮಧ್ವಮತದಲ್ಲಿ ಪುಟ್ಟಿ ಮಧ್ವಗ್ರಂಥ ಓದದೇನೆ
ಶುದ್ಧಮೂಢನಾಗಿ ತಿರುಗಿ ಗದ್ದನೆನಿಸುವುದು ಎನ್ನ ೬

ಇನ್ನು ಮುನ್ನು ನೀನೆ ಗತಿ ಎನ್ನ ಕೈ ಪಿಡಿಯೊ ಬೇಗ
ಘನ್ನ ನವನೀತಧರ ಚೆನ್ನ ಶ್ರೀ ತಾಂಡವ ಕೃಷ್ಣವಿಠಲ ೭

# ೨೮

ಪೊರೆಯದಿರುವರೇ _ ಶ್ರೀ ರಮಣಾ ಪ

ದುರಿತಗಜಕೆ ನೀ ಪಂಚಾನನಾ ಅ.ಪ.

ಸಿರಿಯ ಮದದಿ ನಾನರಿಯದೆ ಪೋದರೆ
ಗರುಡಗಮನ ನೀ ಮರೆತುಬಿಡುವರೇ
ಕರುಣಶರಧಿ ಸರಿ ಬಿರುದು ಪೊಳ್ಳಾಗದೇ
ಚರಣಪಿಡಿವೆ ಪೊರೆ ಮರುತನೊಡೆಯ ಹರಿ ೧

ಪಾತಕಿ ಎಂಬುವ ನೀತಿಯನುಡಿದೊಡೆ
ಪೂತರಮಾಡುವ ಖ್ಯಾತಿಯ ಬಿಡುವೆಯ
ನಾಥನೆ ನಂಬಿದೆ ಕಾತರ ಪಡುತಿಹೆ
ಪ್ರೀತಿಲಿ ಕಾಣಿಸು ಆರ್ತಿವಿದೂರ ೨

ನಡಿಯುವ ಚರಣವು ಎಡುವುದು ಸಹಜವೆ
ಮೃಡ ಭೃಗು ಭೀಷ್ಮರು ದುಡುಕಲಿಲ್ಲೆ ದೊರೆ
ಮಿಡಕಿ ನಡುಗುತಿಹೆ ನಡೆವುದು ಜಗಬಿಡೆ
ಕಡಲಶಯನ ಪಿಡಿ ಬಿಡದೆ ಕೊಡುತ ರತಿ ೩

ಸಿರಿವಿಧಿ ಶಿವನುತ ಸ್ವರತ ಸ್ವತಂತ್ರನೆ
ಶರಣರ ಪೊರೆಯುವ ವರಗುಣ ಭೂಷಣ
ಅರಿಯೆನುಪಾಯವ ಶರಣುಶರಣ್ಯೆಯ
ಪರಮಪುರುಷ ಭಗಸರಸದಿ ನಲಿನಲಿ ೪

ಸಾಕುವ ಬಿಂಬನೆ ನೂಕಿದೆ ಯಾತಕೆ
ಹಾಕುತ ಮಂಕನು ಏಕಾಯತನ
ನಾಕರೊಡೆಯ ಭವನೂಕುತ ಬೇಗನೆ
ಸ್ವೀಕರಿಸೆನ್ನನು ಶ್ರೀ ಕೃಷ್ಣವಿಠಲಾ ೫

## ೨೯

ಬಂದ-ಬಂದ _ ಇಂದಿರೇಶ ನಂದನಂದನಾ
ನಂದಪೂರ್ಣ ನಿಖಿಳ ಜನಕ ಕಂಧರಾಶ್ರಯಾ ಪ

ಬಂದ ಬಂದ ಭಜಕ ಬಂಧು
ಮಂದರಾದ್ರಿಧರ ಅರ-
ವಿಂದನಯನ ಸುಂದರಾಂಗ
ಸಿಂಧುಶಯನ ನಳಿನನಾಭ ಅ.ಪ.



ನೀಲಮೇಘ ಶ್ಯಾಮಸುಂದರಾತನಿಗೆ
ಮೇಲುಸಮರು ಇಲ್ಲವೆನಿಸಿದ
ಲೀಲೆಯಿಂದ ಜಗವ ಸೃಜಿಸಿ
ಪಾಲಿಸುತ್ತ ಮತ್ತೆ ಅಳಿಸಿ
ಆಲದೆಲೆಯಮೇಲೆ ಸಿರಿ
ಲೋಲನಾಗಿ ಮೆರೆವ ಕೃಷ್ಣ ೧

ಐದು ರೂಪದಿಂದ ಕ್ರೀಡಿಪಾ ಪ್ರಕೃತಿ
ಬೋಧ್ಯ ಸಿರಿಗುನಾಥ ನಾಯಕಾ
ಆದಿಮಧ್ಯ ಅಂತ್ಯ ಶೂನ್ಯ
ಮೋದಪೂರ್ಣ ಜ್ಞಾನಕಾಯ
ಮೋದ ಮುನಿಯ ಹೃದಯಸದನ
ಗೋಧರಾತಪತ್ರ ಶ್ರೀಪ ೨

ಆದಾನಾದಿ ಕರ್ತ ಬ್ರಹ್ಮನೂ ದಿವಿಜ
ಸಾಧುಸಂಘ ಸೇವೆ ಗೊಂಬನೂ
ವೇದವೇದ್ಯ ವೇದ ವಿನುತ
ವೇದ ಭಾಗಗೈದು ಮೊರೆದ
ಭೇದ ಭೇದರಹಿತ ಗಾತ್ರ
ಸಾಧು ಪ್ರಾಪ್ಯ ಬಾದರಾಯಣ ೩

ದಾಸಜನಕೆ ಮುಕ್ತಿನೀಡುವ ಮಹಿ–
ದಾಸಕಪಿಲ ಪೂರ್ಣ ಕಾಮನೂ
ದೋಷ ದೂರ ನಾಶರಹಿತ
ವಾಸುದೇವ ಕ್ಲೇಶವಿದೂರ
ಈಶವಿಧಿಗಳನ್ನು ಕುಣಿಪ
ಕೇಶವಾದ್ಯನಂತ ರೂಪ ೪

ಮೊತ್ತಜಗಕೆ ಸತ್ತೆನೀಡುವಾ ನಿಖಿಳ
ಸತ್ಯ ಜಗದ ಚೇಷ್ಟೆನಡೆಸುವಾ
ಮೊತ್ತಶಬ್ದ ಘೋಷವರ್ಣ
ಮತ್ತೆ ಪ್ರಣವ ಮಂತ್ರಗಣದಿ
ಸ್ತುತ್ಯನಾಗಿ ನಿಖಿಳ ಯಜ್ಞ
ಭೋಕ್ತನಾಥ ಅಂಗಭೂತ ೫

ಜಿಷ್ಣುಸೂತ ಕೃಷ್ಣೆಕಾಯ್ದವಾ ಸ್ವರತ
ವಿಷ್ಣು ಪುರುಷಸೂಕ್ತ ಸುಮೇಯಾ
ವಿಶ್ವಕರ್ತ ವಿಶ್ವಭೋಕ್ತ
ವಿಶ್ವರೂಪ ವಿಶ್ವಭಿನ್ನ
ವಿಶ್ವವ್ಯಾಪ್ತ ಶಶ್ವದೇಕ
ವಿಶ್ವ ತೈಜಸ ಪ್ರಾಜ್ಞತುರ್ಯ ೬

ಸತ್ಯಧರ್ಮಗಳನು ಕಾಯುವಾ ದುಷ್ಟ
ದೈತ್ಯತತಿಯ ದಮನಗೈಯ್ಯುವಾ
ಮತ್ಸ್ಯಕೂರ್ಮ ಕೋಲ ಚರಿತ
ಭೃತ್ಯಭಾಗ್ಯ ನಾರಸಿಂಹ
ಸತ್ಯಶೀಲ ಬಲಿಯವರದ
ಕ್ಷಿತಿಪದಮನ ಕ್ಷಾತ್ರವೈರಿ ಪರಶುಧಾರಿ ೭

ಜೀವಜೀವ ವಿಶ್ವ ಬಿಂಬನು ರಾ
ಜೀವಪೀಠನನ್ನು ಪಡೆದನೂ

ರಾವಣಾರಿ ಕೃಷ್ಣ ಬುದ್ಧ
ಭಾವಿಕಲ್ಕಿ ನಿತ್ಯಮಹಿಮ
ಭಾವಜಾರಿ ಪ್ರೀಯ ಸಖನು ೮

ಹಯಗ್ರೀವ ದತ್ತ ಋಷಭನೂ ಅಪ್ರ-
ಮೇಯ ಹಂಸ ಶಿಂಶುಮಾರನು
ಜಯಮುನೀಂದ್ರ ವಾಯುಹೃಸ್ಥ
ಜಯೆಯ ರಮಣ ಕೃಷ್ಣವಿಠಲ
ದಯದಿ ಪೊರೆಯಲೆಮ್ಮನೀಗ
ಜಯವು ಎನುತ ನಲಿದು ನಲಿದು ೯

## ೩೦

ಬಂದ ಶ್ರೀ ಹರಿ ಬಂದ ಪ

ಬಂದ ಬಂದ ಮುಚುಕುಂದ ಪರದ ಅರ-
ವಿಂದನಯನ ಗೋವಿಂದ ಪರಾತ್ಪರ
ಕಂದನೆನ್ನ ಮನ ಮಂದಿರಕೀಗಲೆ
ನಂದವ ನೀಡುತ ಇಂದಿರೆಸಹಿತದಿ ಅ.ಪ.

ನೀರೊಳಗಾಡುವ ವೀರನು ಬಂದ ಭಾರಿಗಿರಿಯನು
ಪೊತ್ತವ ಬಂದ
ನಾರಿಯವೇಷದಮೋಹಕ ಬಂದ ವಾರಿಜೆಸಿರಿವರ
ಅಜಿತನುಬಂದ
ಚಾರುವರಾಹನು ಭೂಸಹಬಂದ ಪೋರನ ಸಲಹಿದ
ಘೋರನು ಬಂದ
ಮೂರಡಿ ಯಾಚಕ ವಾಮನ ಬಂದ ಹಾರಿಸಿ ಕ್ಷಿತಿಪರ
ಭಾರ್ಗವ ಬಂದ
ತಾರಕನಾಮದ ರಾಮನುಬಂದ
ಕೌರವವಂಶಕುಠಾರನು ಬಂದ

ಚಾರುದಿಗಂಬರ ಬುದ್ಧನುಬಂದ ಏರುತ ಕುದುರೆಯ
ಕಲ್ಕಿಯು ಬಂದ ೧

ಬಾದರಾಯಣ ಮಹಿದಾಸನುಬಂದ ವೇದಗಳ
ಉಸುರಲು ಹಯಮುಖಬಂದ
ಬೋಧಿಸಿ ಸಾಂಖ್ಯವ ಕಪಿಲನು ಬಂದ ಸಿದ್ಧಿಗಳೀಯಲು
ದತ್ತನುಬಂದ
ಸಾಧುತಪೋನಿಧಿ ಋಷಭನು ಬಂದ ಮೋದವ
ನೀಡಲು ಯಜ್ಞನುಬಂದ
ವೇಧನ ಗುರುತಾಹಂಸನು ಬಂದ
ಸಾಧುಹರಿನಾರಾಯಣ ಬಂದ
ಭೇದಿಸಲಘ ಬಡಬಾನಳ ಬಂದ ಮೋದಮಯ
ಶಿಂಶುಮಾರನು ಬಂದ
ಗೋಧರ ಕೃಷ್ಣನು ತಾಪಸಬಂದ ಶೋಷಿಸಿಭವ
ಧನ್ವಂತ್ರಿಯು ಬಂದ ೨

ವಾಸುದೇವ ಜಗಜೀವವಿಲಕ್ಷಣ ನಾಶರಹಿತ
ಶ್ರೀ ವಿಷ್ಣುವು ಬಂದ
ದೋಷದೂರ ಪರಿಪೂರ್ಣ ಗುಣಾರ್ಣವ ಕ್ಲೇಶಕಳೆದು
ಉಲ್ಲಾಸದಿ ಬಂದ
ಶೇಷಶಯನ ಭವಭಂದವಿಮೋಚಕ ದಾಸಜನರ
ಸಂತೋಷನು ಬಂದ
ವಿಶ್ವ ತೈಜಸ ಪ್ರಾಜ್ಞತುರ್ಯನು ಭಾಸವ ಬೀರುತ
ಕರುಣದಿ ಬಂದ
ಶ್ವಾಸವಿನುತ ಪರಮೇಶ ಸನಾತನ ಶಾಶ್ವತಸುಖಿ
ಮುಕ್ತೇಶನು ಬಂದ
ಕೇಶವಾದಿ ಚತುರ್ವಿಂಶತಿ ರೂಪ ವಿಲಾಸದಿ
ಪರಾದ್ಯನಂತನು ಬಂದ ೩

ಏಕಾನೇಕಸುರೂಪ ವಿನಾಯಕ ಮಾಕಳತ್ರ
ಜಗನ್ಮೋಹನ ಬಂದ
ನಾಕಪತಿ ಪುರುಹೂತ ವಿನುತ ಸುರನೀಕಪೋಷ
ಸಕಲಾರ್ತಿಹರ ತಾ ಬಂದ
ಶೋಕ ದೂರ ನಿಸ್ಸೀಮನು ಬಂದ ನೋಕನೀಯ
ವೈರಾಜ್ಯನು ಬಂದ ಶೃತಿ–
ನೀಕ ಸುವಂದಿತನಿರುಪಮ ಬಂದ ವಾಕುಮನಕೆ
ಸಾಕಲ್ಯಸಿಗದ ಪುಣ್ಯ–
ಶ್ಲೋಕ ಪರಾವರಸ್ಥಾನನು ಬಂದ ನಾಲ್ಕುನಾಶ
ವಿವರ್ಜಿತ ಭಗಲೋಕೈಕ ವಂದ್ಯ
ನಿಜಭಕ್ತಗಣ ಜಯಪರಾಕುನುಡಿಯುತಿರೆ ಮೆಲ್ಲ ಮೆಲ್ಲಗೆ ೪

ಸರ್ವನಿಯಾಮಕ ಸರ್ವಸುನಾಮಕ
ಸರ್ವಸಾಕ್ಷಿಗಭೀರ ಪರಾಕು
ಸರ್ವಸುವ್ಯಾಪ್ತನೆ ಸರ್ವಸುಭೋಕ್ತನೆ ಸರ್ವತಂತ್ರ
ಸ್ವತಂತ್ರನೆ ಪರಾಕು
ಸರ್ವರಪಾಲಿಪ ಸರ್ವರ ರಕ್ಷಿಪ ಸರ್ವಚರಾಚರಭಿನ್ನ ಪರಾಕು
ಸರ್ವರಿಗುತ್ತಮ ಸರ್ವರಸರ್ವನೆ ಸರ್ವಶಬ್ದ
ಪ್ರತಿಪಾದ್ಯಪರಾರು
ಸರ್ವಕಾಲದಲಿ ಸರ್ವದೇಶದೊಳು ಸರ್ವದೆಶೆಯೊಳು
ಸಮನೆ ಪರಾಕು
ಶರ್ವವಂದ್ಯ ಜಗದೇಕನಾಥ ನಿಜ ಸಾರ್ವಭೌಮ
ಸಚ್ಚಿದಾನಂದ ಪರಾಕು ೫

ನಿತ್ಯಾನಿತ್ಯಜಗಜ್ಜನಕ ಸರ್ವೋತ್ತಮ ಸತ್ಯಸಂಕಲ್ಪ ಪರಾಕು
ನಿತ್ಯಾಹೇಯ ಪರತಃಪರಾತರ ಸತ್ತಾದಿ
ನಿಖಿಳಪ್ರದಾಯಕ ಪರಾಕು
ಭೃತ್ಯಾನುಗ್ರಹ ಕಾರಕಶೀಲ ಸದಾಪ್ತತಮ ವಿಶ್ವಾತ್ಮನೆಪರಾಕು
ನಿತ್ಯೈಶ್ವರ್ಯ ಕೀರ್ತ್ಯಾತ್ಮಕ ಸರ್ವಾತತ ಬಲವಿಖ್ಯಾತಪರಾಕು

ನೀತ ಜ್ಞಾನಾನಂದ ಪರಿಪೂರ್ಣನಿತ್ಯತೃಪ್ತ ಮಹಾಂತ ಪರಾಕು
ಮಾತರಿಶ್ವ ಸರ್ವಾಂತರ್ಯಾಮಿ ನಿರ್ಲಿಪ್ತ ಸರ್ವಸುಸಾರ
ಭೋಕ್ತ ಪರಾಕು ೬

ಜಯಜಯದೇವವರೇಣ್ಯ ಪರಾಕು ಜಯಜಯ ಪಂಚ
ರೂಪಾತ್ಮ ಪರಾಕು
ಜಯಜಯವ್ಯಾಹೃತಿ ತತಿ ನುತವಂದ್ಯ ಜಯಜಯ
ಪುರುಷ ಸೂಕ್ತ ಸುಗೇಯ
ಜಯಜಯ ಮುನಿಗಣ ಧ್ಯಾತಪರಾಕು ಜಯಜಯ
ಪ್ರಖ್ಯಾತ ಮಹಾಮಹಿಮ ಪರಾಕು
ಜಯಜಯ ಆತ್ಮಾರಾಮಪರಾಕು ಜಯಜಯ ಸಾಸಿರ
ನಾಮಕ ಪರಾಕು
ಜಯಜಯ ಅಚ್ಯುತಾನಂತ ಸುನಾಮ ಜಯಜಯ
ಓಂಕಾರಾಧಿಪ ಪರಾಕು
ಜಯಜಯ ಅನಾದಿಸರ್ವಜ್ಞ ವಿಭೂತಿ ಜಯಜಯ
ಇಂದಿರಾರಾಧ್ಯ ಮಹೇಶ ಪರಾಕು ೭

ವೈಕುಂಠಾದಿ ತ್ರಯಧಾಮ ನಿಷ್ಕುಟಿಲ ಭಕ್ತರಲಿ
ಪ್ರೇಮ ಚೊಕ್ಕ ಸೃಷ್ಟಿಗೈವನಿತ್ಯಸುನೇಮ
ದಕ್ಕನು ನಿಜ ಖಳರಿಗೆ ಭೀಮ ತಕ್ಕಾಫಲಂಗಳ ನೀಡುವ
ಕರುಣಾಮಣಿ ಶ್ರೀಕಾಮ
ಅಕ್ಕರೆಯಲಿ ಜಗಕಾವ ನಿಸ್ಸೀಮ ಮುಕ್ಕಣ್ಣ ವಿಧಿಸಿರಿ ಸಾರ್ವಭೌಮ
ಉಕ್ಕದ ತಗ್ಗದ ವಿಭು ನಿಷ್ಕಾಮ ಮುಕ್ತಾಮುಕ್ತ
ವಿನುತ ಗುಣಲಲಾಮ
ಮುಕ್ತಿದ ಶ್ರೀಮದನಂತ ಸುನಾಮ ಭಕ್ತರ ಭಿಡೆಸಲಿಸುವ
ಮೇಘಶ್ಯಾಮ ೮

ನಂದತೀರ್ಥ ಮುನಿಮಾನಸ ಚಂದಿರ ಇಂದೀವರನಿಭ
ಸುಂದರ ಬಂದ

ಹಿಂದೆ ಮುಂದೆ ಎಂದೆಂದಿಗು ನಿಜಸುಖದಿಂದಲೆ
ಸೃಷ್ಟಿಸ್ಥಿತಿಲಯಗೈವ ಮು-
ಕುಂದ ಶೃತಿ ಪರಾಕಾಷ್ಠಾನುಬಂದ । ವಂದಿಪ ಜನರಘ
ವೃಂದಕಳೆದು ನಿಜ-
ನಂದವ ನೀಡುವ ಭೂತಿದ ವಿಭುವರ ಪರಮಾನಂದ
ಸುಧಾರ್ಣವ ಬೃಹತೀನಾಮಗ
ಮಂದಸ್ಮಿತ ವದನವ ತೊರುವ ಈತನು ಸ್ಯಂದನವೇರಿಹ
ಜಯಮುನಿಹೃದಯಗ ಮಧ್ವರಮಾವರ ಶ್ರೀಕೃಷ್ಣವಿಠಲನು
ಮಂದಜ ಭವ ಪರಿವಾರದ ಕೂಡಿಯೆ ಬಂದಾ ೯

## ೩೧

ಬಲ್ಲೆ ಬಲ್ಲೆನು ಕೃಷ್ಣ ನಿನ್ನ ಮಹಿಮೇ ಪ

ಗುಲ್ಲು ಮಾಡದೆ ಬೇಗ ನಿಲ್ಲೈಯ ಮನದಲಿ ಅ.ಪ

ಸಿರಿಕಾಂತ ನೀನಾಗಿ ತಿರುಪೆ ಬೇಡಿದೆ ಯಾಕೆ
ಪರಮ ಪುರುಷನು ಎನಿಸಿ ತುರುವ ಕಾಯ್ದೇಕೆ
ಪರಿವಾರ ಸುರರಿರಲು ಕರಡಿಕಪಿಗಳ ಸೈನ್ಯ
ನೆರವು ಯಾತಕೆ ನಿನಗೆ ಚರಿತೆ ಸೋಜಿಗವಯ್ಯಾ ೧

ಅಷ್ಟಕರ್ತನಿಗೇಕೆ ಸಂತತವು ಜಪತಪವು
ಪಟ್ಟ ಮಹಿಷಿಯರಿರಲು ಕುಬ್ಜೆಕೂಡಿದೆ ಯಾಕೆ
ಉಟ್ಟು ಸೀರೆಯ ಖಳರ ವಂಚಿಸಿದ ಬಹು ಶೂರ
ನಿಷ್ಠೆಯಿಂದಲಿ ಬಲಿಯ ಬಾಗಿಲನು ಕಾಯುವನೆ ೨

ಬೆಣ್ಣೆ ಕಳ್ಳರ ಗುರುವೆ ಹೆಣ್ಣು ಕದ್ದವ ನೀನು
ಮಣ್ಣು ಮಾಡಿದೆ ಕುಲವ ಯೆಂಜಲುಂಡವ ದೊರೆಯೆ
ಅಣ್ಣ ತಮ್ಮಂದಿರಲಿ ಕಲಹವನು ವಡ್ಡುತಲಿ
ನುಣ್ಣ ಗೆಲ್ಲರ ಮಾಡಿ ನಿಷ್ಕಪಟಿಯೆನಿಸಿದೆಯೊ ೩

ಅನ್ಯರಿಗೆ ಉಪಕಾರಿ ಅನನ್ಯರಾ ಶತ್ರುವು
ಬೆನ್ನು ಬಿದ್ದವಗೆ ಭವ ಭ್ರಷ್ಟತ್ವ ನೀಡುವೆಯೊ
ನಿನ್ನಾಳ ನಿಖಿಳರಿಗು ತೋರ್ಗೊಡದ ಬಹುಗೂಢ
ಕಣ್ಣು ಕೈ ಕಾಲೆಲ್ಲ ಸಮವೇನೆ ನಿನಗಯ್ಯ ೪

ದೊಡ್ಡ ದೇವನು ಎನಿಸಿ ಗುಡ್ಡವೇತಕೆ ಹೊಕ್ಕೆ
ಗಿಡ್ಡರೂಪವ ತೋರಿ ದೊಡ್ಡದಾಗುತ ಎಂದು
ಅಡ್ಡಿಯಿಲ್ಲದೆ ಬಲಿಯ ಹೆಡ್ಡನೆನಿಸಲು ಬಹುದೆ
ಗುಡ್ಡೆಯಿಲ್ಲದೆ ಚರಿಪ ವಡಲು ಬಗೆದಾ ಘೋರ ೫

ಪೊಡವಿಗೊಡೆಯನು ಎನಿಸಿ ಹಡೆದ ಮಾತೆಯ ಕಡಿದೆ
ಅಡವಿ ಬೇರನು ತಿಂದೆ ಕಡಲೊಳಗೆ ಸಂಚರಿಪೆ
ಮಡದಿಯನು ಕಳಕೊಂಡು ಹುಡುಕುತಲಿ ತಿರುಗಿದೆಯೋ
ಸಡಗರದಿ ಹಯವೇರಿ ಕೆಡುಕು ಕಡಿಯುವೆಯಂತೆ ೬

ನಾಮಕುಲಗೋತ್ರಗಳ ನೆಲೆಯಕಂಡವರಿಲ್ಲ
ಸಾಮಸರಿ ನಿರ್ಗುಣವು ಪೂರ್ಣಗುಣ ನೀನಂತೆ
ವಾಮನೀನಾವರಿಸಿ ವಳ ಹೊರಗೆ ಲೋಕಗಳ
ನೇಮದಿಂ ಕಾಯುವನು ಪುಡುಕಿದರು ಸಿಗೆಯೇಕೇ ೭

ಮಂಗಳಾಂಗನು ಅಂತೆ ಲಿಂಗವರ್ಜಿತನಂತೆ
ಶೃಂಗಾರರಸನಂತೆ ಭಂಗರಹಿತನು ಅಂತೆ
ಲಿಂಗವೆರಡೂ ಅಂತೆ ಸಿಸ್ಸಂಗ ನೀನಾಗಿ
ಅಂಗದಲಿ ಅಂಗನೆಯ ಧರಿಸಿ ಮೆರೆಯುವೆಯೇಕೆ ೮

ವೇದ ಬೋಧೆಯನಿತ್ತಗಾಧ ವರ್ಜಿತ ಮಹಿಮ
ಮೋದ ಮಯ ನೀ ನಿನ್ನ ನಾದಿನಿಯ ಬೆರೆದೇಕೆ
ಸಾಧುಗುಣಪೂರ್ಣ ಭಾನುವನು ಮರೆ ಮಾಡಿ
ಮೈದುನನ ಸಲಹಿದ್ದು ಬಹುನ್ಯಾಯ ವೇನ್ಯಯ್ಯ ೯

ಹಾಲು ಕೊಟ್ಟವಳನ್ನು ಲೀಲೆಯಿಂದಲಿ ಕೊಂದೆ
ಶೀಲಸತಿಯಳ ಬೆರದು ವ್ರತವಳಿದು ಪರವಿತ್ತೆ
ಕಾಲನಾಮಕನಾಗಿ ಜಗವೆಲ್ಲ ನುಂಗುವನೆ
ಹೇಳುವರು ಕೇಳುವರು ನಿನಗಿಲ್ಲವೇನೈಯ್ಯಾ ೧೦

ಏನೆಂದು ವರ್ಣಿಸಲಿ ನಿನ್ನಯ ವಗತನವ
ಮಾನ್ಯ ಸತಿ ಚಂಚಲೆಯು ಮಗಳ ಮಾರ್ಗವುಡೊಂಕು
ಮಾನಾಭಿಮಾನಗಳ ಬಿಟ್ಟವರೆ ಪರಿವಾರ
ನೀನಿರದತಾವಿಲ್ಲ ನಿನಗಿಲ್ಲ ತುದಿಮೊದಲು ೧೧




ಸರ್ವಜ್ಞನಾದವಗೆ ಸಾಂದೀಪ ಗುರುವೇಕೆ
ಸರ್ವ ನಾಮವು ಕೂಡೆ ನಾಮಕರಣವು ಏಕೆ
ಸರ್ವಸ್ವಾಮಿಯು ಎನಿಸಿ ಸಾರಥಿಯು ಆದೇಕೆ
ಸರ್ವ ತೋಮುಖ ನೀನು ಜಗವಿಲಕ್ಷಣ ನೈಯ್ಯಾ ೧೨

ಒಬ್ಬರಲಿ ನೀಜನಿಸಿ ಮತ್ತೊಬ್ಬರಲಿ ನೀ ಬೆಳೆದೆ
ತಬ್ಬಲಿಯೆ ವಾಸ್ತವದಿ ಉಬ್ಬಿಳಿತವರ್ಜಿತವೆ
ಅಬ್ಬಬ್ಬ ಬ್ರಹ್ಮಾಂಡ ಹಬ್ಬಿ ನಡೆಸುವ ಧೀರ
ಕೊಬ್ಬಿದಾ ಖಳಗಂಜಿ ಮಧುರೆಯನು ತೊರೆದೇಕೊ ೧೩

ಮೇದಿನಿಗೆ ನೀ ಸ್ವಾಮಿ ಮದುವಾದೆ ಮಗಳನ್ನು
ಬೈದವಗೆ ಗತಿಯಿತ್ತೆ ಭಕ್ತರಿಗೆ ಕೂಳಿಲ್ಲ
ಮೋದ ಮಯ ನುಂಡುಣಿಸಿ ನಿರ್ಲೇಪನೀ ನಿರ್ಪೆ
ವಿದುರ ನೌತಣ ಕೊಂಡೆ ಕನ್ಯೆಯಲಿ ನೀ ಬಂದೆ ೧೪

ಜಯ ಮುನಿ ಹೃದಯದಲಿ ವಾಯುವಿನಂತರ ದಿರ್ಪ
ಶ್ರೀಯರಸ ತಾಂಡವ ಕೃಷ್ಣವಿಠಲನೆ ನೀನು
ಮಾಯಾವಿ ತೋರಗೊಡೆ ನಿಜಮರ್ಮಖಳಜನಕೆ
ಜೀಯನೆ ಮೊರೆಹೊಕ್ಕೆ ನಿನ್ನಿರವ ತೋರೈಯ್ಯಾ ೧೫

## ೩೨

ಬಾರೊ ಕೃಷ್ಣ ಬಾರೊ ಕೃಷ್ಣ ಬಾರೊ ಕೃಷ್ಣ ಮನದಸದನಕೆ ಪ

ತೊರೊ ಕೃಷ್ಣ ತೊರೊಕೃಷ್ಣ ತೊರೊಕೃಷ್ಣ ಚರಣ ಬಡವಗೆ ಅ

ಶಿರವ ನಿಡುವೆ ಚರಣದಲ್ಲಿದುರಿತಹರಣ ಕರುಣಭರಿತನೆ
ಸಿರಿಯ ರಮಣ ನೀರಜಸುಗುಣಸುರರ
ಪೊರೆವ ಧರಣಿ ಧರಿಪನೆ ೧

ಸಿರಿಯಮದದಿ ಮರೆತೆ ನಿನ್ನ ಕರೆದು ಪೊರೆಯೊ ಶರಣರಕ್ಷಕಾ
ಅರಿಯೆ ಮಹಿಮೆ ತರಳನಾನು ತೊರೆಯೆ
ಅಳಿವೆ ಕ್ಷೇಮ ಧಾಮನೆ ೨

ವೇದವಿನುತ ಮೋದಭರಿತ ಸಾಧುಚರಿತ ಆದಿ ಕಾರಣಾ
ಮಂದಮತಿಯು ಕುಂದನಳಿದು ತಂದೆ
ಕಾಯೊ ಬಂಧನೀಡ್ವನೇ ೩

ನೀರಜಾಕ್ಷ ವಾರಿನಿಲಯ ಸೂರಿಗಮ್ಯ ಪೂರ್ಣಧಾಮನೆ
ಸರ್ವನಾಮ ಸರ್ವಕರ್ಮ ಸರ್ವಶ್ರೇಷ್ಟಸರ್ವ ಪ್ರೇರಕಾ ೪

ಇಂದಿರೇಶ ನಂದಪೂರ್ಣ ಸುಂದರಾಂಗ ಬಂಧಮೋಚಕ
ಕುಂದುರಹಿತ ವಂದನಾರ್ಹ ಬಿಂದು ಬಿಂಬ ಕಂಧರಾಶ್ರಯ ೫

ಭುವನ ವಿತತ ಭುವನಮೂಲ ಭುವನ ಪಾಲ ಭುವನನಾಶಕ
ಭುವನ ಭಿನ್ನ ಸ್ತವನ ಪ್ರೀಯ ಕವನವರಿಯೊ ಕವಿಬಿರೀಡಿತ
ಮುಕುತರೊಡೆಯ ಮುಕುತಿದಾತ ಭಕುತ ಪ್ರೀಯ
ಭಕುತಿದಾಯಕ
ಶಕುತ "ಶ್ರೀಕೃಷ್ಣವಿಠಲ" ಯುಕುತಿ ಗೊಲಿಯ ಲಕುಮಿನಾಯಕ

೩೩

ಬಾರೋ ಶ್ರೀ ಕೃಷ್ಣವಿಠಲ ಮನ್ಮನ ದೈವ ಪ

ಮೆಲ್ಲಮೆಲ್ಲನೆ ಪದ ಪಲ್ಲವ ವಿಡುತಲಿ ಗುಲ್ಲು ಮಾಡದೆ ಭವ
ದಲ್ಲಣಗೊಳಿಸು ವಲ್ಲಭ ಸಿರಿಸಹ ನಿಲ್ಲದೆ ಮನೆಯೊಳು
ಬಲ್ಲಿದರಿಗೆ ಬಹು ಬಲ್ಲಿದನೆನಿಸಿಹ ಅ.ಪ.

ನೆಗೆಯುವ ನಿಲ್ಲುತೆ ಚಿಗರಿಯ ತೆರೆದನು
ರಾಗದಿನೋಡುತ ಬಗೆ ಬಗೆ ಹರ್ಷದ
ನಗೆಮೊಗಹಾಸದಿ ಬಿಗಿಯುತ ಮನ
ನಿಗಮಾಗಮ ವಂದಿತ ಅಗಣಿತ ಗುಣನಿಧಿ ೧

ಸಾಗರನಳಿಯನೆ ಸಾಗರಶಯನನೆ
ಯಾಗ ಸುಭೋಕ್ತನೆ ಯೊಗಿಗಳರಸನೆ
ಬಾಗುವೆ ಚರಣದಿ ಸಾಗುತ ಮನ ಬಡ ಬಡ
ನೀಗಿಸಿ ಮಲಮನದಾಗಸಗೀಗಲೆ ೨

ಕುಣಿಸುತ ಹುಬ್ಬನು ಉಣಿಸುತ ಭಕ್ತಿಯ
ತನುಮನವೆಲ್ಲವ ಮಿನುಗಿಸಿ ಜ್ಞಾನವ
ಧಣಧಣ ತಾಳಕೆ ಅಭಿನಯಸಹಿತದಿ
ಕುಣಿಯುತ ಕುಣಿಸುತ ದಣಿಸದೆ ಕರುಣದಿ ೩

ಕರ್ಜಿಸಿ ರಾಮದ ಕಜ್ಜಿಯಮನದಿಂ
ಮಜ್ಜನಗೈಸುತ ಭಕ್ತಿಯಕಡಲಲಿ
ಗೆಜ್ಜೆಯಕಟ್ಟಿಸಿ ಹೆಜ್ಜೆಹೆಜ್ಜೆಗೆ ಪೂ–
ರ್ವಾರ್ಜಿತವೆಲ್ಲವ ಭರ್ಜನೆ ಗೈಸಲು ೪

ಇಂದಿರೆಯರಸನೆ ಚಂದ್ರನ ಹಳಿವನೆ
ಛಂದಸುವೇದ್ಯನೆ ಬಂಧ ಸುಮೋಚಕ
ಬಂಧುವೆ ಸರ್ವರ ಮಂದಜಭವಪಿತ
ತಂದೆಯೆ ವಿಶ್ವದ ನಂದವ ನೀಡಲು ೫

ವೇದವ ತಂದವ ವೇದನ ಪೊರೆದವ
ಭೂಧರ ಪೊತ್ತವ ಮಾಧವನಾದವ
ಮೋದವ ತಂದವ ಖೇದವ ತರಿದವ
ಮೇದಿನಿ ಪೊರೆದವ ಭೇದಿಸಿ ಬಂದವ ೬

ಮೇದಿನಿ ಅಳೆದವ ಮೇದಿನಿ ಇತ್ತವ
ಮೇದಿನಿಸುತೆಯಳ ಮೋದದಲಾಳ್ದವ
ಮೇದಿನಿಸುತಹರ ವೇದವ ಕಾಯ್ದವ
ಭೇದಿಸಿ ಕಲಿಗಣ ಹಾದಿಯ ತೊರುವ ೭

ನಂದನಂದ ಅರವಿಂದ ನಯನ ಬಹು
ಸುಂದರತಮಶ್ರೀ ಮಂದಿರ ಗೋಕುಲ
ಚಂದಿರ ಶುಭಗುಣಸಾಂದ್ರ ಮಹೋಜಸ
ಇಂದ್ರನ ಹಳಿದ ಮಹೇಂದ್ರ ಪರಾತ್ಪರ ೮

ಗೋಪಿಕಂದ ಬಹು ಗೋಪಿಕಾಮಸ್ತ್ರೀ
ರೂಪಧಾರಿ ನಗಚಾಪವರದ ಶಿವ
ಚಾಪ ಭಂಗ ಭವತಾಪ ಹರಣ ನಿ–
ರ್ಲೇಪ ದುಃಖ ಸುಖಲಾಪ ಚರಿತ ಭಗ ೯

ವಾಸುದೇವ ಸಂತೋಷದಾತ ಗೋಕೇಶವೇದ್ಯ
ವಾಗೀಶ ಜನಕ ನಿಜದಾಸಪೋಷ ಖಳ–
ನಾಶ ಶಕ್ತ ರವಿಭಾಸ ದಾತ ಮಹಿ–
ದಾಸಪೂರ್ಣವಿಭು ೧೦

ಕಂಸ ವೈರಿ ಕುರುವಂಶ ಧ್ವಂಸ ನಿಜ
ಹಂಸರೂಪ ಯದುವಂಶ ಚಂದ್ರ ನೀ-
ಲಾಂಶುಧಾಮ ಗರುಡಂಸಗಮನ ಭವ
ಹಿಂಸೆ ದಮನ ದೇವಾಂಶಗಣಪೋಷ ೧೧

ತುಂಬಿರೆಜಯಜಯ ದುಂಧುಭಿನಾದವು
ಅಂಬರಸುರಗಣ ವರ್ಷಿಸೆಕುಸುಮವ
ಸಂಭ್ರಮದಾರತಿ ಎತ್ತಲ್ ಸ್ತ್ರೀಗಣ
ಕಂಬು ಚಕ್ರಾಂಕಿತ ಪಾಣಿಯೆಸರಸರ ೧೨

ಮಂಗಳಮೂರ್ತಿಯೆ ಮಂಗಲ ದಾತನೆ
ಅಂಗಜರಿಪುಗಳ ಭಂಗವ ಹರಿಸುತ
ತಿಂಗಳು ಬೆಳಕಿನ ತುಂಗ ಸುರೂಪವ
ಕಂಗಳು ಮನಸಿನ ಸಂಗದಿ ತೋರುತ ೧೩

ಸಾಸಿರ ಶಿರಮುಖ ಸಾಸಿರ ನೇತ್ರನೆ
ಸಾಸಿರ ಬಾಹುವೆ ಸಾಸಿರನಾಮಕ
ಸಾಸಿರಕೀರ್ತಿನಿರ್ದೋಷ ಸುಖಪೂರ್ಣ
ಶ್ವಾಸವಿನುತ ವಿಶ್ವಾಸವ ಬೀರುತ ೧೪

ಜಯಮುನಿ ಹೃದಯಗ ವಾಯು ವಿನಾಯಕ
ಜೀಯ ಶ್ರೀ ಕೃಷ್ಣವಿಠಲ ಮಹಾಂತನೆ
ಪ್ರೇಮದ ಮನವಳಿದ ಹೇಯದು ನಿನ್ನಯ
ಧೇಯವೆ ನಡೆಸುತ ಶ್ರೀ ಯವ ನೀಡಲು ೧೫

## ೩೪

ಬಿದ್ದೆ ನಿಮ್ಮಯ ಪಾದದಲ್ಲಿ ನಾ ಪ

ಮಧ್ವರಾಯರ ಮನದಲ್ಲಿ ಇದ್ದು ವಲಿವ ವೇದವ್ಯಾಸ ಅ.ಪ.

ವೇದ ಓದದ ಶುದ್ಧ ಕಳ್ಳನಾ ಮೆದ್ದು ಮೆಲ್ಲುತ ವೃದ್ಧನಾದೆ ಭಲ್
ಗದ್ದ ದಾಸಗೆ ಕರುಣದಿ ತೋರಿ ಉದ್ಧರಿಸುವ ಬಗೆ ಬಲ್ಲೀ ೧

ಅನ್ಯದೇವರ ನಾ ನೊಲ್ಲೆ ನಿನ್ನ ಪಾದವ ಬಿಡಲೊಲ್ಲೆ
ಘನ್ನಕರುಣಿ ನೀನು ಬಲ್ಲೆ ನಿನ್ನ ಬಿಡಲು ಜಗಕಲ್ಲೇ ೨

ಉತ್ತಮೋತ್ತಮ ದೇವ ಸತ್ಯ ಭೃತ್ಯಜೀವನು ಎಂಬೆನಿತ್ಯ
ಭಕ್ತ ಪ್ರಥಮ ಪ್ರಾಣನೀನೇ ಮುಕ್ತಿನಿನ್ನಾಧೀನವೇನೇ ೩

ಇಂದಿರಾದೇವಿ ನಿನ್ನ ರಾಣಿ ಕಂದರು ವಿಧಿ ಪರಿವಾರ
ಎಂದೆಂದಿಗೂ ಭಿನ್ನರೇನೇ ಎಂದೆಂದು ಅಧೀನರೇನೇ ೪

ಶ್ರೀಕೃಷ್ಣವಿಠಲ ಏಕ ಸಕಲ ದೋಷ ವಿದೂರ
ಸಕಲ ಸದ್ಗುಣ ಪೂರ್ಣ ಹಾಗೆ ಅಕಟ
ಪೊರೆಯೋ ಎಂದು ಕೂಗಿ ೫

## ೩೫

ಮಗುವು ಅಲ್ಲ ಕಾಣೆ ಗೋಪಿ ಇವನು ನಿನ್ನಾ ಪ

ಜಗವ ನಿರ್ಮಿಸಿ ಪಾಲಿಸಿ ಅಳಿಸುವ
ಅಗಣಿತ ಸುಗುಣಾ ಭರಣನೆ ಇವನು ಅ.ಪ

ಬೆಣ್ಣೆಯ ಕದ್ದನು ಸಣ್ಣವನಿಹ ಬಹು
ಚಿಣ್ಣರ ಕೂಡುತ ಗೋಗಣ ಕಾಯುವ
ಮನ್ಮನ ಪುಥ್ಥಳಿ ಕಳಿಸುವದಾಗದು
ಎನ್ನುವ ನುಡಿಗಳ ಬದಿಗಿಡು ತಾಯಿ
ಉಣ್ಣುತ ಉಣ್ಣುತ ಮೊಲೆಯನು ಕೊಂದಿಹ
ಉನ್ನತ ರಕ್ಕಸಿ ಪೂತಣಿಯನ್ನಿವ
ಮಣ್ಣನು ಕಂಡರು ಕಂಸನದೂತರು
ಪೂರ್ಣಾನಂದನು ಸರಿ ಇವನಮ್ಮ ೧

ಜಾರ ಚೋರ ಸುಕುಮಾರನು ಸುಂದರ
ನಾರೇರ ವಲಿಸಿ ಸೇರಿದ ನಿಶಿಯಲಿ
ಪೋರನೆಂಬ ಮನ ದೂರವಗೈದುಗ
ಭೀರ ಮಹಿಮ ಜಗ ಸಾರನೆಂದರಿಯೆ
ಭಾರಿಗಿರಿಯನೆತ್ತಿ ಊರಿಗೆ ಊರನು
ಸೇರಿಸಿ ಪೊರೆದಿಹಪಾರಮಹಿಮ ಜಂ
ಭಾರಿದರ್ಪಹರ ಪೋರನೆ ಬಿಡುಬಿಡು
ನೀರೆ ನಿಗಮ ಸಂಚಾರನೆ ಖರೆಯೆ ೨

ಕಾಲ್ಗಳು ಸೋಕಲು ಶಕಟನು ಬಿದ್ದನು
ಶೀಳುತ ಕೊಕ್ಕನು ಬಕನಂ ಕೊಂದನು
ಕಾಳಿಯ ತುಳಿಯುತ ಗರ್ವವ ನಿಳಿಸಿದ
ಲೀಲಾಜಾಲದಿ ಜ್ವಾಲೆಯ ನುಂಗಿದ
ಬಾಲರು ಕೇಳಲು ಆಲಯತೋರಿದ
ಪಾಲಿಸಿ ವರುಣನ ತಂದೆಯ ಕಂದನ
ಲೋಲನೆ ಸರಿ ಜಗಮೂಲನು ಕೇಳೆ ೩

ನಾರಿಯು ಆಗುತ ಮೋಹವ ತುಂಬಿದ
ನೀರಜ ನಾಭಗೆ ಗೊಲ್ಲತಿಯ ಗಣ
ಬೀರಲ್ ಸಾಧ್ಯವೆ ಮೋಹವ ನೆಂದಿಗು
ಶ್ರೀರತಿದಾಯಕ ಕೊಳ್ಳುವನೇ ರತಿ
ಮೂರನ್ನೆಯ ಭವ ತಾರಕ ಶುಭ
ಶೃಂಗಾರ ಪೂರ್ಣ ಪರಿವಾರದಭೀಷ್ಟವ
ಪೂರೈಸಿದ ಖರೆ ಭೂರಿದಯಾಮಯ
ನಾರಾಯಣನಿವ ದೋಷ ವಿದೂರ ೪

ಮೆಲ್ಲಗೆ ಬಾಯೊಳು ಎಲ್ಲವ ತೋರಿದ
ಮಲ್ಲನು ಸರ್ವರ ವಲ್ಲಭ ಸಿದ್ಧವು
ಗೊಲ್ಲನ ವೇಷದಿ ಇಲ್ಲಿಹನಮ್ಮ

ಇಲ್ಲವೆ ಸಮರಿವಗೆಲ್ಲಿಯ ಸತ್ಯ
ಮಲ್ಲರ ಮರ್ದಿಸಿ ಕೊಲ್ಲುತ ಕಂಸನ
ನಿಲ್ಲಿಸಿ ಧರ್ಮವ ಕಾಯುವ ನಮ್ಮ
ಬಲ್ಲಿದ "ಶ್ರೀಕೃಷ್ಣವಿಠಲ" ಬೇಗನೆ
ನಿಲ್ಲಿಸಿ ಕೊಳ್ಳದೆ ಕಳುಹೇ ತಾಯಿ ೫

## ೩೬

ಮನಸಿನ ಮಲಿನವ ಮನಸೀಜನ್ನೈಯನೆ
ಹನನ ವೈದಿಸದಿರೆ ಬದುಕುವ ದೆಂತೊ ಪ

ವನಜ ಸಂಭವ ಜನಕ ತನುಮನ ಪ್ರೇರಕ
ಬಿನುಗು ಮಾನವ ನಾನು ಶರಣುಹೊಕ್ಕೆನ್ನೈಯ ಅ.ಪ

ಸ್ನಾನ ಸಂಧ್ಯಾನುಷ್ಠಾನ ವೇನು ಗೈದವನಲ್ಲ
ಹೀನ ಸ್ತ್ರೀಯರ ಧ್ಯಾನ ಘಳಿಗೆ ಬಿಟ್ಟವನಲ್ಲ
ಧಾನ ಧರ್ಮಗಳೊಂದು ಮಾಡಿಕೊಂಡವನಲ್ಲ
ಗಾನದಿಂದಲಿ ಹರಿನಾಮವಾದರು ಪಾಡಲಿಲ್ಲ
ದೀನಜನಮಂದಾರ ಕರುಣೋದಾರ ಮಹಿಮನೆ
ಮಾನಮತ್ತವಮಾನ ನಿನ್ನಾಧೀನ ವಲ್ಲವೆ
ತನುಮನೇಂದ್ರಿಯ ನಾಥ ನಾಯಕ
ನೀನೇ ಆಗಿರೆ ಎನ್ನ ದೇನಿದೆಬರಿದೆ ದೂರದೆ ಸಾನುರಾಗದಿ ೧

ನೋಡಬಾರದ ನೋಟ ನೋಡಿ ಆಯಿತು ಜೀಯ
ಮಾಡಬಾರದ ಬಯಕೆ ಮಾಡಿದ್ದಾಯಿತು ಸ್ವಾಮಿ
ಕೂಡಬಾರದ ಕೂಟ ಕೂಡಿದ್ದಾಯಿತು ತಂದೆ
ಈಡುಕಾಣೆನು ನನ್ನ ಕೇಡು ಕರ್ಮಕೆ ಇಂದು
ಗಾಡಿಕಾರ ನಿಗೂಢ ಹೃದಯಗ ಬೇಡಿ ಕೊಂಬೆನು
ಪ್ರೌಡ ಭಕ್ತರಗಾಢ ಪ್ರೇಮದಿ ಕೂಡಿಸುತ ತಿಳಿ

ಗೇಡಿಯೆನಿಸದೆ ವೇದ ಸಮ್ಮತ ಗಾನ ಜೋಡಿಸಿ
ಹಾಡಿ ಹಾಡಿಸೆ ಭಾಢ ಮಹಿಮೆ ವಿಶೇಷ ನಿನ್ನದು ೨

ಮುಂದು ಮಾಡುತ ಹಿಂದೆ
ಹಿಂದು ಮಾಳ್ಪರೆ ಇಂದು ಕಂದನಲ್ಲವೆ ನಾನು
ಎಂದೆಂದು ನಿನಗೆ ಇಂದಿರೇಶನೆ ನಿನ್ನಮೀರಿಕರ್ಮವಮಾಡೆ
ಎಂದಿಗಾದರು ಸಾಧ್ಯವಾಹುದೆ ನನಗೆ
ತಂದೆ ಜಯಮುನಿವಾಯು ಹೃದಯಗ
ನಂದಮಯ ಶ್ರೀ ಕೃಷ್ಣವಿಠಲ
ಬಂಧುನೀನೇ ಸರ್ವಕಾಲದಿ ಎಂದು ಸಿದ್ಧವು ನಿಖಿಳ ವಿಶ್ವಕೆ
ಕುಂದುಮಯ ಅಭಿಮಾನ ಮನಸಿಗೆ
ತಂದಿಡದೆಯೆಂದೆಂದು ಸಲಹುತ
ಕುಂದು ಗೈದವನೆಂದು ನುಡಿಯದೆ
ನಿಂದು ನಡಿಸೈ ಮುಂದಿನಾ ಪಥ ೩

## ೩೭

ಮನಸಿನನುತಾಪವನು _ ಪರಿಹರಿಸು _ ಹರಿಯೇ ಪ

ವನಜ ನಾಭನು ನೀನೇ ಮನದ ಪ್ರೇರಕನಲ್ಲವೇ ಅ.ಪ.

ಅನುದಿನದಿ ಧನವನಿತೆ _ ಎಂತೆಂಬ ಕಾನನದಿ
ಮನಸು ಮಾಡೀ ಬಹಳ _ ಶ್ವಾನನಂದದಿ ತಿರಿದೇ
ಕನಸಿಲಾದರು ನಿನ್ನ _ ಧ್ಯಾನವನು ಮಾಡದಲೆ
ಮನುಜ ಪಶುವೆನಿಸಿದೆನು _ ದೀನವತ್ಸಲ ಸ್ವಾಮಿ ೧

ಸಂಸಾರ ವೆಂಬುವುದು _ ಹಿಂಸೆರೂಪವೆಸಿದ್ಧ
ಹಂಸರೂಪಿಯ ಮರೆತ _ ಸಂಶಯಾತತಜನಕೆ
ಧ್ವಂಸ ಗೈಸಿ ವಿಷಯ _ ವಾಸನೆಯ ತರಣಿಯನು
ಕಂಸ ಮರ್ಧನ ಶೌರಿ _ ದಾಸನೆನ್ನನು ಮಾಡಿ ೨

ಜ್ಞಾನ ತಿರುಳನು ತಿಳುಹಿ _ ಧ್ಯಾನಬಗೆಯನು ಅರುಹಿ
ಮಾನಾಭಿಮಾನವನು _ ನಿನಗೆ ಸಮರ್ಪಿಸಿ ಸು
ಜ್ಞಾನಿಗಳ ಸಹ ಶ್ರೀ ಕೃಷ್ಣವಿಠಲನ ನಿತ್ಯ
ಗಾನದಲಿ ಮೆಚ್ಚಿಸುವ ಭಾಗ್ಯ ಶೀಲನ ಮಾಡೀ ೩

## ೩೮

ಮಲಗಿದನು ಶ್ರೀರಂಗ ಶ್ರೀರಂಗ ಪ

ಕಲಿಜನರ ನೋಡುತಲಿ ಅಳುಕಿದಾಮನದಿಂದ ಅ.ಪ

ಜೀವ ಜಗಬಿಂಬನಿಗೆ ಯಾವುದೈ ಆಯಾಸ
ಕಾವ ಸಚರಾಚರವ ಶ್ರೀವರನಿಗುಂಟೆ ನಿದ್ರೇ
ಸಾರ್ವಭೌಮನಿಗೆ ಕ್ಷುದ್ರಜೀವ ಸಮರೆಂತೆಂಬ
ಕೋವಿದಾಭಾಸಗಣ ಸೇವೆಕೊಳ್ಳನು ಎಂದು ೧

ವೈದೀಕರೆನ್ನುತಲಿ ವೇದಮರ್ಮವ ತಿರುಚಿ
ಬೌದ್ಧಮತವನೆ ಮತ್ತೆ ಬೊಧಿಪರೆ ಈ ಜನರು
ಸಾಧು ಸಮ್ಮತ ಮಧ್ವವಾದ ನೋಡದೆ ಬರಿದೆ
ಸಾಧು ವೇಷದಿ ತಿರಿಪ ಗರ್ದಭರ ಕಂಡಂಜಿ ೨

ನಾಮಜಪವೇನಿಲ್ಲ ನೇಮ ನಿಷ್ಠೆಗಳಿಲ್ಲ
ನಾಮ ಹಾಕುವ ದೊಡ್ಡ ನೇಮವಂದೇಯಿಹುದೆ
ಹೇಮಗೋಸುಗ ತತ್ವ ಹೋಮಮಾಡುವ ಎಲ್ಲ
ಕಾಮ ಕಾಮಿನಿ ಜನರ ವಾಮಗುಣಗಣನೆನೆದು ೩

ಅನ್ನದೇವನ ತೊರೆದು ಅನ್ನಕೊಂಬರೆ ಕ್ರಯಕೆ
ಅನ್ಯರೆನ್ನದೆ ಹರಿಗೆ ಇನ್ನು ಫಳಿಪರೆ ನಿರಯ
ಹಣ್ಣಂತಮವಿಪರೀತ ಕಣ್ಣಿಂದ ನೊಡದವ
ಧನ್ಯಧನ್ಯನು ಎಂದು ಕಣ್ಣುಗಳ ಮುಚ್ಚುತಲಿ ೪

ಶ್ರೀಲೋಲ ಮಲಗಿದಡೆ ಏಳುವುದು ಜಗವೆಂತು
ವ್ಯಾಳಗುರುಹೃಸ್ಥ "ಶ್ರೀ ಕೃಷ್ಣವಿಠಲ"ನೆ
ತಾಳಿ ಕೃಪೆ ಹೃದಯದಲಿ ಶೀಲರೂಪವ ತೋರೊ
ಕಾಲನಿಗೆ ನೀ ಕಾಲ ವಾಲಗವ ಕೈಕೊಂಡು ೫

## ೩೯

ಮೋಸಹೋದೆವ್ವೆ ಸಖಿ _ ವಾಸುದೇವನ ತಿಳಿಯದೆ ಪ

ಮೋಸಹೋದೆವ್ವೆ ಸಖಿ _ ಮೂಸಿತು ಮನವಮ್ಮ
ದೋಷದೂರ ಜಗದೀಶನ ಈ ಲೋಕಶಿಶುವೆಂದರಿಯುತ ಅ.ಪ.

ಪುಟ್ಟಿದ ಶಿಶು ಮೊಲೆ ಕೊಟ್ಟವಳಳಿದನೆ
ಸುಟ್ಟಾನು ದೈತ್ಯರ ಗೋಷ್ಠಿಗಳೆಲ್ಲವ
ಬೆಟ್ಟವನೆತ್ತುತ ವೃಷ್ಟಿಯ ತಡೆದನೆ
ಮೆಟ್ಟುತ ಕಾಳಿಯ ತುಷ್ಟಿಯ ನೀಡಿದನೆ
ಇಷ್ಟಾದರುನಾವು ತಿಳಿಯದೇ
ಸೃಷ್ಟಿಗೊಡೆಯ ಬಹು ದುಷ್ಟನು ಎಂದೇವೆ
ಪಟ್ಟೆ ಪೀತಾಂಬರ ಕದ್ದವನೆಂದೇವೇ
ಪುಟ್ಟವನಿವ ಗೋಗೋಷ್ಠಿಯ ಕಾಯುವ
ಇಟ್ಟನು ಕಣ್ಣನು ನಮ್ಮಲೆಂದೇವೇ
ಜೇಷ್ಠ ಶ್ರೇಷ್ಠ ಪರಾತ್ಪರ ಹರಿ ಸಂ-
ತುಷ್ಟ ಗುಣಾರ್ಣವ ನಿರುಪಮ ಸುಖಿ ಜಗ-
ಚೇಷ್ಟೆಯ ನಡೆಸುವ ಶಿಷ್ಟರ ಧೊರೆ ಪರ-
ಮೇಷ್ಠಿಯ ಪಿತ ನೆಂದರಿಯದೆ ಕೃಷ್ಣನಾ ೧

ಮೆಲ್ಲನೆ ಬಾಯಲಿ ಲೋಕವ ನೆಲ್ಲವ ತಾಯಿಗೆ ತೋರಿದನೆ
ಬಲ್ಲಿದನಿವ ತಾ ಬೆಂಕಿ ಜ್ವಾಲೆಯನುಂಗುತ ತಾಪೊರೆದನೆ
ಗೊಲ್ಲರಪತಿ ಮುಳುಗಲು ಪಾತಾಳದಿ ತಂದನೆ ತಂದೆಯನು
ಬಾಲರ ಗುಂಪಿಗೆ ಲೋಕಗಳೆಲ್ಲವ ನೀರೊಳು ತೋರಿದನೆ

ಬಾಲಿಶರಾಗುತ ತಿಳಿಯದೆ ಕಳ್ಳನು ಪಾಲ್ಬೆಣ್ಣೆಯ
ಮೆದ್ದನು ಎಂದೇವೇ
ನಿಲ್ಲದೆ ನಿಶಿಯೊಳು ನಮ್ಮನು ಕೆಡಿಸಿದನೆಂದೇವೆ
ಸುಳ್ಳನು ಹೇಳುವ ಜಾಣ ಗೋಪಾಲನು ಎಂದೇವೇ
ಸಲ್ಲದ ನುಡಿಗಳ ನಾಡುತ ಕಾಲವ ಕಳೆದೇವೇ
ಎಲ್ಲರ ಹೃದಯದಿ ಮತ್ತೆ ಬ್ರಹ್ಮಾಂಡದಿ ಒಳಹೊರ-
ನೆಲ್ಲಿಯು ತುಂಬಿಹಏಕನು ಬಲ್ಲನು ಎಲ್ಲವ
ಎಲ್ಲವ ಮಾಡುತ ಮಾಡಿಸಿ ಪೊರೆವನು ದೋಷಗಳಿಲ್ಲದ
ಸ್ವರತ ರಮಾಧವ ಕೃಷ್ಣನು ಎನ್ನದೇ ೨

ತಿಂಗಳ ಬೆಳಕಲಿ ರಂಗನು ಬಂದಾನೇ
ಅಂಗಜತಾಪವ ಹರಿಸುವೆನೆಂದಾನೆ
ಕಂಗಳಿಗ್ಹಬ್ಬವ ನೀಡುತ ಪೊರೆದಾನೇ
ಹಿಂಗದೆ ತನುಮನ ಎಲ್ಲವ ಸೆಳೆದಾನೇ
ಮಂಗಳಕಾಯನು ನೀಡಲು ನಮಗಾ
ಲಿಂಗನ ಸುಖವನು ಬಹುಮುಡಿ ಆದಾನೇ
ಅಂಗವ ಮರೆಸುತ ಮಹದಾನಂದ ತ-
ರಂಗದಿ ಒಯ್ಯುತ ಚೆಲುವನು ಕೂಡಿದನೇ
ಅಂಗನೆ ಬುದ್ಧಿಲಿ ಇವನನು ತಿಳಿಯದೇ
ರಾಗ ವಿಹೀನನ ನಮ್ಮೊಡನಾಡಿಯು ಎಂದೇವೇ
ಸಾಗುತ ಬಂದಿಹ ನಮ್ಮಯ ರೂಪಕೆ ಎಂದೇವೇ
ನಮ್ಮನು ಕೂಡುತ ಭೋಗವ ಪಡೆಯುವನೆಂದೇವೇ
ಗಾರ್ಗ್ಯರು ಮುಂಚೆಯೆ ಪೇಳಿದ ನುಡಿಗಳ ಮರೆತೇವೇ
ಭೋಗಿಶಯನ ಜಗದೇಕವೀರ ಸಕಲಾಗಮ ವಂದಿತ
ಸಾಗಿಸೆ ದಿತಿಜರ ಕೃಷ್ಣನು ಬಂದಿಹ ದೇವಕಿ ಜಠರದಿ
ಬಾಗುತ ಜಯಮುನಿ ವಾಯ್ವಂತರ್ಗತ ಶ್ರೀ ಕೃಷ್ಣವಿಠಲನು
ಭಾಗವತರಾಶ್ರಯ ಪೂರ್ಣಾನಂದನ ಲೀಲೆಯ ತಿಳಿಯದೇ ೩

## ೪೦

ಯೆಂದು ಪಿಡಿಯುವಿ ಕೈಯ್ಯ
ಇಂದಿರೇಶ ಚಲುವ ಕೃಷ್ಣನೆ ಪ

ಮುಂದೆ ಹೋಗಲು ಬಂಧಮಾಡುತ
ಕುಂದು ಅಳಿಯುತ ತಂದೆ ದಯೆತೊರಿ ಅ.ಪ

ಒಂದು ಅರಿಯದ ಮಂದ ನಾನಯ್ಯ
ಕಂದಿ ಕುಂದಿದೆ ಭವದಿ ಕೇಳಯ್ಯ
ಬಂಧು ಬಳಗವು ಯಾರು ಇಲ್ಲಯ್ಯ
ನಿಂದು ಮುಂದಿನ ದಾರಿ ನಡೆಸಯ್ಯ ಜೀಯಾ
ಅಂದು ಸಭೆಯೊಳು ಮಂದಗಮನೆಯ
ಒಂದು ನೊಡದೆ ಬಂದು ಸಲಹಿದ
ಸಿಂಧು ಶಯನಾನಂದ ಮೂರುತಿ
ನಂದನಂದನ ಶ್ಯಾಮಸುಂದರ
ಬಂಧು ಸರ್ವರ ಬಂಧಮೋಚಕ
ಮಂದರಾದ್ರಿ ಧರನೆ ಯದುಕುಲ
ಚಂದ್ರ ಶೋಭಾಸಾಂದ್ರ ಕೃಷ್ಣನೆ
ಬಂದು ಚಂದದಿ ಸಲಹಿ ಎನ್ನನು ೧

ಬಾಲತನದಲ್ಲಿ ಲೀಲೆಗೋಷ್ಠಿಲಿ ಮೆರೆದೆ ನಾನಲ್ಲಿ
ಮೇಲೆ ಯೌವನ ಒಡನೆ ಬಂತಲ್ಲಿ
ಲಲನೆ ಕೇಳಿಲಿ ಮುಳುಗಿ ಹೋದೆನು ಅಲ್ಲಿ
ಮೆಲ್ಲಮೆಲ್ಲನೆ ಮುಪ್ಪು ಬಂತಲ್ಲಿ
ಕಾಲಕಳೆದೆನು ಪಗಡೆ ಜೂಜಿನಲಿ
ಮಲ್ಲಮರ್ದನ ಮಾತುಲಾಂತಕ
ಚಲ್ವಸೂಕರ ಫುಲ್ಲಲೊಚನ
ಫುಲ್ಲನಾಭನೆನಲ್ಲ ಸರ್ವರ ಬಿಂಬರೂಪನೆ

ಎಲ್ಲ ಕಾಲದಿ ಎಲ್ಲಮಾಡುತ ನಿಲ್ಲದೆಜಗ
ವೆಲ್ಲಸಲಹುವ ಎಲ್ಲ ವೇದದ ಸಾರ ಶ್ರೀ
ನಲ್ಲ ನಿನ್ನಯ ಎಲ್ಲ ಬಲ್ಲವರಿಲ್ಲ ಎಲ್ಲಿಯೂ
ಚಲ್ವನಾರಿ ವೇಷಧಾರಿಯೆ ಬುದ್ಧ ಕಲ್ಕಿಯೆ
ಸೊಲ್ಲು ಲಾಲಿಸಿ ಒಲಿದು ಬಂದ ನಾರಸಿಂಹನೆ
ಇಲ್ಲ ಸಮರು ಅಧಿಕರ್‍ಯ್ಯ ಪೂರ್ಣದೇವನೆ ೨

ಮೂರು ತಾಪವ ಹರಿಪ ಬಗೆಯೇನೋ
ವೈರಿ ಆರರ ಭರದಿ ತರಿ ನೀನೂ
ಮೂರು ಋಣಗಳು ಉಳಿಯೆಗತಿಯೇನು
ಮೂರು ಕರ್ಮದಿ ಬಿಡಿಸಿ ಪೊರೆಯನ್ನು ಭಕ್ತಸುರಧೇನು
ಸಾರಸಜ್ಜನ ಪ್ರಾಪ್ಯ ಶುಭಗುಣ
ಸಾರ ಕರುಣಾ ಪೂರ್ಣವಾರಿಧಿ
ಮಾರಜನಕನೇ ಋಷಭಮಹಿದಾಸ
ತೋರು ಜ್ಞಾನವ ಬಾದರಾಯಣ
ಮೀರಲಾರೆನು ವಿಷಯವಾಸನೆ
ಭಾರತೀಶನ ಒಡೆಯ ಕೃಷ್ಣನೆ
ಭಾರ ನಿನ್ನದು ಎನ್ನ ಪೊರೆವದು
ಶೂರ ಭಾರ್ಗವ ಮತ್ಸ್ಯ ವಾಮನ
ಧೀರ ಧೃವನಾ ಪೊರೆದ ವರದನೆ
ಬೀರಿ ಭಕ್ತಿ ಜ್ಞಾನ ವೈರಾಗ್ಯ ೩

ಎನ್ನ ಯೋಗ್ಯತೆ ನೋಡಿ ಫಲವೇನು
ನಿನ್ನ ಘನತೆ ತೋರಿ ಪೊರೆ ನೀನು
ನಿನ್ನ ದಾಸನ ಮಾಡು ಎನ್ನನ್ನು
ಅನ್ಯಹಾದಿಯ ಕಾಣೆ ನಾ ನಿನ್ನು
ಬೆನ್ನು ಬಿದ್ದೆನು ಇನ್ನೂಮುನ್ನೂ
ಮಾನ್ಯ ಮಾಧವ ವಿಶ್ವ ತೈಜಸ
ಪ್ರಾಜ್ಞತುರಿಯ ಹಂಸ ವಿಷ್ಣುವೇ
ಜ್ಞಾನ ಭೋಧಕ ಸನತ್ಕುಮಾರನೇ

ಮೌನಿ ದತ್ತಾತ್ರೇಯ ಹಯಮುಖ
ದೀನವತ್ಸಲ ಯಜ್ಞ ಧನ್ವಂತ್ರಿ
ಶ್ರೀನಿವಾಸ ರಾಮ ಕಪಿಲನೆ
ಜ್ಞಾನ ನಿಧಿ ಮುನಿ ನಾರಾಯಣನೆ
ನೀನೆ ಅನಿರುದ್ಧಾದಿ ರೂಪನು
ಧ್ಯಾನಗೋಚರ ಶಿಂಶುಮಾರನೆ
ಸಾನುಕೂಲದಿ ನೀನೆ ವಲಿಯುತ
ಊನ ಮಾಡಿಸಿ ಕರ್ಮ ಸಂಚಯ ೪

ಆದಪೊದ ಮಾತು ಏಕಯ್ಯ
ಮಧ್ವರಾಯರ ಪ್ರೀಯ ಶೃತಿಗೇಯ
ಮೋದದಾಯಕ ಮುಂದೆ ಸಲಹೈಯ್ಯ
ಪಾದಪದ್ಮದಿ ಶರಣು ಅಲ್ಲದೆ ಏನು ಮಾಡಲಿ ಜೀಯ ಅಯ್ಯ
ತಿದ್ದಿ ಮನವನು ಕದ್ದು ಅಘವನು
ಒದ್ದು ಲಿಂಗವ ಶುದ್ಧಜ್ಞಾನದ
ಸಾಧು ಜಯಮುನಿ ವಾಯುವಂತರ
ಮಾಧವ "ಶ್ರೀ ಕೃಷ್ಣವಿಠಲ" ನೆ
ಪಾದ ಮಧುಪರ ವೃಂದ ಮಧ್ಯದಿ
ವೇದ ಸಮ್ಮತ ಗಾನ ಸುಧೆಯನು
ಶುದ್ಧಭಕ್ತಿ ಜ್ಞಾನದೊಡಗೂಡಿ
ಮೆದ್ದು ಪಾಡುತ ಕುಣಿವ ಭಾಗ್ಯವ
ಮುದ್ದು ಕೃಷ್ಣನೆ ನೀನೆ ಎನಗಿತ್ತು ೫

## ೪೧

ರಂಗ ಕರುಣಿಸೊ ಚರಣಾ ಶ್ರೀ ಪ

ರಂಗ ಗರುಡ ತುರಂಗ ಸಿರಿಮನ ತುಂಗಭವಗಜ ಸಿಂಗರಿಪುಕುಲ
ಭಂಗ ಮಹಿಮತರಂಗ ದೇವೋತ್ತುಂಗನಿಜನಿಸ್ಸಂಗ ನರಹರಿ ಅ.ಪ

ದೇವಸಕಲ ಸೃಷ್ಟಿಯಗೈವ ಸುಸ್ವಭಾವ
ದೇವ ತ್ರಿಭುವನ ಜೀವಭಕ್ತರ ಕಾವಶೃತಿತತಿ
ಭಾವ ದೋಷಾಭಾವನಿಜಸುಖ
ವೀವ ಬ್ರಾಹ್ಮಿಯ ಮಾವ ತರಿತರಿ ನೋವ ಪರಿಮರ ೧

ವೇಧ ಸುಜನಕೆ ಬೋಧೆಯಿತ್ತ ಮಹಾನುಭಾವ
ಛೇಧಖಳಜನ ಖೇದ ಸಜ್ಜನ ಮೋದನಿರ್ಗತ
ಭೇದ ಸಿರಿನುತ ಪಾದವ್ಯಾಹೃತಿ
ನಾದಸಿರಿಜಗ ಭೇದ ಸುಖಮಯ ಸಾಧು ಶಿರಶ್ರೀ ೨

ಶ್ರೀಶ ನಿಜದಾಸ ಜನರ ಮನ ಉಲ್ಲಾಸಾ
ಶ್ರೀಶ ತರಿತರಿ ಪಾಶ ಕೊಡುಕೊಡು ಲೇಸ ನಿಖಿಳರ
ಭಾಸ ಸಿರಿಮನೆ ವಾಸ ವಿಶ್ವನು
ಪೋಷ ಬ್ರಹ್ಮಸುಕೋಶ ನಿರ್ಗತ ನಾಶ ೩

ಸತ್ಯ ನಿತ್ಯಾನಿತ್ಯ ಜಗರೂಪ ಸ್ವತಂತ್ರ
ಸತ್ಯ ಸತ್ಯನೆ ಸತ್ಯಲಕುಮಿ ಕಳತ್ರ ಪರಮಪ
ವಿತ್ರ ಚಿನ್ಮಯ ಭೃತ್ಯವತ್ಸಲ
ನಿತ್ಯನೂತನ ಸತ್ಯವತಿಸುತ ಚಿತ್ತಮಂದಿರ ೪

ವಿಶ್ವತೈಜಸ ಪ್ರಾಜ್ಞತುರಿಯ ಶರಣು
ಅಶ್ವತ್ಥ ವಿಶ್ವವಿಶ್ವಗ ವಿಷ್ಣುಜಗ ಬಲ
ವಿಶ್ವಪ್ರೇರಕ ಜಿಷ್ಣುಸಾರಥಿ ಕೃಷ್ಣವರಸ್ಥಿತ
"ಕೃಷ್ಣವಿಠಲ" ಶಿಷ್ಟದೋಷಸಹಿಷ್ಣುವಂದಿಪೆ ೫

## ೪೨

ರಂಗ ರಂಗನಾಥ ಬೇಗ ಬಾರೋ ಪ

ತುಂಗಮಹಿಮ ಬಂದು ಭವಭಂಗ ಮಾಡೋ ಅ.ಪ

ತಂದೆಯೆಂದು ಇಂದು ಬಂದೆ ಕುಂದುಎಲ್ಲಹಿಂದುದೂಡೋ
ಮುಂದುಮಾಡಿ ಛಂದಭಕ್ತಿ ಕಂದನೆಂದು ಕೈಯ ಪಿಡಿಯೋ ೧

ಬಂಧುವಲ್ಲೆ ನೀನೇ ಜಗಕೆ ನಂದಶಯಸ ಬಂಧಮೋಚಕಾ
ಬಂದು ಬಂದು ಭವದಿನೊಂದೆ ಎಂದು
ಕಾವೆ ಪೇಳುಗೋವಿಂದಾ ೨




ಬಿಂಬನೀನು ಹೌದು ಪ್ರತಿಬಿಂಬ ನಾನು ನನ್ನ ವ್ಯಾಪಾರ
ಬಿಂಬ ನಿನ್ನಾಧೀನವಿರಲು
ಅಂಬೋದೇಕೋ ದೋಷಿಯೆಂತೆನ್ನಾ ೩

ಹಂಬಲವ ಬಿಟ್ಟುಸಕಲ ನಂಬಿದೆನೋ ಸ್ವಾಮಿಯೆಂತೆಂದು
ತುಂಬಿಶುದ್ಧ ಜ್ಞಾನ ಭಕುತಿ ಅಂಬುಜಾಕ್ಷಯಿಂಬು ನೀಡೈಯ್ಯಾ ೪

ನೀನೇ ಮುಕ್ತಿ ನೀನೆ ಭುಕ್ತಿ ನೀನೇ ಪ್ರಾಣ ನೀನೆಸರ್ವಸ್ವ
ಏನು ಇನ್ನು ಮಾಡಲಾಪೆ ನೀನೆವಲಿದು ಕಾಯಬೇಕೈಯ್ಯ ೫

ದೋಷದೂರ ನಾಶರಹಿತ ವಾಸುದೇವ ಪೂರ್ಣ ಸುದ್ಗುಣಾ
ತೋಷಕಾಯ ಶ್ರೀಶನಿನ್ನ ದಾಸನೆಂದು ಒಪ್ಪಿಕೊಳ್ಳಯ್ಯ ೬

ಏಕಾನೇಕರೂಪ ಸಕಲ ಲೋಕ ಸೃಜಿಸಿ ಅಳಿವೆ ಅನೀಕಾ
ಬೇಕು ಎನಿಪೆ ಭಕ್ತರಲ್ಲಿ ಸಾಕಬೇಕು ಶ್ರೀಗೆ ನಾಯಕ ೭

ವೇದ ವೇದ್ಯ ವೇದಾತೀತ ಮೋದ ಪೂರ್ಣ ಬಾದರಾಯಣಾ
ಆದಿಮಧ್ಯ ಅಂತ್ಯದೂರ ಸಾಧುಪ್ರಾಪ್ಯನೇಮ ವರ್ಜಿತಾ ೮

ಶರಣು ಶರಣು ಮಧ್ವಸದನ ಶರಣು ಶರಣು ಬೃಹತಿಪ್ರತಿಪಾದ್ಯ
ಶರಣು ಶರಣು "ಕೃಷ್ಣವಿಠಲ" ಶರಣು ರಂಗ ಕರುಣಾ ಸಾಗರ ೯

## ೪೩

ರಾಧಾಕೃಷ್ಣ ಮುರಾರಿ ಜಯ ಜಯ
ವೇದ ವೇದ್ಯನೆ ವಿಷ್ಣು ಜಯ ಜಯ
ಮೋದತೀರ್ಥ ಸುವಂದ್ಯ ಜಯ ಜಯ
ಮಾಧವಾ ಮಧುಸೂದನಾ ಪ

ಶ್ರೀಧರಾ ಪ್ರದ್ಯುಮ್ನ ಜಯ ಜಯ
ಗೋಧರಾ ಶ್ರೀ ಮತ್ಸ್ಯ ಜಯ ಜಯ
ಭೂಧರಾಧರ ಕೂರ್ಮ ಜಯ ಜಯ
ಭೂಧವ ದಾ–ಮೋದರಾ ೧

ನಾರಸಿಂಹ ಉ–ಪೇಂದ್ರ ಜಯ ಜಯ
ಚಾರುವಾಮನ ಪೋರ ಜಯ ಜಯ
ಶ್ರೀ ತ್ರಿವಿಕ್ರಮ ವೀರ ಜಯ ಜಯ
ಭಾರ್ಗವಾ–ದ್ವಿಜ ಪೋಷಕಾ ೨

ರಾಮ ಲೋಕೋ–ದ್ಧಾರ ಜಯ ಜಯ
ಸಾಮವಾಸುದೇವ ಜಯ ಜಯ
ಧೀಮ ತಾಂವರ ಬುದ್ಧ ಜಯ ಜಯ
ಶ್ರೀಮನೋಹರ ಕಲ್ಕಿ ಕಲಿವೈರಿ ೩

ಈಶ ರಸ ಅನಿ–ರುದ್ಧ ಜಯ ಜಯ
ದೋಶಹರ ಸಂ–ಕರ್ಷ್ಣ ಜಯ ಜಯ
ಶ್ರೀಶಹರಿ ಹೃಷಿಕೇಶ ಜಯ ಜಯ
ಕೇಶವಾ ನಾರಾಯಣಾ ೪

ಬಾದರಾಯಣ–ದತ್ತ ಜಯ ಜಯ
ವೇಧ ಅಚ್ಚುತ–ಕಪಿಲ ಜಯ ಜಯ
ಮದ್ವಗುರು ಮಹಿ–ದಾಸ ಜಯ ಜಯ
ಪದ್ಮನಾಭ ಅಧೋಕ್ಷಜ ೫

ಶ್ರೀ ಜನಾರ್ಧನ-ಋಷಭಜಯ ಜಯ
ನೈಜತೇಜಾ ನಂತ ಜಯ ಜಯ
ವಾಜಿವದನ ಇಂ-ಇಂದ್ರ ಜಯ ಜಯ
ರಾಜ ಭಕುತರ ಭೋಜ ಸುರರಾಜ ೬

ಯಜ್ಞ ಅಜ ಧನ್ವಂತ್ರಿ ಜಯ ಜಯ
ಪೃಶ್ನಿ ಗರ್ಭ ಮುಕುಂದ ಜಯ ಜಯ
ಚೆನ್ನ ಬೋಧಕ ಹಂಸ ಜಯ ಜಯ
ಶಿಂಶುಮಾರ ಸುಮೋಹಿನಿ ೭

ಪಾಂಡುರಂಗ ವಿ-ಠೋಬ ಜಯ ಜಯ
ತೊಂಡವತ್ಸಲ-ವರದ ಜಯ ಜಯ
ಗಂಡುಗಲಿ ತಿ-ಮ್ಮಪ್ಪ ಜಯ ಜಯ
ರಂಗನಾಥ ಪ-ರಾದ್ಯನಂತನೆ ೮

ವಿಶ್ವತೈಜಸ-ಪ್ರಾಜ್ಞ ಜಯ ಜಯ
ಶಶ್ವದೇಕನೆ-ತುರಿಯ ಜಯ ಜಯ
ಶ್ರೀಶ "ಶ್ರೀ ಕೃಷ್ಣ-ವಿಠಲ" ಜಯ ಜಯ
ಗೋವಿಂದಾ ಪುರು-ಷೋತ್ತಮಾ ೯

## ೪೪

ರಾಮ ಗೋವಿಂದ-ಹರಿ-ಕೃಷ್ಣ ಗೋವಿಂದ
ಕೃಷ್ಣ ಗೋವಿಂದ- ಹರಿ-ರಾಮ ಗೊವಿಂದ ಪ

ರಾಮ ರಾಮ ಕೃಷ್ಣಕೃಷ್ಣ _ ಕೃಷ್ಣಕೃಷ್ಣ ರಾಮರಾಮ
ರಾಮ ಕೃಷ್ಣ ರಾಮರಾಮ _ ಕೃಷ್ಣ ರಾಮ ಕೃಷ್ಣ ಕೃಷ್ಣ ಅ.ಪ.

ಮತ್ಸ್ಯಕೂರ್ಮ ಭೂವರಾಹ _ ಜೈ ಜೈ ವಾಮನ
ನಾರಸಿಂಹ ತ್ರಿವಿಕ್ರಮ _ ಶರಣು ಉಪೇಂದ್ರ ೧

ಶ್ರೀಶ ವಿಷ್ಣು ಬುದ್ಧ ಕಲ್ಕಿ _ ಭೃಗುಜ ಜಯೇಶ
ವಾಸುದೇವ ಹೃಷಿಕೇಶ _ ಕೇಶವಾಚ್ಯುತ ೨

ಪದ್ಮನಾಭ ಅಧೋಕ್ಷಜ _ ಅನಿರುದ್ಧ ಶ್ರೀಧರ
ವೇದವ್ಯಾಸ ಕಪಿಲದತ್ತ _ ಮಧುಸೂದನ ೩

ವಿಶ್ವ ತೈಜಸ ಪ್ರಾಜ್ಞತುರ್ಯ-ಬ್ರಹ್ಮ ಧಾಮ
ಪೃಶ್ನಿಗರ್ಭ ಮಹಿದಾಸ _ ಪುರುಷೋತ್ತಮ ೪

ಅಜಪರಶ್ರೀನಿವಾಸ _ ಸಾಸಿರಾನಂತ
ವಾಜಿವದನ ಶಿಂಶುಮಾರ _ ಸಚ್ಚಿದಾನಂದ ೫

ನಾರಾಯಣ ಜನಾರ್ದನ _ ಹಂಸ ಪ್ರದ್ಯುಮ್ನ
ದಾಮೋದರ ಯಜ್ಞ ಋಷಭ _ ದೇವ ಮಾಧವ ೬

ಅಪ್ಪ ಉರಗಾದ್ರಿ ವಾಸ _ ವೆಂಕಟೇಶ
ಅಪ್ರಮೇಯ ರಂಗನಾಥ _ ಪಾಂಡುರಂಗ ೭

ಸತ್ಯವ್ಯಕ್ತ ಸತ್ಯನೇತ್ರ _ ಸತ್ಯಪರ ಭಿನ್ನ
ನಿತ್ಯತೃಪ್ತ _ ಸತ್ತದಾತ _ ಪುರುಷ ಮಹಾಂತ ೮

ಲಕ್ಷ್ಮೀರಮಣ ಕೃಷ್ಣವಿಠಲ _ ಮುಕ್ತರಾಶ್ರಯ
ಲಕ್ಷ್ಯಮಾಡೆ ಮುಕ್ತಿ ಕೊಡುವ _ ಭಕ್ತವತ್ಸಲ ೯

## ೪೫

ರಾಮನ ನೋಡಿರೋ ನಮ್ಮ ಸೀತಾರಾಮನ ನೋಡಿರೋ ಪ

ರಾಮನನೋಡುತ ಪ್ರೇಮವ ಸುರಿಸುತ
ನಾಮವ ನುಡಿಯುತ ನೇಮದಿ ಬೇಡುತ ಅ.ಪ

ಅಜಭವಾದಿಗಳರಸನೀತಾ ಮತ್ತೆ
ನಿಜಭಕುತರಿಗೆ ಮುಕ್ತಿಪ್ರದಾತ
ತ್ಯಜಿಸಿ ದುಷ್ಟರಸಂಗ ಭಜಿಸಿ ಶಿಷ್ಟರ ಸಂಗ
ಭುಜಗಭವವೆಂದರಿತು ನಿಜಸುಖಮೆಲ್ಲಲು ೧

ನಿತ್ಯವೇದಗಳಿಂ ಪ್ರತಿ ಪಾದ್ಯ ಮತ್ತೆ
ನಿತ್ಯಾನಿತ್ಯ ಜಗಸೃಜಿಪ ದೇವದೇವೇಶ
ಮುಕ್ತಾಮುಕ್ತಾಶ್ರಯ ಸತ್ಯ ಪ್ರಾಣನ ಹೃಸ್ಥ
ಉತ್ತಮೋತ್ತಮನೆಂದು ಎತ್ತಿಕೈಗಳ ಮುಗಿದು ೨

ಭಕ್ತಿಯಿಂದಲಿ ನೋಡೆ ಸರ್ವಾಘಹರವೋ
ಮತ್ತೆಪಾಡಲು ಕಾಮಿತ ಕರಗತವೊ
ಹಸ್ತಿವರದನ ನೋಡೆ ಮತ್ತರಿಗೆ ಸಾಧ್ಯವೆ
ವತ್ತುತ ಗೃಹಕೃತ್ಯ ಬೇಗ ಉತ್ತಮರಲ್ಲಿ ೩

ಸುಲಭವಲ್ಲವೊ ಇಂಥಾ ಸಮಯ
ಫಳಿಸಿ ನೋಡೀದವನೆ ಕೃತಾರ್ಥ
ಕುಳಿತು ಹೃದಯದಿ ನಿತ್ಯ ಸಲಹುತ್ತಿರುವಂಥ
ಅಲವ ಮಹಿಮಾರ್ಣವ ಲಲನೆ ಲಕ್ಷ್ಮಿಯ ನಾಳ್ವ ೪

ಸರ್ವನಾಮಕ ನಿವನೂ ಮತ್ತೆ
ಸರ್ವಪ್ರೇರಕ ಬಲಖ್ಯಾತ ನಿಹನೂ
ಸರ್ವ ಸರ್ವಾಧಾರ ಸರ್ವೇಶ ಶಾಶ್ವತ
ಸರ್ವಗುಣಗಣ ಪೂರ್ಣ ಸರ್ವವ್ಯಾಪ್ತನಾದ ೫

ಆರಿಲ್ಲ ಸಮವಧಿಕ ಇವಗೇ ಮತ್ತೆ
ಆರು ಕಾಣರು ನೆಲೆಯ ಸಾಕಲ್ಯ ಸತ್ಯ
ಸಾರವಿಲ್ಲದ ಜಗದಿ ಸಾರನೊಬ್ಬನೆ ಇವನು
ತೊರು ಪಾದಗಳೆಂದು ಸಾರಿಬೀಳುತ ಅಡ್ಡ ೬

ಶರಣೆಂದ ವಿಭೀಷಣಗೆ ಪಟ್ಟ ಕಟ್ಟಿದನೂ
ಕರುಣದಿಂದಲಿ ಶಬರಿಯ ಪೊರೆದವನು
ದುರುಳ ಪಾಪಿಯ ದೊಡ್ಡ ಕವಿಯ ಮಾಡಿದ ಮಹಿಮ
ಪರಮ ಪಾವನ "ಕೃಷ್ಣವಿಠಲ" ಪರಾತ್ಪರ
ಕರುಣ ಬೇಕಾದವರು ೭

೪೬

ವಂದಿಸು _ ಶ್ರೀ ಹರಿಯ ಪ

ಇಂದಿರೆನಾಥ ಮಹೇಂದ್ರ ಪರಾತ್ಪರ
ಸುಂದರ ಜಗಪಿತ ನಂದ ಮಹೋದಧಿ
ಕಂದರ ನಾಯಕ ಸಿಂಧು ಶಯನ ಅರ-
ವಿಂದ ಸುನಾಭ ಮುಕುಂದ ಮುರಾರಿಯ ಅ.ಪ.

ವೇದಸುಗೋಚರ _ ಖೇದವಿವರ್ಜಿತ _ ಸಾದರನುತಿಪರ
ಮೋದಸುದಾಯಕ _ ಮೇದಿನಿವರಭವ _
ಖೇದವಿಮೋಚಕ
ಮಾಧವ ಗೀತಾ _ ಬೋಧಕ ವಿಧಿಗುರು ೧

ಅಕ್ಷರ ನಿಖಿಳಾ _ ಧ್ಯಕ್ಷ ನಿರಂಜನ _ ಪಕ್ಷಿ ಧ್ವಜ ಜಗ
ಕುಕ್ಷಿ ಪರಾಮೃತ _ ರಕ್ಷಿಸಿ ಜಗವಂ
ಭಕ್ಷಿಪಧೋಕ್ಷಜ _ ಸಾಕ್ಷಿ ನಿರಪೇಕ್ಷ ಸುಪಕ್ಷನ ೨

ಸತ್ಯಾಧಾರ ವಿಚಿತ್ರ ಗುಣಾರ್ಣವ _ ಸತ್ಯವ್ರತ ಪುರು
ಷೋತ್ತಮ ನಿರ್ಮಲ_ ಸತ್ಯವತೀಸುತ _ ನಿತ್ಯತೃಪ್ತ ಮ
ಹಾತ್ಮಜಗಾತತ _ ಭೂತಿದ ಹೃಸ್ಥನ ೩

ಸೋಮಕರಿಪು ಸುರಸ್ತೋಮ ಸಹಾಯಕ _
ಭೂಮಿಯ ವರಜಯ

ಕ್ಷೇಮದ ವಾಮನ _ ಭೀಮ ಪರಾಕ್ರಮ _
ಭೂಮಿಜೆನಾಥಸು
ಧಾಮಸಖಖಳಭ್ರಾಮಕ ಕಲ್ಕಿಯೆ ೪

ಶಿಷ್ಠ ಸುಪೋಷಕ _ ದುಷ್ಟವಿನಾಶಕ _
ತುಷ್ಠಿ ಮಾಯಾ ಪರ–
ಮೇಷ್ಠ ಜನಕ– ಶ್ರೀ ಕೃಷ್ಣವಿಠಲಪದ
ನಿಷ್ಠರ ಸೇರಿ ವಿಶಿಷ್ಠ ಸಮರ್ಪಿಸಿ ೫

## ೪೭

ವರದ ವೆಂಕಟ ಶ್ರೀನಿವಾಸ ಪ

ಕರುಣದಿ ಪಿಡಿಯೊ ಎನ್ನ ಶೇಷಗಿರೀಶಾ ಅ.ಪ.

ಘೋರ ಭವದಿ ನೊಂದೆನು ಇಂದು
ಪಾರುಗಾಣೆನೂ ಭಾರ ನಿನ್ನದು ಎಂದು
ಸಾರಿ ಬೇಡಿದೆ ನಿನಗೆ ಭಕ್ತಬಂಧು
ದೂರಮಾಡಲು ಬೇಡ ಕರುಣಾ ಸಿಂಧು
ವಾರಿಜಾಸನ ವಂದ್ಯ ನೀರಜನಯನನೆ
ಶರಣರ ಪೊರೆಯುವ ಸುರ ದ್ರುಮನೆ
ಪರಿಪರಿ ಭವಣೆಯ ತರಿಮಹಿದಾಸನೆ
ಚರಣ ಸೇವಕರ ಸೇವಕನೆನಿಸೊ ಶ್ರೀಶನೆ
ದುರುಳ ಅಸುರನ ಶಿರವ ತರಿದು
ತರಳ ಪ್ರಹ್ಲಾದನ ಪೊರೆದೆ ಎಂದು
ಸುರರು ಪೊಗಳವುದನ್ನು ತಿಳಿದು
ಭರದಿ ಬಂದು ಶಿರವ ನಮಿಸುವೆ ನಿಂದು ೧

ಸಿರಿ ಅಜಭವಾದಿ ವಂದಿತ ಚರಣ
ಪರಿಮಿತಿಯಿಲ್ಲದ ಗುಣ ಗಣ ಪೂರ್ಣ

ನೀರಜ ಭವಾಂಡೋದಯಕೆ ಕಾರಣ
ವೀರ ವೈಷ್ಣವರ ದುರಿತ ಹರಣ
ಕ್ರೂರಜನ ಕುಠಾರ ದೇವನೆ
ಗರುಡಗಮನ ಭೀಮರೂಪನೆ
ಅರಗಳೆಣಿಸದೆ ಪೊರೆಯಂ ಬೇಗನೆ
ಕರವ ಮುಗಿದು ಸಾರಿ ಬೇಡುವೆ
ಕರಿಯ ತೊಡರನು ತರಿದು ನಕ್ರನ
ಶಿರವ ಸೀಳಿದ ಕರುಣಿ ಕೃಷ್ಣನೆ
ಸೀರೆ ಪಾಲಿಸಿ ಪೊರೆದ ದಾತನೆ
ಮರಳಿ ಬರುವ ಭವವ ಬಿಡಿನೊ ರಂಗನೆ ೨

ನಂಬಿದವರ ಕಲ್ಪವೃಕ್ಷ
ನಂಬದವರ ಕಲುಷಕೆ ಶಿಕ್ಷಾ
ಇಂಬಾಗಿ ಸರ್ವತ್ರ ಸುಜನರ ರಕ್ಷಾ
ತುಂಬಿದ ವೈಭವದಿ ಮೆರೆಯೊ ದಕ್ಷಾ
ಕಂಬುಕಂಠನೆ ನಿನ್ನ ನಂಬಿದೆ
ಅಂಬರದಲಿ ಕಾಣೆಂದು ಬೇಡಿದೆ
ಬಿಂಬನ ನಾಮನುಡಿಸೆಂದು ಕೇಳಿದೆ
ಶಂಬರವೈರಿ ನಿನ್ನ ಚರಣವ ಸಾರಿದೆ
ಶಂಭುವಂದಿತ ತುಂಬುರ ಪ್ರಿಯ
ನಂಬಿ ಭಜಿಸುವೆ ತುಂಬು ಮನದೊಳು
ಅಂಬುಜಾಕ್ಷನೆ ಜಯತೀರ್ಥ ಮುನೀಂದ್ರ
ಬೆಂಬಲವಾಯುಗ ಶ್ರೀ ಕೃಷ್ಣವಿಠಲಾ ೩

## ೪೮

ವಿಶ್ವೇಶ ವೆಂಕಟೇಶ_ ವಿಶ್ವಾದಿ ಪರರೂಪಿ
ಶ್ರೀ ವಿಷ್ಣು ಪರಬ್ರಹ್ಮ_ನಮೋ ನಮೋ ಪ

ವಿಶ್ವಾತ್ಮ ಶ್ರೀಗುರು _ ವಿಶ್ವಾನ್ನ ಅನ್ನದ
ವಿಶ್ವಸ್ಥ ಶ್ರೀ ಕೃಷ್ಣ _ ನಮೋ ನಮೋ ಅ.ಪ

ಕೇಶವಾ ಮಾಧವಾ _ ಗೋವಿಂದ ಅಚ್ಯುತ
ವಾಸುದೇವಾನಂತ _ ನಾರಾಯಣಾ ೧

ಗೋಧರಾ ಶ್ರೀಕರಾ _ ಶ್ರೀಮತ್ಸ್ಯ ಕಚ್ಛಪ
ಶುದ್ಧಾನಂದಾತ್ಮಕ _ ನಾರಸಿಂಹ ೨

ಶ್ರೀಧರಾ ವಾಮನಾ _ ಪ್ರದುಮ್ನ ಹೃಷಿಕೇಶ
ಆದ್ಯಂತ ವರ್ಜಿತ _ ತ್ರಿವಿಕ್ರಮಾ ೩

ಭಾರ್ಗವಾ ರಾಘವಾ _ ಶ್ರೀ ಕೃಷ್ಣ ಉಪೇಂದ್ರ
ಯೋಗೇಶ ಬುದ್ಧಕಲ್ಕಿ ಜನಾರ್ದನ ೪

ಪದ್ಮಾಕ್ಷ ಪದ್ಮನಾಭ _ ಶ್ರೀ ಮಧುಸೂದನ
ಪದ್ಮೇಶ ಅನಿರುದ್ಧ _ ಸಂಕರ್ಷಣ ೫

ದಾಮೋದರಾ ದತ್ತ _ ಕಪಿಲ ಶಿಂಶುಮಾರ
ಭೂಮಾ ಅಧೋಕ್ಷಜ _ ಸೀಮಾಶೂನ್ಯ ೬

ಶ್ರೀ ವಿಷ್ಣುಹರಿಯಜ್ಞ _ ಧನ್ವಂತ್ರಿ ಮಹಿದಾಸ
ಶ್ರೀ ವಂದ್ಯ "ಕೃಷ್ಣವಿಠಲ" ಪಾರಾಶರ ೭

## ೪೯

ಶರಣು ಶರಣು ಕೃಷ್ಣಕೃಷ್ಣ ಶರಣು ಶರಣು ರಾಮ ರಾಮ
ಶರಣು ಶರಣು ಶ್ರೀನಿವಾಸ ಶರಣು ಶರಣು ಶ್ರೀ ಹರೇ ಪ

ಗುರುಸು ಭಕ್ತಿ ನೀಡಿ ಎನಗೆ ವರಿಸಿ ಶುದ್ಧ ದಾಸನೆಂದು
ಕರುಣ ತೋರೊ ಕೇಶವ ಅನಂತ ರೂಪಿಯೇ ಅ.ಪ

ಲೇಸಿನಿಂದ ಬ್ರಹ್ಮಶಿವರ ಪ್ರೇರಿಸುತ್ತ ಜಗವ ಪೊರೆವೆ
ದಾಸನೆಂದು ಮೊರೆಯ ಹೊಕ್ಕೆ ಕಾಯೊ ಕೇಶವಾ ೧

ವಾರಿನಿಲಯ ದೋಷದೂರ ಪೂರ್ಣಕಾಮ ಮುಕ್ತರೀಶ
ಪಾರರಹಿತ ಸುಗುಣ ಶರಧಿ ನಾರಾಯಣ ೨

ವೇದಮಾತೆ ಶೃತಿ ಸುಗೀತೆ ವೇದಮಾನಿ ಲಕ್ಷ್ಮಿರಮಣ
ಆದಿಮಧ್ಯ ಅಂತ್ಯ ಶೂನ್ಯ ಶರಣು ಮಾಧವ ೩

ವೇದವೇದ್ಯ ವೇದ ವಿನುತ ವೇದ ಸಾರ ವೇದಬಲ್ಲ
ಸಾಧು ಪ್ರಾಪ್ಯ ವೇದಪಾಲ ಶರಣು ಗೋವಿಂದ ೪

ವಿಶ್ವಜನಕ ವಿಶ್ವಪಾಲ ವಿಶ್ವವ್ಯಾಪ್ತ ವಿಶ್ವಭೋಕ್ತ
ವಿಶ್ವಜೂತಿ ವಿಶ್ವಬಲನೆ ಶರಣು ವಿಷ್ಣುವೆ ೫

ಆದಿ ದೈತ್ಯರನ್ನು ಕೊಂದು ಮೇದಿನೀಯ ಪೊರೆದ ದೇವ
ಬಾಧೆ ಹರಿಸು ಮೂರು ವಿಧಧ ಮಧುಸೂದನ ೬

ಲೋಕತ್ರಯವ ನಳೆದ ನೇಕ ಏಕನಿನಗೆ ಸಾಟಿಯಾರು
ಜೋಕೆಯಿಂದ ಸಾಕಬೇಕು ತ್ರಿ–ವಿಕ್ರಮ ೭

ಸೋಮ ಹಳಿದ ಕಾಂತಿಧಾಮ ನೇಮದಿಂದ ಬಲಿಯ ಕಾಯ್ದೆ
ಹೇಮ ಜ್ಯೋತಿ ಪೂರ್ಣ ಸುಖಿಯೆ ಶರಣು ವಾಮನ ೮

ಬೊಮ್ಮಶಿವರ ಕುಣಿಸಿ ಆಳ್ವ ಅಮ್ಮ ಪ್ರಕೃತಿಯನ್ನು ಧರಿಸಿ
ಸುಮ್ಮಗೇನೆ ಜಗವ ಕಾವೆ ಶರಣು ಶ್ರೀಧರ ೯

ಕರಣ ವ್ರಾತದಲ್ಲಿ ನಿಂತು ಕರಣಕಾರ್ಯಗಳನು ನಡಿಸಿ
ಕರಣ ಪತಿಗಳನ್ನು ಪೊರೆವೆ ಹೃಷಿಕೇಶನೆ ೧೦

ಉದರದಲ್ಲಿ ಜಗವ ಪೊತ್ತು ಸದರದಿಂದ ಒಪ್ಪಿಕೊಂಡೆ
ಉದರದಲ್ಲಿ ರಜ್ಜುಭಂಧ ದಾಮೋದರ ೧೧

ಚೊಕ್ಕವಿಧಿಯ ಹಾಗೆ ಜಗವ ಕುಕ್ಷಿಯಲ್ಲಿ ಪಡೆದ ದೇವ
ಅಕ್ಷರೇಡ್ಯ ಶರಧಿ ಶಯನ ಪದ್ಮನಾಭನೆ ೧೨

ಭಕ್ತಜನರ ಪಾಪಸೆಳೆವ ಶಕ್ತ ಪ್ರಲಯ ಸ್ತುತಿಗೈವ ದೇವ
ಮುಕ್ತಿದಾತ ವಿಶ್ವಕುಕ್ಷಿ ವಾಸುದೇವನೆ ೧೪

ಮೇರೆಯಿರದ ಕಾಂತಿಮಯನೆ ಸೇರಿ ಭಾಸ ಕೊಡುವೆ ರವಿಗೆ
ಬೀರಿ ಜ್ಞಾನ ಭ್ರಾಂತಿ ಹರಿಸು ಪ್ರ-ದ್ಯುಮ್ನನೆ ೧೫

ನೀ ನಿರೋಧ ಕಾಣೆ ಎಂದು ನೀನೆ ಸಿಗುವೆ ಭಕ್ತಿ ಬಲೆಗೆ
ನಾನು ಮೂಢ ಕೃಪಣ ಕ್ಷಮಿಸು ಅನಿ-ರುದ್ಧನೆ ೧೬

ಕ್ಷರರು ಜೀವ ರಾಶಿ ಎಲ್ಲಕ್ಷರ ವಿರುದ್ಧ ಲಕ್ಷ್ಮಿತಾನು
ವರನು ಭಿನ್ನ ಉಭಯರಿಂದ ಪುರುಷೋತ್ತಮ ೧೭

ಕರಣಗಳಿಗೆ ಸಿಗುವನಲ್ಲ ಕರಣಗಳಲಿ ಭೇದವಿಲ್ಲ
ಕರಣಜಯವ ಸಿದ್ಧಿಸೆನಗೆ ಅ-ಧೋಕ್ಷಜ ೧೮

ದೋಶರಹಿತ ಮುಕ್ತರೀಶ ನಾಶರಹಿತ ಲಕ್ಷ್ಮಿರಮಣ
ಈಶಬಿಂಬ ಜೀವ ಹೃಸ್ಥ ನಾರಸಿಂಹನೆ ೧೯

ಚ್ಯುತಿ ವಿದೂರ ಸತ್ಯಮಹಿಮ ಸತತ
ಜೀವರೊಡನೆ ವಿತತ(ಇರುವೆ)
ಸ್ತುತಿಸೆ ನಿನ್ನ ಶಕ್ತಿ ನೀಡೊ ಶರಣು ಅಚ್ಯುತ ೨೦

ಇಂದ್ರನನುಜ-ನಿಜಮಹೇಂದ್ರ ತಂದೆ ಸುಖವ-ದಿವಿಜಣಕೆ
ವಂದ್ಯ ವಂದ್ಯ-ವಂದಿಸುವೆನು ಶ್ರೀ- ಉಪೇಂದ್ರನೆ ೨೧

ಸೃಷ್ಟಿಗೈದು ಜಗವ ಲಯಿಪೆ ದುಷ್ಟದಮನ ಶಿಷ್ಟವರದ
ಹುಟ್ಟು ಸಾವು ಕಟ್ಟು ಬಿಡಿಸೊ ಶ್ರೀ ಜನಾರ್ದನ ೨೨

ಯಜ್ಞಭೋಕ್ತ ಮನುವ ಪೊರೆದೆ ಭಗ್ನಗೈಸಿ ದೋಷವೆನ್ನ
ಜ್ಞಾನ ನೀಡೋ ಸುಜ್ಞನೆನಿಸು ವಾಜಿವದನ ಶರಣು ಶ್ರೀಹರೇ ೨೩

ನಿತ್ಯಕೀರ್ತಿ ವಿಭವ ಮೂರ್ತಿ ಭಕ್ತಮನವ ಪಾಪ ಸೆಳಿವೆ
ರಿಕ್ತನಾನು ಸರ್ವವಿಧಧಿ ಕಾಯೊ ಶ್ರೀಕೃಷ್ಣ ೨೪

ಸರ್ವ ಶಬ್ದವಾಚ್ಯ "ಶ್ರೀಕೃಷ್ಣವಿಠಲ"ನನ್ನು ನೆನೆಯೆ
ಸರ್ವಸುಖಗಳಿತ್ತುಕಾವ ಜಿಷ್ಣು ತೆರದಿ ಸತ್ಯಹೋ ೨೫

## ೫೦

ಶರಣು ಹೋಗುವೆನಯ್ಯ ನಾನು ಪ

ಸಿರಿ ಅಜಭವ ಶಕ್ರ
ಸುರಸ್ತೋಮಗಳನೆಲ್ಲ
ಸರಸದಿಂದ ಆಳ್ವ
ಪರಮಪುರುಷ ಹರಿಗೆ
ಶಿರಬಾಗಿ ನಮಿಸುತ ಅ.ಪ.

ನಿರುತ ಆನಂದದಿ
ಮೆರೆದು ಇರುವಂಥ
ನಿರಜ ನಿತ್ಯನು ಆದ
ಉರಗನ ಮೇಲ್ವರಗುತ
ಪರಮ ಪರಾತ್ಪರ
ಪರಮವೇದದ ಸಾರ
ಪರಮ ಸದ್ಗುಣ ಪೂರ್ಣ
ಪುರುಷಸೂಕ್ತ ವಂದ್ಯ
ಪರಿಪರಿ ರೂಪದಿ
ಸರ್ವತ್ರ ಇರುವಂಥ
ನಿರ್ಗುಣ ನಿರಾಕಾರ

ನಿರುಪಮ ನಿಸ್ಸೀಮ
ನಿರುತ ತೃಪ್ತನು ಆದ
ಸರ್ವಸಾರ ಭೋಕ್ತ
ಸರ್ವರ ಬಿಂಬನು
ಸರ್ವಗುಣ ಪೂರ್ಣ
ಸರ್ವರ ಆಧಾರ
ಸರ್ವೇಶ ಸ್ವತಂತ್ರ
ಸರ್ವಶಬ್ದ ವಾಚ್ಯ
ಸರ್ವರಿಂ ಭಿನ್ನನು
ಸರಸಸೃಷ್ಟಿಯ ಮಾಳ್ವ
ನೀರಜನಾಭಗೆ
ಚರಣವ ಪಿಡಿಯುತ್ತ
ಉರುಗಾಯನ ದೇವ
ಸಲಹು ಸಲಹೆಂದು ೧

ವಾರಿಯೊಳಾಡುವ
ಭಾರವಹೊರುವ
ಕೋರೆಯತೀಡುವ
ಕರುಳಾನು ಬಗೆಯುವ
ವರವಟು ಆಗುವ
ಪರಶುವ ಪಿಡಿಯುವ
ನಾರಿಯ ಹುಡುಕುವ
ನಾರಿಯ ಕದಿಯುವ
ಬರಿಮೈಯ್ಯ ತೋರುವ
ತುರುಗವನೇರುವ
ನಾರಿಯು ಆದವ
ಭಾರತ ಮಾಡುವ
ವರ ಸಾಂಖ್ಯ ಹೇಳುವ
ಕರಿಯನು ಪೊರೆಯುವ

ಪೋರಗೆ ಒಲಿದವ
ವರ ಋಷಭನಾದ
ಹರಿ ಯಜ್ಞನಾದವ
ತರಿವ ರೋಗಂಗಳ
ವರಹಂಸ ರೂಪನು
ತುರುಗ ವೇಷಧಾರಿ
ನಾರಾಯಣ ಮುನಿಯೆ
ಗುರು ದತ್ತಾತ್ರೇಯನೆ
ಪರಿಸರ ಪರಮಾಪ್ತ
ಪೊರೆಯೊ ಮಹಿದಾಸನೆಂದು
ಕರವೆತ್ತಿ ಮುಗಿಯುತ ೨

ಪಾಪಿಯ ಪೊರೆದವಗೆ
ತಾಪ ಇಲ್ಲದವಗೆ
ಅಪವರ್ಗದಾತಗೆ
ವಿಪನ ಏರಿದವಗೆ
ಗೋಪತಿಯಾದವಗೆ
ತಾಪವ ಮೆದ್ದವಗೆ
ಚಾಪವ ಮುರಿದವಗೆ
ಚಪಲ ಇಲ್ಲ ದವಗೆ
ಕಪಟರ ವೈರಿಗೆ
ಗುಪ್ತದಿ ಇರುವಗೆ
ವಿಪ್ರನ ಸಖನಿಗೆ
ಅಪ್ರಮೇಯನಿಗೆ
ಗೋಪೇರ ವಿಟನಿಗೆ
ತಾಪಸ ಪ್ರೀಯಗೆ
ವಿಪ್ರಶಿಶು ತಂದವಗೆ
ಮುಪ್ಪಿಲ್ಲ ದವಗೆ
ತ್ರಿಪುರಾರಿ ಸಖಗೆ

ಕೃಪಣ ವತ್ಸಲನಿಗೆ
ತಪ್ಪು ಮಾಡದವಗೆ
ಆಪ್ತತಮನಿಗೆ
ಸಪ್ತ ಶಿವವ್ಯಕ್ತನಿಗೆ
ಶ್ರೀಪತಿಯಾದವಗೆ
ಕಪಟನಾಟಕ ಪ್ರಭು
ಗೋಪಾಲಕೃಷ್ಣಗೆ
ಒಪ್ಪಿಸಿ ಸರ್ವಸ್ವ
ಅಪ್ಪನೆ ಅಪ್ಪನೆ
ತಪ್ಪದೆ ಸಲಹೆಂದು



ಅನ್ನವು ಆದವಗೆ
ಅನ್ನಾದ ನೆಂಬುವಗೆ
ಅನ್ನದ ಖ್ಯಾತನಿಗೆ
ಚಿನ್ಮಯ ರೂಪಗೆ
ಬೆಣ್ಣೆಯ ಕಳ್ಳಗೆ
ಅನಾಥನಾದವಗೆ
ಕನಕಮಯನಿಗೆ
ಅನಂತರೂಪನಿಗೆ
ಉಣ್ಣದೆ ಇರುವವಗೆ
ಉಣ್ಣುತ ಉಣಿಸುವವಗೆ
ಜ್ಞಾನಿಗಮ್ಯನಿಗೆ
ಜ್ಞಾನ ದಾಯಕನಿಗೆ
ಗುಣತ್ರಯ ದೂರಗೆ
ಭಾನುವ ತಡೆದವಗೆ
ಆನತ ಬಂಧುವಿಗೆ
ಅನುಪಮನಾದವಗೆ
ತನುಮನ ಪ್ರೇರಿಪಗೆ
ದಾನವ ವೈರಿಗೆ

ತನ್ನಲ್ಲೆ ರಮಿಸುವನಿಗೆ
ಮನ್ಮಥ ಪಿತನಿಗೆ
ಪೆಣ್ಣಿನ ಪೊರೆದವಗೆ
ಅಣುವಿಗೆ ಅಣುವಿಹಗೆ
ಘನಕೆ ಘನ ತಮನಿಗೆ
ಕಣ್ಣಿಲ್ಲದೆ ನೋಳ್ಪ
ಉನ್ನತ ಪ್ರಭುವಿಗೆ
ಬೆನ್ನು ಬೀಳುವೆ ನಾನು
ಇನ್ನು ಕಾಯೋ ಎಂದು ೪

ಹೇಯನಾಗದ ಶೃತಿ
ಗೇಯನು ಸುಜನರ
ಪ್ರೀಯನು ಸರ್ವರ
ಕಾಯುವ ಸುಂದರ
ಹಯಮುಖ ಸರ್ವದ
ಪ್ರಾಯದಿ ಮೆರೆಯುವ
ಗಾಯನ ಪ್ರಿಯನಾದ
ಮಾಯಾರಮಣ ಭಾವ
ಮಾಯೆ ಹರಿಸಿ ಮುಕ್ತಿ
ಭಾಗ್ಯ ಭಕ್ತರಿಗೀವ
ತೋಯಜಾಂಬಕ ಸುರ
ನಾಯಕರಿಗೆ ಭಕ್ತಿ
ತೋಯದಿ ಮುಳುಗಿಪ
ಶ್ರೀಯರಸಾಭಯ
ದಾಯಕ ಗುರು ಮಧ್ವ
ರಾಯರ ಪ್ರಿಯನಾದ
ಜೇಯ ಜಯಮುನಿ
ವಾಯುವಿನ ಅಂತರದಿ
ನವನೀತ ಧರಿಸಿರ್ಪ

ತಾಂಡವ ಸಿರಿಕೃಷ್ಣ
ವಿಠಲ ರಾಯನಿಗೆ
ಕಾಯ ವಾಚಮನದಿ
ಗೈಯ್ಯುವ ಸಕಲವನು
ಈಯುತ ನಮಿಸುತ
ಜೀಯನೆ ಜೀಯನೆ
ಕಾಯಯ್ಯ ಕಾಯೆಂದು ೫

## ೫೧

ಶ್ರೀನಿವಾಸ–ಶ್ರೀನಿವಾಸ–ಶ್ರೀನಿವಾಸ ಪ

ಶ್ರೀನಿವಾಸ ನಾನಿಹೆ ನಿನ್ನ ದಾಸ–ನಿನ್ನ ದಾಸ ನಿನ್ನದಾಸ ಅ.ಪ.

ಶ್ರೀನಿವಾಸ, ಲಕ್ಷ್ಮೀ ನಿವಾಸ, ಜಗದೊಳುವಾಸ, ನಿರುಪಮ
ಈಶ, ತರಿಯುವೆ ಕ್ಲೇಶಾ
ನಿರ್ಗತದೋಷ, ದಾನವನಾಶ, ಸೃಷ್ಠಿವಿಲಾಸ,
ಕೊಡುಲೇಶ, ಕೊಡುಲೇಶ
ತಡೆಯಲಿಬೇಡ, ಬಿಡುಬಿಢೆಮಾಯ, ಪೊಡವಿಗೆ
ಜೀಯ, ಸಡಗರ ದೈವ
ಬಡವನು ನಾನು ಕೊಡುವುದು ಏನು, ಅಡಿಗಳನೀಡು,
ಇಡುವೆನು ಮೌಳಿ, ಇಡುವೆನು ಮೌಳಿ
ಘನಸುಖದಾತ, ಚಿನ್ಮಯಗಾತ್ರ, ವನರುಹ ನೇತ್ರ, ಅನಿಲನಸೂತ್ರ
ಮುನಿನುತ ಪಾತ್ರ, ಗುಣಗಣವ್ರಾತ, ಅನುದಿನ ಪ್ರೀತ,
ತನುಮನನಾಥ ತನುಮನನಾಥ
ಇಂದಿರೆಯರಸ, ಚಂದ್ರನ ಹಳಿವ, ಸುಂದರರೂಪ,
ಕುಂದುಗಳಳಿದು,
ಬಂಧನ ಬಿಡಿಸೊ, ಮಂದರಧಾರಿ, ನೊಂದೆನೊ ಭವದಿ,
ಕಂದನ ಸಲಹೋ ಕಂದನ ಸಲಹೋ ೧

ವೇದವ್ಯಾಸ, ವಾದಾಗಾರ, ಬೋಧಿಸಿವಿದ್ಯೆ ಸಾಧನೆಗೈಸೋ
ಮಾಧವ ಶರಣು ಸಾಧುಸುಸಂಗ ಸಾಧಾರದೀಯೋ
ವೇಧನ ತಂದೆ ವೇಧನತಂದೆ
ವೇದವ ತಂದು ವೇಧನಿಗಿತ್ತೆ, ಪಾದದಿ ಬಿದ್ದರು
ಸೋದರ ಪ್ರಜೆಗಳು
ಸಾಧಿಸಿ ಸುಧೆಯ, ಮೋದದಿ ಪೊರೆದೆ, ಶೋಧಿಸಿ
ದೈತ್ಯರ, ಖೇದವನೀಡ್ಡೆ ಖೇದವನೀಡ್ಡೆ
ಧೀರವರಾಹ, ಯಾಗಶರೀರ, ಬಹುಗಂಭೀರ ಶೃತಿಗಳಸಾರ
ಕರುಣ ಅಪಾರ, ಸುರಪರಿವಾರ, ವಿಶ್ವಾಧಾರ,
ಸಾರಕೆ ಸಾರ ಸಾರಕೆ ಸಾರ
ನಾರಿಯ ತಂದೆ, ಕ್ರೂರನಕೊಂದೆ, ಘೋರನು ಆದೆ,
ಕಂಭದಿಬಂದೆ
ಭಯವನು ತಂದೆ, ದೈತ್ಯನ ಕೊಂದೆ, ನಂದವ ತಂದೆ,
ಕಂದನ ಪೊರೆದೆ ಕಂದನ ಪೊರೆದೆ ೨

ಅದಿತಿಯಕಂದ, ವಾಮನ ಛಂದ, ಯಾಗಕೆ ಬಂದ,
ಬಲಿಯೆಡೆನಿಂದ
ಬೇಡುವೆನೆಂದ ಬೇಡುವೆನೆಂದ ಮೂರಡಿಯಿಂದ ಬೆಳೆಯುತ
ಬಂದ ಬೆಳೆಯುತ ಬಂದ ಭೂಮಿಯು ಮುಗಿಯೆ
ಗಗನವು ಮುಗಿಯೆ, ಬಲಿಕೈಮುಗಿಯೆ,
ಶಿರವನ್ನೀಯೆ, ಭಕ್ತನಕಾಯೆ,
ಅಭಯವನೀಯೆ, ಹರಿಸುತಮಾಯೆ,
ಬಾಗಿಲಕಾಯ್ದೆ, ಬಾಗಿಲಕಾಯ್ದೆ
ವರಮುನಿಕುವರ, ಪರಶುವಪಿಡಿದ, ಧೊರೆಗಳ ತಂದ,
ವಿಪ್ರರ ಪೊರೆದ,
ಚಕ್ರನ ಗರ್ವ, ಮುರಿದನು ಶೂರ, ಸುರಮುಖದಿರುವ,
ವರಸಮರಿಲ್ಲ ವರಸಮರಿಲ್ಲ
ಭಾರ್ಗವರಾಮ, ಋಷಿಗಣಸ್ತೋಮ, ದೈತ್ಯವಿರಾಮ,
ಸತ್‌ಜನಪ್ರೇಮ,

ದೇವಲಲಾಮ, ಆತ್ಮಾರಾಮ, ಕ್ಷೇಮಸುಧಾಮ,
ಮಂಗಳ ನಾಮ ಮಂಗಳನಾಮ ೩

ತಾರಕನಾಮ, ಕಲಿಗಿವ ಭೀಮ, ದಶರಥರಾಮ, ಸೀತಾರಾಮ
ಮೋಹನರಾಮ, ಹನುಮನಕಾಮ, ಇಲ್ಲವುಸೀಮಾ,
ಜಯಜಯರಾಮ ಜಯಜಯರಾಮ
ಲಕ್ಷ್ಮಣನಣ್ಣ, ಸಗುಣಸಂಪನ್ನ, ಜಗಕಿವ ಅನ್ನ, ಬಿಡಬಿಡಬೆನ್ನ
ಪ್ರಾಣನೆ ಅನ್ನ, ಕೇವಲನಣ್ಣ, ರವಿಶಶಿಕಣ್ಣ, ಸಿದ್ಧವಿದಣ್ಣ
ಯೋಗಿಯಕೂಡಿ, ಹೋಗುತ ಬೇಗ, ನೀಗಿಸಿ ಬಾಧೆ,
ಆಗಿಸಿ ಯಾಗ,
ಹೋಗಿಸಿಶಾಪ, ಬಾಗಿಸಿ ಬಿಲ್ಲು, ಆಗಲು ಮದುವೆ,
ಸಾಗುತ ಬಂದ ಸಾಗುತ ಬಂದ
ತಂದೆಯ ವರವ, ಛಂದದಿನಡಿಸಿ, ಪೊಂದುತಲಡವಿ,
ಕೊಂದನು ಖಳರ,
ಮಂದರ ಮೋಹಿಸೆ, ಇಂದಿರೆಯಗಲಿದಂದದಿ ತೋರಿ,
ಮುಂದಕೆ ನಡೆದ ೪

ವಾಲಿಯ ಕುಟ್ಟಿ, ಸೇತುವೆ ಕಟ್ಟಿ, ಲಂಕೆಯ
ಮುಟ್ಟಿ, ಕಳ್ಳನ ಮೆಟ್ಟಿ
ಭಕ್ತಗೆಪಟ್ಟ ವಲಿಯುತ ಕಟ್ಟಿ, ತಿರುಗುತ ದಿಟ್ಟ,
ರಾಜ್ಯವಕೊಟ್ಟ ಜಗಜ್ಜಟ್ಟಿಜಗಜ್ಜಟ್ಟಿ
ನಿಜ ದೊರೆ ಇವನೆ ಅಜಪಿತನಿವನೆ, ಅಜರನು ಇವನೆ,
ನಿಜಮುನಿಇವನೆ, ನಿಜವಿಧಿ ಇವನೆ,
ನಿಜಶಿವನಿವನೆ, ನಿಜಕ್ರತುಇವನೆ, ಅಜಿತನು ಇವನೆ,
ಸರ್ವೇಶ, ಸರ್ವೇಶ
ದೇವಕಿಕಂದ, ಗೋಪಿಯನಂದ, ಪೂತಣಿಕೊಂದ,
ಬೆಣ್ಣೆಯ ತಿಂದ
ಕುಣಿವುದು ಛಂದ, ಬಹು ಛಂದ, ಬಹು ಛಂದ,
ಪೋರನು ಎನಿಸಿ, ಚೋರನು ಎನಿಸಿ

ಜಾರನು ಎನಿಸಿ, ಮಾರನು ಎನಿಸಿ, ವೀರನು
ಎನಿಸಿ, ಕ್ರೂರನು ಎನಿಸಿ,
ನಾರೇರ ವರಿಸಿ, ಭೂರಿದನೆನಿಸಿ, ಲೀಲೆಯ ತೋರ್ದ ೫

ಕಂಸನ ಕೊಂದೆ, ಗುರವಡಿ ನಿಂದೆ, ಕಂದನ ತಂದೆ,
ಊರಿಗೆ ಬಂದೆ,
ಜರೆಸುತ ಬಂದು, ಬಹುಮಡಿನೊಂದು, ಮರಳಿಯು ಬಂದು
ಕದನಕೆ ನಿಂದ, ಬಲುಭಂಢ, ಬಲುಭಂಢ ರಾತ್ರಿಯಲೊಂದು
ಚತುರನು ಹರಿಯು, ದ್ವಾರಕೆಗೈದು, ಪ್ರಜೆಗಳಮುಂದು,
ಸಾಗಿಸಿ ಬಂದು,
ಶೃಗಾಲನ ಮುರಿದು, ಓಡುತನಡೆದು, ಗುಹೆಯನು
ಪೊಕ್ಕೂ, ತಾಮುಕುಂದ ತಾಮುಕುಂದ,
ಭೃಷ್ಮೆಯ ನಾಥ, ಪಾಂಡವ ದೂತ, ಪಾರ್ಥನ
ಸೂತ, ಜಗವಿಖ್ಯಾತ
ಬೋಧಿಸಿ ಗೀತ, ತೋರುವ ಆತ್ಮ, ಕೌರವ ವ್ರಾತ,
ಕೊಲ್ಲಿಸಿದಾತ ಸರ್ವಸಮರ್ಥ, ಸರ್ವಸಮರ್ಥ
ಗುಣಗುಣಿ ಭೇದ, ಅವಯವ ಭೇದ, ಉದರಗ ಭೇದ,
ಕಾಲದಿ ಭೇದ
ದೇಶದಿ ಭೇದ, ಮೂಲಾಂಶ ಭೇದ ಇಲ್ಲವು ಎಂದು,
ಇಲ್ಲವು ಎಂದು
ವಿಭುಶರಣೆಂಬೆ, ವಿಭುಶರಣೆಂಬೆ ೬

ಸುಜನರ ಬಂಧು, ಉತ್ತಮ ಬುದ್ಧ, ಬತ್ತಲೆನಿಂದು,
ವೇದಸುವೃಂದ,
ಸಂಶಯವೆಂದು, ಕುಜನರ ಮನಕೆ, ತವಕದಿತಂದು,
ತ್ರಿಪುರರಕೊಂದ,
ಬಲು ಪ್ರೌಢ, ಬಲು ಪ್ರೌಢ, ತನ್ನನು ಬಲ್ಲ, ಅನ್ಯರ
ಬಲ್ಲ, ಎಲ್ಲವ ಬಲ್ಲ
ನಿತ್ಯವಿದೆಲ್ಲ, ತಿಳಿದವರಿಲ್ಲ, ಸಾರಿಸಾಕಲ್ಯ ಜಗವನೆಲ್ಲ, ಬಿಗಿದಿಹನಲ್ಲ,
ನಾಮದಿನಲ್ಲ, ನಾಮದಿನಲ್ಲ, ಆದಿಯು ಇಲ್ಲ, ಮಧ್ಯವು ಇಲ್ಲ,

ಕೊನೆತಾನಿಲ್ಲ, ಖೇದವು ಇಲ್ಲ, ಮೋದವೆ ಎಲ್ಲ, ಭಗನಿಹನಲ್ಲ
ಅಪಜಯವಿಲ್ಲ, ಶ್ರೀಗಿವನಲ್ಲ, ಅಪ್ರತಿಮಲ್ಲ, ಪ್ರಕೃತಿಯು ಅಲ್ಲ,
ಜೀವನು ಅಲ್ಲ, ಜಡವೂ ಅಲ್ಲ, ಕಾಲವು ಅಲ್ಲ,
ಸ್ವಾಮಿಯು ಇಲ್ಲ, ತಾನೇ ಎಲ್ಲ
ಪ್ರೇರಿಪನೆಲ್ಲ, ಭಿನ್ನನು ನಲ್ಲ, ಸರ್ವೋತ್ಕೃಷ್ಟ ೭

ಕಲಿಯುಗ ಮುಗಿಯೆ, ಧರ್ಮವು ಮುಳುಗೆ,
ಕುಜನರ ಮುರಿಯೆ,
ಸುಜನರ ಪೊರೆಯೆ, ತೇಜಿಯನೇರಿ, ಕಲ್ಕಿಯು
ಎನಿಸಿ, ಧರ್ಮವನುಳುಹಿ,
ಭಕ್ತರಿಗೊಲಿದು, ಪೊರೆವುದು ಸತ್ಯ, ಪೊರೆವುದು ಸತ್ಯ,
ಸತ್ಯರ ಸತ್ಯ, ಸಂತರ ಮಿತ್ರ, ಪರಮ ಪವಿತ್ರ, ಲೋಕವಿಚಿತ್ರ
ಸುಖಚಾರಿತ್ರ, ಮಂಗಳಗಾತ್ರ, ನಿಖಿಳಸುಭರ್ತ, ಭಕ್ತರ ಭೃತ್ಯ
ನತ ಜನಪಾಲ, ವೇದಗಳೆಲ್ಲ, ಶಬ್ದಗಳೆಲ್ಲ, ಘೋಷಗಳೆಲ್ಲ
ನಾಮಗಳೆಲ್ಲ, ಇವನನೆ ಎಲ್ಲ, ಪೊಗಳುವವಲ್ಲ, ಮುಕ್ತರಿಗೆಲ್ಲ,
ಇವನೇನಲ್ಲ, ಅದ್ಭುತಮಹಿಮ, ಅದ್ಭುತಮಹಿಮ,
ಪ್ರಕೃತಿಯ ಸತ್ತಾ,
ಜೀವರ ಸತ್ತಾ, ಜಡಗಳಸತ್ತಾ ಬಗೆ ಬಗೆ ಸತ್ತಾ,
ಸಕಲವ ನೀತ, ನೀಡುವ ದಾತ,
ಸರ್ವಸುವ್ಯಾಪ್ತ, ಸರ್ವಸ್ವತಂತ್ರ ೮

ವೇದವ್ಯಾಸ, ಬದರೀನಿವಾಸ, ವೇದಸ ಪೀಠ, ಸಾಧಿಸುವಂತ್ಯ
ಮೋದಕವೀಂದ್ರ, ಮಧ್ವನಪೋಷ, ಆದರವೀಯೊ ಪಾದಗಳಲ್ಲಿ
ಮಧ್ವರಗುರುವೆ, ಮಧ್ವರ ಗುರುವೆ, ಮೇದಿನಿಯೊಳಗೆ,
ವೇದಗಳಳಿಯೆ,
ಮೇದಿನಿಸುರರ ಖೇದವು ಬೆಳೆಯೆ, ಆದರದಿಂದ
ವಿಧಿ ಮುಖಸುರರು,
ಭೇದಿಸಿಕತ್ತಲೆ ಮೋದವನೀಡೆ, ಪಿಡಿದರು ಪಾದ,
ಪಿಡಿದರು ಪಾದ

ಶೋಧಿಸಿ ವೇದ, ವೇದ ವಿಭಾಗ, ಮಾಧವ
ನೀನು ಮೇದಿನಿಗಿತ್ತೆ
ವೇದಸುಮರ್ಮ, ಬೋಧಿಸೆ ಸೂತ್ರ ಗೈದ ಮಹೇಶ,
ವೇದಕುಮಿಗಿಲು, ಭಾರತಕರ್ತ, ಭಾರತ ಕರ್ತ
ನಿತ್ಯಾಹೇಯ, ಸಾತ್ವವತೇಯ ಶ್ರೀವಿಧಿಗೇಯ,
ಛಂದದಸುಕಾಯ
ನಾ ನಿರುಪಾಯ ನಾಗಿಹೆ ಜೀಯ, ಭಾರತಪೇಯ
ಕುಡಿಸೈ ಜೀಯ
ಹರಿಸುತಮಾಯ, ಹರಿಸುತಮಾಯ, ಹರಿಸುತಮಾಯ ೯

ಶ್ರೀ ಇಹವಕ್ಷ, ಜ್ಞಾನಸುಪಕ್ಷ, ಸರ್ವಾಧ್ಯಕ್ಷ, ದಿವಿಜರಪಕ್ಷ
ಬೃಹತೀಭಕ್ಷ, ತಾನಿರಪೇಕ್ಷ, ಆಶ್ರಿತರಕ್ಷ, ಕರುಣ ಕಟಾಕ್ಷ,
ಕರುಣಿಸು ರಕ್ಷ, ನೀಜಗರಕ್ಷ, ಅಜಗರ ಶೈಯ್ಯ, ಮನ್ಮಥನಯ್ಯ
ಬೇಡವೆನಯ್ಯ, ಬಿಡದಿರುಕೈಯ್ಯ,
ಭವಬಿಡಿಸಯ್ಯ, ಭಯಹರಿಸಯ್ಯ
ಭಕ್ತಿಯೆ ಧ್ಯೇಯ, ಸತ್ಯವಿದ್ಯೆಯ, ದಯಮಾಡಯ್ಯ,
ದಯಮಾಡಯ್ಯ
ಪೊರೆಮಹಿದಾಸ, ನಿಖಿಳರ ಭಾಸ, ವಾರಿನಿವಾಸ,
ಶರಣುಪರೇಶ
ಇಚ್ಛೆ ಅನೀಶಾ, ಕಳೆಕಳೆ ಆಶಾ, ಕಡಿಕಡಿಪಾಶಾ, ನಾಬಡದಾಸ,
ನೀಹೃಷೀಕೇಶ, ನೀಹೃಷೀಕೇಶ, ವಿಶ್ವನೆಶರಣು, ತೈಜಸ ಶರಣು,
ಪ್ರಾಜ್ಞನೆ ಶರಣು, ತುರ್ಯನೆ ಶರಣು, ಕಪಿಲನೆ ಶರಣು
ಋಷಭನೆ ಶರಣು, ದತ್ತನೆಶರಣು, ಹಯಮುಖಶರಣು
ಶರಣು ಅನಂತ, ಶರಣು ಅನಂತ ೧೦

ವೆಂಕಟರಮಣ, ಕಿಂಕರನಾನು, ಸಂಕಟಹರಿನೊ ಶಂಕರತಾತ
ಬಿಂಕವ ತೋರಿಯೋ, ಮಂಕನು ನಾನು, ಡೊಂಕನು
ತಿದ್ದೊ, ಪಂಕಜನಯನ
ಶಂಕೆಯ ಬಿಡಿಸಿ, ಶಂಕೆಯ ಬಿಡಿಸಿ, ದೊಡ್ಡವ ನೀನು,
ದಡ್ಡನು ನಾನು

ದುಡ್ಡೇನಿಲ್ಲ, ವಡ್ಡಿಪೆ ಮನವ ಅಡ್ಡಿಯು ಏನೊ ವಡ್ಡಲು
ಭಕ್ತಿಗಡ್ಡೆಗೆಸೇರಿಸು ಪ್ರಾಣನ ಆಣೆ ರಾಜರ ಆಣೆ
ಜಯಮುನಿ ಆಣೆ, ಗುರುಗಳ ಆಣೆ,
ಉರಗಾದ್ರಿವಾಸ, ಪದ್ಮಜಳೀಶ, ಪರಿಸುತ ದೋಷ,
ಚರಣದಿವಾಸ, ನಿರುತಲೀಯೊ, ಕರುಣವ ಸುರಿಸಿ,
ಮರುತನ ಮತದ
ಅರುಹುತಲೆನಗೆ, ಸಂತತ ವೆಂಬೆ, ಸಂತತವೆಂಬೆ, ಸಂತತವೆಂಬೆ
ಇಂದಿರೇಶನ ದಾಸರ ನಮಿಪೆ, ಕಂದನ ಪದವಿದು
ನಂದದಿ ಪಠಿಸೆ
ನಂದವು ಶಾಶ್ವತ, ಜಯಮುನಿಪ್ರಸ್ಥ, ಮಧ್ಯರಮೇಶ
ಶ್ರೀಕೃಷ್ಣವಿಠಲ ವಲಿಯುವ ಸಿದ್ಧ, ವಲಿಯುವ ಸಿದ್ಧ ೧೧

## ೫೨

ಸೂರ್ಯಾಂತರ್ಗತ ಹರಿ ನಮೋ ನಮೋ
ವೀರ್ಯಾದಿಗಳದಾತ ನಮೋ ನಮೋ ಜಗಬಿಂಬ ಪ

ತೋಯಜಾಕ್ಷನ ವಿಷ್ಣು ನಮೋನಮೋ
ಜೀಯ ಪಾಲಿಸುದೇವ ನಮೋನಮೋ ಮಮಬಿಂಬ ಅ.ಪ

ಆನಂದ ಪರಿಪೂರ್ಣ ನಮೋನಮೋ
ಏನೆಂಬೆ ಪರಮೋಚ್ಚ ನಮೋನಮೋ
ಶ್ರೀನಾಥ ಸಿರಿಪೂರ್ಣ ನಮೋನಮೋ
ಏನೆಂಬೆ ಪರದೋಚ್ಚ ನಮೋನಮೋ
ಶ್ರೀನಾಥ ಸಿರಿಪೂರ್ಣ ನಮೋನಮೋ
ನೀನಾಯಕ ಸ್ವತಂತ್ರ ನಮೋನಮೋ ಜಗಜೂತಿ ೧

ನಾಲ್ಕರು ನಿಜರೂಪಿ ನಮೋನಮೋ
ಕಾಲಾದಿಗಳ ನಾಳು ನಮೋನಮೋ
ಏಳೆರಡು ಜಗಪಾಲ ನಮೋನಮೋ
ಪಾಲಾಬ್ಧಿಶಯನ ಏಕ ನಮೋ ನಮೋ ಕೇವಲನೆ ೨

ಸರ್ವಾಂಗಬರ್ಹಿವ್ಯಾಪ್ತ ನಮೋನಮೋ
ಸರ್ವಾಶ್ರಯನೆಗೋಜ ನಮೋನಮೋ
ದೇವಾದಿದೇವ ವಿಭು ನಮೋನಮೋ
ಸರ್ವೇಂದ್ರಿಯಂಗಳ ಪ್ರೇರಿಸೈ ಋಜುಮಾರ್ಗದಲಿ ೩

ಸರ್ವದೋಷವಿದೂರ ನಮೋ ನಮೋ
ಸರ್ವಸುಗುಣ ಪರಿಪೂರ್ಣ ನಮೋನಮೋ
ಜೀವ ಜಗದಿಂದ ಬಿನ್ನ ನಮೋ ನಮೋ
ಶ್ರೀ ವಿಧೀರ ಪರಿಪಾಲ ನಿಸ್ಸೀಮ ೪

ಸೃಷ್ಟ್ಯಾದ್ಯಷ್ಟಕರ್ತ ನಮೋನಮೋ
ತುಷ್ಟಿ ಪುಷ್ಟಿಯ ನೀಡು ನಮೋನಮೋ
ಶ್ರೇಷ್ಟ ಶ್ರೀಕೃಷ್ಣ ವಿಠಲ ನಮೋನಮೋ
ದೃಷ್ಟಿ ಬೀರುತ ಬೇಗ ಕಾಣಿಸೈ ತವರೂಪಮೋಕ್ಷದನೆ ೫

## ೫೩

ಹಂಸವಾಹನಪಿತನೆ _ ಹಂಸಾ ಢಿಭಿಕವೈರಿ
ಕಂಸಮರ್ದನ ಶೌರಿ _ ಬಾ ಬಾ ಬಾ ಪ

ಸಾಸಿರನಾಮದೊಡೆಯ
ವಾಸವವಿನುತನೆ
ಲೇಸಾಗಿಸ್ತುತಿಸುವೆ _ಬಾ ಬಾ ಬಾ ಅ

ವೇದಾವಕದ್ದಂಥ
ಉದ್ದಂಡ ದೈತ್ಯನ
ಮರ್ಧಿಸಿ ವೇದವ ತಂದು
ವೇಧನ ಸಲಹಿದ
ಮುದ್ದು ಮೂರುತಿ ಮತ್ಸ್ಯ ಬಾ ಬಾ ಬಾ ೧

ಸಿಂಧು ವಿನೊಳಗಿದ್ದ
ಮಂದರಗಿರಿಯನ್ನು
ಬಂದು ಬೆನ್ನಿಲಿಪೊತ್ತು
ತಂದು ಪೀಯೂಷವ
ಚಂದದಿ ಸಲಹಿದ
ಕೂರ್ಮಸ್ವರೂಪನೆ _ ಬಾ ಬಾ ಬಾ ೨

ಕನಕನೇತ್ರನ ಕೊಂದು
ಕಾಂತೆಯಹಿಡಿದೆತ್ತಿ
ಕನಕಗರ್ಭನಿಗೊಲಿದ
ಕಾರುಣ್ಯನಿಧಿಚಂದ್ರ
ಕನಕವರ್ಣದ ಕ್ರೋಢ ಯಜ್ಞ ಸ್ವರೂಪನೆ _ ಬಾ ಬಾ ಬಾ ೩

ತರುಳನಮೊರೆಕೇಳಿ
ದುರುಳನ ಕರುಳನೆ ಬಗೆದು
ಕೊರಳೊಳು ಕರುಳ ಧರಿಸಿ
ಸುರರನ್ನು ಪೊರೆದಂಥ
ಸರ್ವವ್ಯಾಪಿ ಕರುಣಿಯೆ
ನಾರಸಿಂಹ ಮೂರ್ತಿ _ ಬಾ ಬಾ ಬಾ ೪

ಅನುಜನ ಪೊರೆಯಲು
ತನುವನು ಮರೆಸಿಕೊಂಡು
ದಾನವನು ಬೇಡುತ ಬಲಿ
ಯನು ತುಳಿದು ಪೊರೆದ
ಘನ್ನ ಮಹಿಮ ವಟು ವಾ
ಮನ ರೂಪಿಯೆ _ ಬಾ ಬಾ ಬಾ ೫

ಕೊಡಲಿಯ ಪಿಡಿಯುತ
ಒಡೆಯರ ತರಿದು
ಕಡಿದು ಮಾತೆಯ ಪಿತ

ನುಡಿಯನು ಸಲಿಸಿದ
ಚಂಡವಿಕ್ರಮ ಮಹಿಮ
ಭಾರ್ಗವ ಮೂರುತಿ _ ಬಾ ಬಾ ಬಾ ೬

ಕಾಂತೆಯನೆಪದಿಂದ
ಕದನವ ಹೂಡಿಕೊಂಡು
ಅಂತಕಸದನಕೆ
ಅರಿಗಳ ತಳ್ಳುತ
ಶಾಂತತೆ ಬೀರಿಪೊರೆದ
ದಶರಥ ರಾಮನೆ _ ಬಾ ಬಾ ಬಾ ೭

ಚೋರತನದಿ ಬಲು
ಬೆಣ್ಣೆಯ ಮೆಲ್ಲುತ
ಜಾರತನದಿ ಋಷಿ
ಸ್ತ್ರೀಯರಿಗೊಲಿದಂಥ
ಮಾರಜನಕ ಶ್ರೀ
ರುಕ್ಮಿಣಿ ಕೃಷ್ಣ _ ಬಾ ಬಾ ಬಾ ೮

ವೇದಗೋಚರ ವಿಶ್ವ
ವೇದ ಬಾಹ್ಯರಿಗೆಲ್ಲ
ವೇದ ವಿರುದ್ಧವಾದ
ವಾದಗಳ ತೋರಿ
ನಿಂದು ಬೆತ್ತಲೆ ಮರದ
ಬೌದ್ಧ ಸ್ವರೂಪನೆ _ ಬಾ ಬಾ ಬಾ ೯

ಕಲಿಬಾಧೆ ಹೆಚ್ಚಾಗೆ
ಕಲಿಯುಗ ಕೊನೆಯಲ್ಲಿ
ಮಲಿನಾರ ಮರ್ಧಿಸಿ

ಉಳಿಸಲು ಧರ್ಮವ
ಚಲುವ ರಾಹುತನಾದ
ಕಲ್ಕಿ ಸ್ವರೂಪನೆ _ ಬಾ ಬಾ ಬಾ ೧೦

ಸತ್ಯಸಂಕಲ್ಪನೆ ನಿತ್ಯಸ್ವರೂಪನೆ
ಉತ್ತಮನೀನೆಂದು
ಒತ್ತೊತ್ತಿ ಪೊಗಳುವೆ
ಭೃತ್ಯನು ನಿನ್ನವನು ಕಣ್ಣೆತ್ತಿ ನೋಡುತ _ ಬಾ ಬಾ ಬಾ ೧೧

ಏಕರೂಪನೆ ನಿನ್ನನೇಕ ರೂಪಂಗಳ
ಸಾಕಲ್ಯದಿಂದಲಿ ಶ್ರೀಕಾಂತೆ ಅರಿಯಳು
ಕಾಕುಮತಿಯು ನಾನು
ಎಂತು ವರ್ಣಿಸಲಯ್ಯ _ ಬಾ ಬಾ ಬಾ ೧೨

ಪೂರ್ಣಸ್ವರೂಪನೆ _ ಪೂರ್ಣ ಗುಣಾಬ್ಧಿಯೆ
ಪೂರ್ಣನಂದಾನೆ ಪೂರ್ಣ ಸ್ವತಂತ್ರನೆ
ಪೂರ್ಣಬೋಧರ ಪೂರ್ಣ
ಕರುಣಾವ ಬೀರಿಸು _ ಬಾ ಬಾ ಬಾ ೧೩

ಮಾತುಮಾತಿಗೆ ನಿನ್ನ ನಾಮದಸ್ಮರಣೆಯ
ನಿತ್ತು ಪಾಲಿಸು ಎನ್ನ
ಮೃತ್ಯೋಪಮೃತ್ಯುವೆ ದೇವ
ಭಕ್ತಿಭಾಗ್ಯವನಿತ್ತು ಮನ್ನಿಸಿ ಸಲಹುತ _ ಬಾ ಬಾ ಬಾ ೧೪

ದೋಷದೂರನೆ ನಿನ್ನ ದಾಸನುನಾನಯ್ಯ
ವಾಸವ ಜಯಮುನಿ ವಾತನೊಳ್ವಾಸಿಪ
ಈಶ ಸಿರಿಕೃಷ್ಣ ವಿಠಲರಾಯನೆ
ಬೇಗ ಬಾ ಬಾ ಬಾ ೧೫

## ಶ್ರೀ ಲಕ್ಷ್ಮೀ ದೇವಿಯರು

### ೫೪

ಕಾಯೆ_ಕಾಯೆ _ ಶ್ರೀ ಹರಿಜಾಯೆ ಪ

ಕಾಯೆ ಕಾಯೆ ಸಂತೋಷವೀಯೆ ಮೂರು ಜಗ
ಕಾಯೆ ವಿಷ್ಣುಮನ ಛಾಯೆ ಭಕುತಿವರವೀಯೆ
ನಿತ್ಯ ಎಳೆಕಾಯೆ ಸುಜನಗಣ ಧ್ಯೇಯೆ
ನಿಗಮತತಿಗೇಯೆ ಮಾಯೆ ಅ.ಪ.

ಶರಣು-ಶರಣು-ಶರಣು ಗುಣಭರಣಿ
ಶರಣು ಭವ ತರಣೀ ಶರಣು ತ್ರಿಗುಣ ಧಣಿ
ಶರಣು ಸೊಬಗು ಖಣಿ ಶರಣು ನಿಗಮಧ್ವನಿ
ಶರಣು ಹರಿಯ ಮನಿ ಶರಣು ಸುಖದ ಮಣಿ
ಶರಣುಜಯ ಸಿರಿ ೧

ಅಂಬೇ-ಅಂಬೇ-ಅಂಬೇ-ಅಂಬೇ ನಿರುತಹರಿ
ಕಾಂಬೆ ಉರದಲಿಹೆ ಎಂಬೆ ಪಡೆದೆ ಜಗ-
ವೆಂಬೆ ಭಕುತಿ ಜನಸ್ತಂಭೆ ಅಮಿತಶಶಿ
ಬಿಂಬೆ ಗೈವೆ ವಿಧಿ ಯಿಂಬೆ ತ್ರಿಗುಣ ಹರಿ
ಸೆಂಬೆ ನಮಿಪೆ ಕೃತಿ ೨

ರಾಣೀ_ರಾಣೀ-ಶ್ರೀ ಅನಿರುದ್ಧನ ರಾಣಿ ಲಕ್ಷಣ
ಶ್ರೇಣಿ ಪಂಕಜಪಾಣಿ ಭುಜಂಗ ಸು-
ವೇಣಿ ನಿತ್ಯ ಕಲ್ಯಾಣಿ ಮಂಗಳವಾಣಿ ದುಃಖವ
ಕಾಣಿ ನೀ ಬಹು ಜಾಣಿ ವಲಿದಿಹ ಹರಿ ೩

ಅಮ್ಮ-ಅಮ್ಮ-ನೀಜಗದಮ್ಮ ಅಮ್ಮ ಕಣ್ ತೆಗೆಯಮ್ಮ
ಸಿರಿಸುರಿಸಮ್ಮ ಉರಿಹರಿಸಮ್ಮ ದಯಮಾಡಮ್ಮ

ವಿಧಿಗುರುವಮ್ಮ ಭುಜಿಸೊಸೆಯಮ್ಮ
ಹರಿಗ್ವೇಳಮ್ಮ ದಕ್ಷಣೆ ೪

ಶೀಲೆ–ಶೀಲೆ– ನಿರುತ ಹರಿಯ ಜಪ ಶೀಲೆ ಕುಂಕುಮ
ಫಾಲೇ ಕಮಲಕಪೋಲೆ ಥಳ ಥಳ ವಾಲೆ ಇಟ್ಟಿಹೆ
ಬಾಲೇ, ಚಂಚಲ ಲೀಲೆ ನತಜನ ಪಾಲೆ
ಖಳರೆದೆಶೂಲೆ ಹರಿಗಿಹೆಮಾಲೆ ೫

ಹೇತು–ಹೇತು–ಕಾರ್ಯ ಕಾರಣ ನೀ
ಒಡವೆಗಳಾಗಿ ವಸ್ತ್ರಗಳಾಗಿ ಶಸ್ತ್ರಗಳಾಗಿ
ಚರಣದಿ ಬಾಗಿ ಹರಿಗನುವಾಗಿ ಸಾಧಕಳಾಗಿ
ಧೊರೆವಶಳಾಗಿ ಗಂಡನ ಭಜಿಪೆ ೬




ಇಲ್ಲ–ಇಲ್ಲ–ಹರಿಯಗಲಿಕೆ ನಿನಗಿಲ್ಲ
ಕ್ಲೇಶವು ಇಲ್ಲ ದೋಷಗಳಿಲ್ಲ ಪಾಶಗಳಿಲ್ಲ ಹರಿ ಬಿಡನಲ್ಲ
ಸರಿಯಾರಿಲ್ಲ ಮುಕ್ತರಿಗೆಲ್ಲ
ಒಡೆಯಳೆ ಚೆಲ್ವೆ ನೀ ಆಕಾಶೆ ೭

ನೀರೆ–ನೀರೆ–ಹರಿ ಸಮಾಸಮನೀರೆ
ಘನ ಗಂಭೀರೆ–ಶ್ರುತಿಗಳ ಮೇರೆ ಮೀರುತ
ಧೀರೆ ಹರಿಮನಸಾರೆ–ಪೊಗಳುವೆ ಬೇರೆ
ಸಾಟಿಯು ಯಾರೆ–ಹರಿಪುರ ತೋರೆ ಕರುಣದಿ ೮

ಕಂದ–ಕಂದ–ನಾನಿಹೆ ನಿನ್ನ
ನಂದದ ಶ್ರೀ ಕೃಷ್ಣವಿಠಲನ ರಾಣಿ ಇಂದಿರೆಸಲಹೆ
ಕುಂದುಗಳಳಿಸೆ ತಂದೆಯ ತೋರೆ
ಚೆಂದದ ಭಕುತಿ ಮುಂದಕೆ ತಂದೂ ೯

೫೫

ಕಾಮಾನ ಜನನಿಯೆ ಸೋಮಾನ ಸೋದರಿ
ಸಾಮಾಜ ವರದನ ಪ್ರೇಮವ ಕೊಡಿಸಮ್ಮ ಪ

ನೇಮಾದಿಂದಲಿ ಹರಿ ನಾಮಾವ ನುಡಿಸುತ
ತಾಮಾಸ ಓಡುವಂತೆ ನೀಮಾಡಬೇಕಮ್ಮ ಅ.ಪ

ನಿತ್ಯ ತೃಪ್ತಳೆನಿನ್ನ ನಿತ್ಯದಿ ಬೇಡಿಕೊಂಬೆ
ಭೃತ್ಯರೊಳಗೆ ಎನ್ನ ಎತ್ತಿ ಸೇರಿಸೆ ತಾಯೆ ॥
ಮತ್ತನಾಗದೆ ಭವದಿ ಉತ್ತುಮನೆನಿಸುತ
ಆತ್ಮದಿ ಹರಿ ತೋರಿ ಕೃತಕೃತ್ಯನೆನಿಸಮ್ಮ ೧

ದೇಶಕಾಲದಿನೀನು ಶ್ರೀಶಗೆ ಸಮಳಮ್ಮ
ನಾಶಮಾಡುತ ದೋಷ ದಾಸಾನು ಎನಿಸಮ್ಮ ॥
ಶ್ವಾಸಾಶೇಷರನೆಲ್ಲ ಲೇಸಾಗಿ ಆಳುವಳೆ
ವಾಸುದೇವನಲ್ಲಿ ಆಸೇಯ ನೀಡಮ್ಮ ೨

ಶೃತಿಯಲ್ಲಿ ನೀನಿದ್ದು ಸ್ತುತಿಸೀ ಶ್ರೀಹರಿಯನ್ನ
ಮತ್ತೆಸೃಜಿಸುವಂತೆ ಎತ್ತಿಗಾನವ ಮಾಳ್ವೆ ॥
ಎತ್ತ ನೋಡಲು ಬಲು ಕತ್ತಲೆಕಣಿ ತಾಯೆ
ಸತ್ಯವ ಬಿಡದಂತೆ ಹತ್ತೀಸೆ ಹರಿದಾರಿ ೩

ಹರಿಯಂತೆ ಅವತಾರ ನಿರುತನೀ ಮಾಡುತ
ಪರಿ ಪರಿ ರೂಪಧಿಂದ ಪರಿಚರಿಯ ನೀಮಾಳ್ವೆ ॥
ಸರ್ವೇಶ ಹರಿಯಿಂದ ಸರ್ವಕಾಲದಿ ಕೂಡಿ
ಸರ್ವಕಾರ್ಯವ ಮಾಳ್ವೆ ಸರಿಯಾರೆ ನಿನಗಮ್ಮಾ ೪

ಅಕ್ಷರ ರೂಪಳೆ ಈಕ್ಷಿಸುಕರುಣದಿಂದ
ತ್ರ್ಯಕ್ಷೇಶ ವಿಧಿಮಾತೆ ಅಕ್ಷರನರ್ಧಾಂಗಿ ॥
ಕುಕ್ಷೀಲಿ ಬ್ರಹ್ಮಾಂಡ ಲಕ್ಷ್ಯವಿಲ್ಲದೆ ಪಡೆದಿ
ಅಕ್ಷಯ ಮಾಡಿ ಜ್ಞಾನ ಮೋಕ್ಷಾವ ಕೊಡಿಸಮ್ಮಾ ೫

ವಿಕಾರ ಶೂನ್ಯಳೆ ಪ್ರಕೃತಿಗೆ ಮಾನಿಯೆ
ನೀಕಾರ್ಯ ಕಾರಣಕ್ಕೆ ಮುಖ್ಯ ಹೇತುವೆ ತಾಯೆ ॥
ಪ್ರಕೃತಿ ಬಂಧವ ಬಿಡಿಸಿ ಸಾಕಾರ ಮೂರುತಿ
ಲೋಕನಾಯಕ ಹರಿಯ ಏಕಾಂತದಲಿ ತೋರೆ ೬

ತ್ರಿಗುಣ ಕಾರ್ಯಗಳೆಲ್ಲ ಸುಗುಣಿ ನೀ ಮಾಡುತ
ನಿಗಮ ವೇದ್ಯನ ನಿತ್ಯ ಪೊಗಳಿ ಹಿಗ್ಗುವೆ ಮಾತೆ ॥
ಜಗವೆಲ್ಲ ಕುಣಿಸುತ ನಗುತಲೀಲೆಯಿಂದ
ನಿಗಮಾದಿಗಳ ಮೀರಿ ಬಗೆ ಬಗೆ ಲೀಲೆ ಕಾಂಬೆ ೭

ನಿತ್ಯಾ ಮುಕ್ತಳು ನೀನು ಪ್ರೀತಿಲಿ ನಮಿಪೆನೆ
ಮಾತುಲಾಲಿಸಿ ಎನ್ನ ನಿತ್ಯದಿ ಸಲಹೆಮ್ಮ ॥
ಹೆತ್ತ ತಾಯಿಯು ನೀನು ಎತ್ತಿ ಪೊರೆಯದಿರೆ
ಎತ್ತ ಪೋಗಲಿ ನಾನು ಉತ್ತುಮರಮೆ ಹೇಳೆ ೮

ಸಾಗರನ ಮಗಳೆ ಆಗಮರೂಪಳೆ
ಹೋಗೀಸುಲಿಂಗವ ಸಾಗಿಸಿಗುಣಕಾರ್ಯ ॥
ಭಾಗ್ಯ ಸ್ವರೂಪಳೆ ಬಾಗಿ ನಮಿಸುವೆ
ಆಗು ಮಾಡಿಸು ಹರಿ ಗೀತೆಗಳೆನ್ನಿಂದ ೯

ಮರುತ ದೇವನ ಪಿತನ ಉರದಲಿ ವಾಸಿಪಳೆ
ಹರಿಗುರು ಚರಣದಿ ನಿರುತ ಭಕ್ತಿಯ ಕೊಟ್ಟು ॥
ವಾರಿಜನಾಭನಲ್ಲಿ ಧಾರೆ ಧಾರೆಯ ಭಕ್ತಿ
ಬೀರೀಕರುಣಿಸು ಸಾರಸ ದಳನಯನೇ ೧೦

ಮಾತು ಮಾತಿಗೆ ನಮ್ಮ ಖ್ಯಾತಾಜಯತೀರ್ಥ
ವಾತನೊಳ್ವಾಸಿಪ ನವನೀತ ಧರಿಸೀಹ ॥
ಶ್ರೀ ತಾಂಡವ ಕೃಷ್ಣ ವಿಠಲರಾಯನ ಸ್ಮರಣೆ
ಆತ್ಮಾದೊಳಗೆ ನಿಂತು ಖ್ಯಾತೀಲಿನಡಿಸಮ್ಮಾ ೧೧

## ಶ್ರೀವಾಯು ದೇವರು

### ೫೬

ಅನಿಲದೇವನೆ ನಿನ್ನ ಅನುದಿನ ಸ್ತುತಿಸುವೆ
ದೀನಮನುಜನ ಜನುಮಗಳಳಿಸೋ ಪ

ಹನುಮ ಭೀಮ ಮಧ್ವರೂಪನೆ
ವಾಣಿವಂದಿತ ಪಾದಪದ್ಮನೆ
ಅಣುಮಹದ್ಘನರೂಪ ಚರಿತನೆ ಸಾನುರಾಗದಿ
ಕಾಯೋ ಈಗಲೇ ಅ.ಪ.

ಜಾನಕೀರಮಣನ ಪ್ರಿಯ ದಾನವಾಂತಕ ಕಾಯ
ಮಣಿಮಂತಾದಿಗಳ ಶೂಲ ಘನ ಪರಾಕ್ರಮ ಭೀಮ
ಜ್ಞಾನದಾಯಕ ವಪುಷ ಆನಂದ ತೀರ್ಥಪ್ರಖ್ಯಾತ
ಮೌನಿಮಾನಸ ಚಂದ್ರ ಅನಿಮಿಶೇಷಗಳಾದಿಗೊಡೆಯ
ಭಾನುಕುಲತಿಲಕ ದೂತನೆ ಭಾನುಕೋಟಿತೇಜರೂಪನೆ
ಮಾನಿ ದ್ರೌಪದಿ ಪ್ರೀಯಗಂಡನೆ
ಗಣಿಸಲಾಗದ ಸತ್ವಮಂದಿರ
ಮೌನಿಗಳ ಕಲಶ ಪ್ರಾಯನೆ ಕನಕವರ್ಣದಶುಭಗಾತ್ರನೆ
ಧ್ಯಾನಗೋಚರ ವಿಶ್ವರೂಪನೆ ಮಾನದಿಂದಲಿ ಪಾಲಿಸಯ್ಯ ೧

ವಾರಿಧಿ ದಾಟಿದಶೂರ ಭಾರಿವನವ ಕಿತ್ತವೀರ
ಜರಾಸಂಧನ ಕೊಂದ ಧೀರ ವೈರಿತಿಮಿರಕೆ ಸೂರ್ಯ
ಹರಿಯ ಹರಡಿದ ರಾಯ ಪರಾಶರಾತ್ಮಜಪ್ರಿಯ
ಕರಿರಾಜವರದನೆ ಪ್ರಥಮಾಂಗ ಭಾರತಿ ರಮಣಮುಖ್ಯಪ್ರಾಣ

ಹರಿಯು ಆಗಿ ಹರಿಯ ಒಲಿಸಿದೆ ವೀರಮಾರುತಿ ದೇವ ದೇವನೆ
ದುರುಳ ಕಲಿಯನು ಕೆಡಹಿ ಧರೆಯಲಿ ಕರುಳ
ಬಗೆದು ಧರಿಸಿ ಮೆರೆದೇ
ವೈರಿಮಾಯ್ಗಳ ಹಲ್ಲುಮುರಿಯುತ ಹರಿಯೆ ಪಿರಿಯನು
ಎಂದು ಸಾರಿದೆ
ಕರವ ಮುಗಿದು ಸಾರಿಬೇಡುವೆ ಚರಣ·
ತೋರಿಸಿ ಕಾಯೊ ಸೂತ್ರನೆ ೨

ಅಕ್ಷಯನ ಕೊಂದು ಮೆರೆದ ಲಕ್ಷ್ಮಣನ ಪ್ರಾಣವನುಳಿದ
ರುಕ್ಮಿಣೀ ಪತಿಯ ಕಿಂಕರನಾದ ಲಕ್ಷ್ಯವಿಲ್ಲದೆ ಸೈನ್ಯಗಳಳಿದಾ
ಪಕ್ಷವಾಹನನೆ ದೈವವೆಂದ ಮೋಕ್ಷಸಾಧನಗಳ ತೋರಿನಿಂದ
ದಕ್ಷರಾಕ್ಷಸ ವೈರಿ ಅನಿಲ ರಕ್ಷಿಸು ರಕ್ಷಿಸು ತತ್ವೇಶರೊಡೆಯ
ಲಕ್ಷ್ಮಿಮಾತೆಯಕಂಡುವಂದಿಸಿ ಲಂಕೆ ಸುಟ್ಟು ಸೊಕ್ಕೂ ಮುರಿದೆ
ಅಕ್ಷನಾಟವ ಸೋತುನಟಿಸಿ ಕಾಂತೆಗಭಯವ ನೀಡಿ ಪೊರೆದೆ
ಅಕ್ಷರೇಡ್ಯನ ಕರುಣದಿಂದಲಿ ಸೂತ್ರಭಾಷ್ಯವ ರಚಿಸಿ ಮೆರೆದೇ
ಇಕ್ಷುಚಾಪನ ಪಿತನ ತೋರಿಸೋ ದಕ್ಷಿಣಾಕ್ಷಿಗವತ್ಸರೂಪಿಯೆ ೩

ವಾಮನನುಜನ ಗರ್ವವ ಮುರಿದ ಸೋಮಶೇಖರನ
ವಿಷಉಂಡುಪೊರೆದ
ರೋಮರೋಮಕೆ ಕೋಟಿ ಲಿಂಗಗಳುದುರಿಸಿ ಬಂದ
ಅಮರಪ್ರಾರ್ಥನೆಯಿಂದ ಮುನಿಯಾಗಿನಿಂದ
ಧಾಮಸಕಲ ಗುಣಕೆಂದೆನಿಕೊಂಡ
ಸಮಶೂನ್ಯ ಸತ್ವ ಪ್ರಭಾವ ತಾಮಸವರ್ಜಿತ
ಅನಾದಿ ಅಪರೋಕ್ಷದೇವ
ರಾಮಭಕ್ತಾಗ್ರೇಸರನೆನಿಸಿದ ತಾಮಸಾಂತಕ ವಿಜಯರಥಧ್ವಜ
ಭಾಮೆಯರೂಪವ ತಾಳಿಮೆರೆದ ಭೀಮವಿಕ್ರಮ ಸಪ್ತಶಿವಧರ
ಸಾಮಗಾಯನ ಲೋಲ ಕೃಷ್ಣನ ಪ್ರಿಯದಾಸ ಮೋದಮುನಿಯೆ
ಕಮಲೆಯರಸನ ಒಲುಮೆಯಿಂದಲಿ ಭಾವಿ ಬ್ರಹ್ಮನು
ಎನಿಸಿಮೆರೆಯುವೆ ೪

ವಾನರರೂಪಿಲಿ ಬಂದ ಜಾನಕಿ ಗುಂಗುರಕೊಟ್ಟು ನಿಂದ
ಅನಲನಿಂದಲಿ ಅನುಜರ ಕಾಯ್ದು
ರಾಜಸೂಯವ ಮಾಡಿನಿಂದ
ಪ್ರಾಣಗೀಶಗೆ ಭೇದವು ಎಂದ ಸಾನಂದ ಗುಣಪೂರ್ಣ
ಹರಿಯು ಎಂದ
ಅನುಪಮ ಚರಿತ್ರ ಗುಣಗಣವೃಂದ
ವನಜನಾಭನಮುಖ್ಯ ಪ್ರತಿಬಿಂಬ
ಕ್ಷಣದಿ ಸಂಜೀವನವ ತಂದೆ ವಾನರರ ಪ್ರಾಣ ಉಳಿಸಿದೆ
ದ್ರೋಣಸುತನ ಅಸ್ತ್ರನಿಲಿಸಿದೆ ಸಾಮ ದೂರ ಖ್ಯಾತನಾಮನೆ
ಹೀನಮತಗಳ ಮುರಿದ ಮಧ್ವನೆ ಜ್ಞಾನಿಜಯಮುನಿ
ವಾಯು ಅಂತರ
ಶ್ರೀನಿವಾಸ ಕೃಷ್ಣವಿಠಲನ ಜ್ಯೇಷ್ಠಕುವರ ವಿಶ್ವ ರಜ್ಜುವೆ
ಚರಣ ನಂಬಿದೇ ೫

## ೫೭

ಮಧ್ವನುದಿಸಿದನು ಭೂತಳದಲಿ ಪ

ಪದ್ದು ದುರ್ಮತ ತಿದ್ಧಿ ಸುಜನರ ಪದ್ಮನಾಭನ ಪಾದಸೇವಿಸೆ ಅ.ಪ

ದೇವ ದುಂದುಭಿಗಳ್ ಮೊಳಗೆ ದೇವಗಣಗಳು
ಕುಣಿದು ಕುಣಿಯೇ
ಗೀರ್ವಾಣಮಾತೆಯು ನಲಿದುನಲಿಯೆ ಪೂರ್ವಜಾತರ
ಖೇದ ಉಕ್ಕಿಹರಿಯೆ
ಸರ್ವಲಕ್ಷಣದಿಂದ ಶೊಭಿಪ ಸರ್ವತೆರದಲಿ ಪೂರ್ಣಕಾಯದಿ
ಸರ್ವಜೀವರ ನಾಥನಾಯಕ ಸರ್ವರೀಶನ ಆಜ್ಞೆಧರಿಸುತ ೧

ವಾಸುದೇವನಲ್ಲೆ ರತನು ವಾಸುದೇವನ ತೋರಿ ಪೊರೆವಾ
ದೋಷವಿಲ್ಲದ ಮಹಾಮಹಿಮಾ ನಾಶವಿಲ್ಲದ ಜ್ಞಾನಸ್ವರೂಪಾ

ತೋಷಬೀರುತ ಮಧ್ಯಗೇಹಗೆ ವಾಸುದೇವ ಸುನಾಮಗೊಳ್ಳುತ
ನಾಶಮಾಡುತ ದೋಷಜ್ಞಾನವ ಭಾಸಬೀರಲು ವೇದರಾಶಿಯ ೨

ವನಜಜಾಂಡವ ಪೊತ್ತಿಪಧೀರ ವನಜನಾಭವ ಮುಖ್ಯದೂತ
ಅನಿಲ ದೇವನ ತೃತೀಯ ರೂಪ ವನಜಸಂಭವ ಪದಕೆ ಬರುವ
ಅನಘ ಜಯಮುನಿ ವಾಯು ಹೃದಯದಿ ಕುಣಿವ
"ಶ್ರೀಕೃಷ್ಣವಿಠಲ"
ದಯದೊಳ್ ಮಣಿವೆ ಸುಜನರ ಬಂಧನೀಗಿಸಿ
ದಣಿವು ಕಾಣದೆ ವೇದವತಿಯಲಿ ೩

೫೮

ಮಧ್ವರಾಯರ ಶುದ್ಧಸಿದ್ಧಾಂತ ಪದ್ಧತಿಯಲಿ
ಇದ್ದ ಮನುಜಗೆ ಕರಸಿದ್ಧವೈಯ್ಯಾ ಮುಕುತೀ ಪ

ಬಿದ್ದು ಪೋಗುವುದಘ ವೃಂದಗಳೆಲ್ಲವು
ಶುದ್ಧಜ್ಞಾನದಿ ಸತ್ಯ ಉದ್ಧರಿಪ ಹರಿ ವೇದಸಿದ್ಧವಿದುಕಾಣೋ ಅ.ಪ.

ತ್ರೇತೆಲಿ ಇವರು ವಾತಸುತನು ಎನಿಸಿ
ಖ್ಯಾತಿಯಿಂದಲಿಲಂಕೆ ಸುಟ್ಟು
ಪ್ರೀತಿಲಿ ರಾಮನ ಭಜಿಸಿದರೋ
ವ್ರಾತಖಳಕುಲ ಘಾತಿ ಮಾಡಿಸಿ, ವೀತಿಹೋತ್ರಗೆ ತುತ್ತು ನೀಡುತ
ಪ್ರೀತಿಯಿಂದಲಿ ಸೇವೆಮಾಡಲು
ನಾಥರಾಮನ ವರದಿ ಮುಂದಿನ
ಧಾತನಾಗಿ ಬರುವ ನಮ್ಮ ೧

ದ್ವಾಪರದಲಿವರು ಪಾಪಿ ದುರ್ಯೋಧನನ
ಭೂಪನಂದದಿ ಅಳಿಸಿ ಶ್ರೀಪತಿಸೇವೆನಡಿಸಿದರೋ
ಶ್ಯಾಮಸುಂದರ ಕೃಷ್ಣರಾಯನ ನೇಮದಿಂದಲಿನಾಮ ಪಠಿಸುತ
ತಾಮಸಾರನು ಯಮಗೆ ಕಳಿಸಿ ಕಾಮವಿಲ್ಲದೆ ಯಜ್ಞವನಡೆಸಿದ
ಭಾಮೆ ದ್ರೌಪದಿ ಪ್ರೇಮ ಪತಿಯಾದ ೨

ಕಲಿಯುಗ ಕಳ್ಳರು ಸಲ್ಲದರ್ಥಗಳನ್ನು
ನಿಲ್ಲದೆ ನಿಗಮಕ್ಕೆ ಮಾಡಲು ಎಲ್ಲ ಸುರರು ಮೊರೆಯಿಡಲು
ವಲ್ಲಭನು ಶ್ರೀನಲ್ಲ ನಲ್ಲದೆ ಇಲ್ಲ ಜಗದೊಳು ಎಂದು ಸ್ಥಾಪಿಸಿ
ಕ್ಷುಲ್ಲಕರ ಪಿಡಿದು ಹಲ್ಲು ಮುರಿಯುತ
ಎಲ್ಲವೇದದ ಎಲ್ಲನಾದವು
ನಲ್ಲ ಹರಿ ಯಂತೆಂದು ತೋರಿದ ೩

ಜೀವೇಶ ಬೇಧವು ಪಂಚಬೇಧವು ಸುಳ್ಳು ತಾವೆ ನಾಥರು ಜಗಕೆ
ತಾರತಮ್ಯವು ಠಕ್ಕೊ ಶಿವನೆ ಸರ್ವೋತ್ತಮ ಬ್ರಹ್ಮನಿರ್ಗುಣನು
ಈ ವಿಧವಾದವ ವೇದವ್ಯಾಸರ ಕಂಡು ಬದರಿಲಿ
ಮುದದಿ ಸಾಧಿಸಿ ಸೂತ್ರ ಭಾಷ್ಯವ ಮಾಧವನೆ ಜಗದಾದಿಕಾರಣ
ನೆಂದರುಹಿ ಮಹದಾನಂದ ಶಾಸ್ತ್ರವ ನಿಂದು
ಬೋಧಿಸಿ ಮೋದ ನೀಡಿದ ೪

ಮಧ್ವರಾಯರವಾಣಿ ಶುದ್ಧವೇದದಸಾರ
ವೇದವ್ಯಾಸರ ಮತವು ಇದುಸಿದ್ಧ ಹರಿ ಆಣೆ ಕೇಳಿ
ಗದ್ದರಾಗದೆ ಬಿದ್ದು ಇವರಡಿ ತಿದ್ದಿ ಮನವನು ಒದ್ದುದುರ್ಮತ
ಪದ್ಮನಾಭನ ಪಾದಧ್ಯಾನದಿ ಅದ್ದಿ ಚಿತ್ತವ
ಸಿದ್ಧಮಾಡಿರೋ ಮುಕ್ತಿಪಥವ ೫

ಪರಿಸರನೀತನು ಪರಮಾಪ್ತನುಪರಿಗೆ ಗುರುವೊ ಜಗಕೆಲ್ಲ
ಬರುವ ಬ್ರಹ್ಮನು ಕಾಣೋ
ಸರಿಯು ಇಲ್ಲವು ಯಾರು ಈತಗೆ ದೂರ
ಓಡಿಸುಮಾರಿಮತಗಳ
ಈರದೇವನ ಸಾರಿಸಾರೆಲೊ ದೂರ
ಇಲ್ಲವೊ ಹರಿಯ ಧಾಮವು ೬

ಮೂರುಹತ್ತು ಎರಡು ಗುರುಲಕ್ಷಣ ಕಾಯರು
ನಿರುತ ಹಂಸೋಪಾಸನೆ ಮೂರುವಿಧದಲ್ಲಿ ಮಾಳ್ಪರು

ಭಾರತೀಶನ ಸಾರಗುಣಗಳ ಸೂರಿಗಳಿಗಳವಲ್ಲ ಅರಿಯಲು
ನೀರಜಾಕ್ಷನನಿರುತ ಕಾಂಬುವ ಸಮೀರ ದೇವನ
ಚರಣಪಿಡಿಯಿರೋ ೭

ದಶದಿಶೆಗಳ ವಳಗೆ ಬಿಸಜನಾಭನ ಕೀರ್ತಿ
ಎಸೆದು ಹಿಗ್ಗುವ ನಮ್ಮ ಅಸಮ ಮಧ್ವರನೋಡೋ
ವ್ಯಾಸದೇವರ ಆಶೆಯಿಂದಲಿ ದೋಷಜ್ಞಾನವ
ನಾಶಮಾಡುತ
ತೋಷ ಬೀರುವ ಗ್ರಂಥರಾಶಿಯ ಶಿಷ್ಯರಿಗೆ
ಮಂದಿಟ್ಟು ಹರಿಯ
ಭಾಸಕರು ಎಂದೆನಿಸಿದ ೮

ಅನಿಲದೇವನ ನಾಮ ಕನಸಿಲಾದರು ಒಮ್ಮೆ
ನೆನೆದವನೇ ಧನ್ಯ ಮಾನ್ಯನೋ ಜಗದೊಳಗೆ
ನಾನು ನಾನೆಂಬೋ ಹೀನಮತ ಸುಡು ಸಾನುರಾಗದಿ
ದೀನನನೆನಿಸುತಲಿ
ದಾನಿ ಜಯಮುನಿ ಅನಿಲನಂತರ ಶ್ರೀನಿವಾಸ ಕೃಷ್ಣವಿಠಲಗೆ
ಶರಣು, ಶರಣು, ಶರಣೆಂದು ೯

## ೫೯

ವಾದೀಗಳಾಗೆದ್ದು ಸಿದ್ಧಾಂತ ಸ್ಥಾಪಿಸಿ ಮುದ್ದು ಕೃಷನ ತಂದ
ವೇದ ವ್ಯಾಸರ ಪ್ರಿಯ ಮಧ್ವರಾಯ ಮಧ್ವರಾಯ ಪ

ಬಿದ್ದೆ ನಿಮ್ಮಯ ಚಲುವ ಪಾದಪದ್ಮಂಗಳಿಗೆ ವೇದ
ವಿದ್ಯೆಯ ಕೋರಿ ಉದ್ಧಾರ ಮಾಡೈಯ
ಮಧ್ವರಾಯ ಮಧ್ವರಾಯ ಅ.ಪ

ಅಂದು ಹನುಮನಾಗಿ ಸಿಂಧುವಿನ ದಾಟಿ
ತಂದು ಚೂಡಾಮಣಿ

ನಿಂದೆ ರಾಮನ ಮುಂದೆ ಮಧ್ವರಾಯ ಮಧ್ವರಾಯ
ಮಂದ ಮತಿಯು ನಾನು ವಂದೀಸುವೆ ನಿನಗೆ
ಕಂದನು ಎಂತೆಂದು
ಮುಂದೆ ಪಾಲಿಸ ಬೇಕು ಮಧ್ವರಾಯ ಮಧ್ವರಾಯ ೧

ದ್ವಾಪರ ಯುಗದಲ್ಲಿ ದ್ರೌಪದಿ ಗಂಡನೆನಿಸಿ ಪಾಪಿಗಳಾಕೊಂದು
ಶ್ರೀ ಪತಿ ಸೇವೆ ಮಾಡ್ದೆ ಮಧ್ವರಾಯ ಮಧ್ವರಾಯ
ಕೋಪವು ಮಾಡದೆ ತಾಪಗಳೋಡಿಸಿ ಗೋಪಾಲ ಕೃಷ್ಣನ
ಕೃಪೆಯ ಕೊಡಿಸೈಯ ಮಧ್ವರಾಯ ಮಧ್ವರಾಯ ೨

ದುರುಳ ಮಾಯಿಗಳೆಲ್ಲ ಹರಿಯ ದೂರುತ್ತಿರಲು ಸುರರ
ಪ್ರಾರ್ಥನೆಯಂತೆ ಧರೆಯೊಳು ನೀ ಬಂದೆ
ಮಧ್ವರಾಯ ಮಧ್ವರಾಯ
ಕರೆಕರೆ ಭವ ಬಿಡಿಸಿ ವೀರ ವೈಷ್ಣವ ನೆನಿಸಿ ಸಾರಿ ಸಾರಿಸ ಬೇಕು
ಹರಿಯ ನಾಮವನ್ನು ಮಧ್ವರಾಯ ಮಧ್ವರಾಯ ೩

ಲೋಕದಿ ಸಜ್ಜನರ ಸಾಕಬೇಕು ಎಂದು ಬೇಕೆಂದು ಯತಿಯಾದೆ
ಶ್ರೀಕಾಂತ ಪಟ್ಟಪುತ್ರ ಮಧ್ವರಾಯ ಮಧ್ವರಾಯ
ಲೋಕನಾಯಕ ಹರಿಯ ಏಕಾಂತದಲಿ ತೋರಿ
ನೂಕೋದುರಿತ ರಾಶಿ
ಲೋಕಕ್ಕೆಲ್ಲಾ ಗುರು ಮಧ್ವರಾಯ ಮಧ್ವರಾಯ ೪

ಹರಿಯು ಸರ್ವೋತ್ತಮ ಸಿರಿಯು ಆತನರಾಣಿ
ಸುರರೆಲ್ಲ ಪರಿವಾರ
ತಾರತಮ್ಯವ ತೋರ್ದೆ ಮಧ್ವರಾಯ ಮಧ್ವರಾಯ
ದೂರ ಓಡಿಸಿ ಕಲಿಯ ಕರೆದು ಪೊರೆಯ ಬೇಕು
ಸೂರಿಗಳೊಡೆಯನೆ
ಭಾರತಿ ಪ್ರಾಣಕಾಂತ ಮಧ್ವರಾಯ ಮಧ್ವರಾಯ ೫

ದುರುಳರ ದುರ್ಭಾಷ್ಯ ಜರಿದು ಹಾಕಿದೆ
ಮತ್ತೆ ಹರಿಯಮತದಂತೆ
ಬರೆದೆಯೊ ಹೊಸ ಭಾಷ್ಯ ಮಧ್ವರಾಯ ಮಧ್ವರಾಯ
ಮೂರು ರೂಪವ ತಾಳಿ ಮೂರು ಲೋಕವ
ಪೊರೆದೆ ಹರಿಯಪ್ರಥಮಾಂಗ
ವೀರ ಮಾರುತಿ ದೇವ ಮಧ್ವರಾಯ ಮಧ್ವರಾಯ ೬

ಬೃಹತೀಗೆ ನೀ ಪ್ರತಿಮ ಬಹುರೂಪ ಧಾರಕ ವಹಿಸೊ ಎಮ್ಮೆಯ
ಭಾರ ಅಹಿ ಭೂಷಣ ಪ್ರಿಯ ಮಧ್ವರಾಯ ಮಧ್ವರಾಯ
ಬ್ರಹ್ಮಜ್ಞಾನಿ ಹನುಮ ಬ್ರಹ್ಮಪದವಿ ಸಿದ್ಧ
ದಹಿಸೋ ಸೋಹಂ ಜ್ಞಾನ
ಮಹಿಯೊಳು ಅಪ್ರತಿಮ ಮಧ್ವರಾಯ ಮಧ್ವರಾಯ ೭

ಮೂರು ಪಂಗಡರಲ್ಲಿ ಮೂರು ರೀತಿಯ
ಜಪ ಬೇರೆ ಬೇರೆ ಮಾಡಿ
ಮೂರು ಗತಿಯ ತೋರ್ಪೆ ಮಧ್ವರಾಯ ಮಧ್ವರಾಯ
ಮೂರು ಕೋಟಿಯ ರೂಪ ಮೂರಾರಿಗಳ ತಂದೆ
ಭಾರೀಶಕ್ತನು ನೀನು
ಆರು ಸರಿಯು ನಿನಗೆ ಮಧ್ವರಾಯ ಮಧ್ವರಾಯ ೮

ಸಾನಂದ ಗುಣಪೂರ್ಣ ಶ್ರೀನಿವಾಸನು ಎಂದು
ಆನಂದ ಶಾಸ್ತ್ರವ
ಸಾನುರಾಗದಿ ಪೇಳ್ದೆ ಮಧ್ವರಾಯ ಮಧ್ವರಾಯ
ಬಿನಗು ಮಾನವ ನಾನು ಏನು ಬಲ್ಲೆನು ನಿನ್ನ
ಜ್ಞಾನಾದಿಗಳ ಕೊಟ್ಟು
ನೀನಾಗಿ ಕಾಯ ಬೇಕೋ ಮಧ್ವರಾಯ ಮಧ್ವರಾಯ ೯

ಹರಿಯ ಮಂದಿರ ನೀನು ಭಾರಿ ಕೂರ್ಮನು
ಜಗ ಭಾರವ ವಹಿಸಿದೆ

ಮೇರೆ ಗಾಣದ ಸತ್ವ ಮಧ್ವರಾಯ ಮಧ್ವರಾಯ
ಗರಳ ಭುಕುವೆ ಸ್ವಾಮಿ ಶರಣು ಶರಣೆಂಬೆನೊ
ಹರಿಯ ಅರಿವ ಮರ್ಮ
ಕರುಣದಿ ಅರುಹೈಯ್ಯ ಮಧ್ವರಾಯ ಮಧ್ವರಾಯ ೧೦

ಸಾಮ ದೂರನೆ ವಂಶ ಗೋವತ್ಸ ರೂಪಿಯೆ
ಅಮರ ವೃಂದಕ್ಕೆಲ್ಲ
ಹರಿಯ ತೋರಿಸಿ ಕೊಟ್ಟೆ ಮಧ್ವರಾಯ ಮಧ್ವರಾಯ
ನೇಮದಿಂದಲಿ ನೀ ಪಾತರ್ನಾಮಕ ಸಿದ್ದ
ಬೊಮ್ಮದೇವಗು ಬಲವ
ಕೊಟ್ಟನ್ನ ಕೊಳ್ಳುವೆ ಮಧ್ವರಾಯ ಮಧ್ವರಾಯ ೧೧

ಬದರೀಗೆ ನೀ ಪೋಗಿ ವೇದ ವ್ಯಾಸರ ಕಂಡು
ಬಂದು ಮೂವತ್ತೇಳು
ಸುಂದರ ಗ್ರಂಥ ಮಾಡ್ದೆ ಮಧ್ವರಾಯ ಮಧ್ವರಾಯ
ಶುದ್ದ ಸತ್ವಮೂರ್ತಿ ಬದ್ಧನು ನೀನಲ್ಲ ವದ್ದು ಅವಿದ್ಯೆಯ
ತಿದ್ದೊ ಎಮ್ಮೆಯ ಮನ ಮಧ್ವರಾಯ ಮಧ್ವರಾಯ ೧೨

ಸುಖ ತೀರ್ಥ ಮುನಿರಾಯ ಸುಖನಾಗಿ ಸಲಪೈಯ
ಅಖಿಳಾಗಮಾವೇತ್ತ
ಸುಖದ ಪ್ರಾರಬ್ಧವೋ ಮಧ್ವರಾಯ ಮಧ್ವರಾಯ
ಅಖಿಳ ಖಳವೈರಿ ಅಖಿಳಾಂಡದೊಳು ವ್ಯಾಪ್ತ
ಸಕಲ ಲಕ್ಷಣವಂತ
ಸಕಲ ತತ್ವರಪತಿ ಮಧ್ವರಾಯ ಮಧ್ವರಾಯ ೧೩

ತತ್ವೇಶ ರೊಳಗೆಲ್ಲ ನಿನ್ನವ್ಯಾಪಾರವು ಉತ್ತಮ ನಿನ್ನಲ್ಲಿ
ಹರಿಯ ವ್ಯಾಪಾರವು ಮಧ್ವರಾಯ ಮಧ್ವರಾಯ
ನಿತ್ಯ ಕೃಷ್ಣನಕಾಂಬ ಸೂತ್ರನಾಮಕದೊರೆ
ಸತ್ತುಹುಟ್ಟುವ ಕಟ್ಟು ಕಿತ್ತುಪಾಲಿಸು ಜಿಯ ಮಧ್ವರಾಯ
ಮಧ್ವರಾಯ ೧೪

ಸತ್ಯಾ ಖ್ಯಾತನೆ ನಮಿಪೆ ಮೂರ್ತ ವಿರುದ್ಧ ದೊರೆ ।
ಉತ್ತುಮೋತ್ತುಮ
ವಿಷ್ಣು ನಿನ್ನ ದ್ವಾರವೆ ವಲಿವ ಮಧ್ವರಾಯ ಮಧ್ವರಾಯ
ನಿತ್ಯ ಯಜ್ಞವ ನಡಿಸಿ ಸರ್ವಗಾತ್ರಗಳಲ್ಲಿ ।
ನಿತ್ಯ ತೃಪ್ತನಿಗೀವೆ
ನಿಷ್ಕಾಮ ಭಕ್ತಿ ನಿಧಿ ಮಧ್ವರಾಯ ಮಧ್ವರಾಯ ೧೫

ಶ್ರೀ ವಿಷ್ಣುತರುವಾಯ ಸಕಲ ಶ್ರುತಿಗಳಿಂದ ।
ದಿವಿಜಾನಾಯಕ ನೀನು
ಪ್ರತಿ ಪಾದ್ಯ ಹೌದಯ್ಯಮಧ್ವರಾಯ ಮಧ್ವರಾಯ
ದೇವ ದೇವೇಶನ ಮುಖ್ಯ ಮಂತ್ರಿಯೆ ನಿನ್ನ ।
ಸೇವಕರೆನಿಸುವ
ಭಾಗ್ಯವಿತ್ತು ಕಾಯೋ ಮಧ್ವರಾಯ ಮಧ್ವರಾಯ ೧೬

ಯೋಗಿಗಳೊಡಯನೆ ಯೋಗ ಕ್ಷೇಮ ರೂಪಿ ।
ನಾಗಾರಿಶಿವ ಗುರುವೆ
ಬೇಗದಿ ಭವ ಬಿಡಿಸು ಮಧ್ವರಾಯ ಮಧ್ವರಾಯ
ಹಗಲು ಮಾನಿಯೆ ದೊರೆ ಅಶನ ಪಿಪಾಸಕ್ಕೆ ।
ನೀಗಿಸು ಇವರ ಬಾಧೆ
ಪಂಚ ಕೋಶಗ ಪ್ರಾಣ ಮಧ್ವರಾಯ ಮಧ್ವರಾಯ ೧೭

ಈ ಪದ್ಮ ಜಾಂಡವ ನೆರಡು ಭಾಗವ ಮಾಡಿ ।
ಶ್ರೀ ಪತಿದಯದಿಂದ
ತಾಳ ಹಾಕುವ ಶಕ್ತ ಮಧ್ವರಾಯ ಮಧ್ವರಾಯ
ಸರ್ಪ ಶಯನ ನೊಲಿಯೆ ಮಾರಾರಿ ವೃಂದಕು ।
ನೀಪಾಲಿಸಿದ ರುಂಟು
ಏನೆಂಬೆ ನಿಮ್ಮ ಮಹಿಮೆ ಮಧ್ವರಾಯ ಮಧ್ವರಾಯ ೧೮

ಭಾನುಸ್ಥ ಪ್ರಭು ನೀನು ಆಧ್ಯಾತ್ಮಗತನಾಗಿ । ಸಾನುರಾಗದಿ ಜಗ
ಚೇಷ್ಟೆಯ ನಡಿಸುವೆ ಮಧ್ವರಾಯ ಮಧ್ವರಾಯ
ಶ್ರೀನಿವಾಸನ ಪೂರ್ಣ ಕೃಪೆಗೆ ನೀ ಪಾತ್ರನು । ಪೂರ್ಣ ಭೋದ
ಗುರುವೆ ದೀನರೆಮ್ಮನು ಪಿಡಿ ಮಧ್ವರಾಯ ಮಧ್ವರಾಯ ೧೯

ಅಣವು ಮಹದ್ ಘನ ಪೂರ್ಣ ಪ್ರಜ್ಞನು ನೀನು । ಅನ್ನಜೀವರು
ನಿನಗೆ ಅನ್ನ ಶ್ರೀಶಗೆ ನೀನು ಮಧ್ವರಾಯ ಮಧ್ವರಾಯ
ನಿನ್ನ ರೂಪಗಳಲ್ಲಿ ನ್ಯೂನವಿಲ್ಲವು ಗುಣದಿ । ಮಣಿಸದೆ ಚಿತ್ತದಲ್ಲಿ
ಉಣಿಸೋ ಹರಿ ಕೀರ್ತನೆ ಮಧ್ವರಾಯ ಮಧ್ವರಾಯ ೨೦

ಭೇದ ಬೊಧೆಯ ನಿತ್ತು ಉದ್ದಾರ ಮಾಡಿದೆ । ವಾದಿ ಭೀಕರಯತಿ
ಶ್ರೆದ್ಧೆ ಮನೋಹರ ಮಧ್ವರಾಯ ಮಧ್ವರಾಯ
ಮುದ್ದು ಕೃಷ್ಣನ ತಂದು ತಿದ್ದಿ ಪದ್ದತಿಗಳ । ಶುದ್ಧವೈಷ್ಣವರಿಗೆಲ್ಲ
ವೃದ್ಧಿ ಮಾಡಿದೆ ಭಕ್ತಿ ಮಧ್ವರಾಯ ಮಧ್ವರಾಯ ೨೧

ಗುರು ಪ್ರಾಣ ನಾಥನೆ ಹರಿಯ ಮನದಂತೆ । ಪರಿಪರಿಲೀಲೆಯ
ನಿರುತ ತೋರುತಲಿಪ್ಪೆ ಮಧ್ವರಾಯ ಮಧ್ವರಾಯ
ಭರತ ಪ್ರಭುವೆ ನಿನ್ನ ಚರಣವ ಸಾರಿದೆ । ಗಾರು ಸಂಸಾರದಿ
ದಾರಿ ತೋರಲಿ ಬೇಕು ಮಧ್ವರಾಯ ಮಧ್ವರಾಯ ೨೨

ಜಯ ಜಯ ಜಯ ಹನುಮ ಜಯ ಜಯ ಜಯ ಭಿಮ
ಜಯ ಜಯ ಜಯ ಮಧ್ವ ಜಯ ಜಯ
ಮುಖ್ಯಪ್ರಾಣ ಮರಾಮರಾ
ಜಯ ಜಯತೀರ್ಥ ವೃಂದ್ಯನೆ ಜಯ ಕೃಷ್ಣವಿಠಲನ
ಜಯ ಜಯ ಪೊಗಳುವೆ ಜಯ ನೀಡಿ ಸಲಹೊ
ಮಧ್ವರಾಯ ಮಧ್ವರಾಯ ೨೩

## ಮಂದಾಸಲ ರಗಳೆ

### ೬೦

ಶ್ರೀಮದ್ಗುರುವರ ಪವನಗೆ ಜಯ ಜಯ
ರಾಮ ಪದಾಂಬುಜ ಭೃಂಗಗೆ ಜಯ ಜಯ
ತಾಮಸ ಕುರುಕುಲ ಧ್ವಂಸಕ ಜಯ ಜಯ
ಶ್ರೀ ಮತ್ಪೂರ್ಣ ಪ್ರಜ್ಞಗೆ ಜಯ ಜಯ ೧

ವಾಸುದೇವ ಸುನಾಮಕ ಜಯ ಜಯ
ದೋಷ ಜ್ಞಾನ ವಿನಾಶಕ ಜಯ ಜಯ
ಭೇಷ ಸೂರ್ಯ ವಿಭಾಸಕ ಜಯ ಜಯ
ವ್ಯಾಸ ಸುಭೋಧೆಯ ದರ್ಪಣ ಜಯ ಜಯ ೨

ಶುಭಗುಣಲಕ್ಷಣ ಶೋಭಿತ ಜಯ ಜಯ
ಅಭಯ ಪ್ರದ ಭವ ಮೋಚಕ ಜಯ ಜಯ
ಇಭವರದಾಜ್ಞಾಧಾರಕ ಜಯ ಜಯ
ವಿಭುಧ ಸುಖಾಂಬುಧಿ ಸೋಮನೆ ಜಯ ಜಯ ೩

ನಿತ್ಯ ಸದಾಗಮ ಕೋಶಗೆ ಜಯ ಜಯ
ಸತ್ಯವತೀಸುತ ಪ್ರೀಯಗೆ ಜಯ ಜಯ
ಸತ್ಯಾಖ್ಯಾತ ಸುಮಿತ್ರಗೆ ಜಯ ಜಯ
ಭೃತ್ಯ ಮನೋರಥ ಸುರತರು ಜಯ ಜಯ ೪

ಅಚ್ಚುತ ಪ್ರೇಕ್ಷರ ಶಿಷ್ಯಗೆ ಜಯ ಜಯ
ಸ್ವಚ್ಚಗುಣಾರ್ಣವ ಋಜುಪತಿ ಜಯ ಜಯ
ಕೆಚ್ಚೆದೆ ವೀರಾಗ್ರೇಸಗೆ ಜಯ ಜಯ
ತುಚ್ಚಮತಾಟವಿ ಪಾವಕ ಜಯ ಜಯ ೫

ಯತಿ ಕುಲಾಂಬುಜ ತರಣಿಗೆ ಜಯ ಜಯ
ಶೃತಿತತಿ ವಿಮಲ ಸುಭೋದಕ ಜಯ ಜಯ
ರತಿಪತಿ ಪಿತವರ ದೂತಗೆ ಜಯ ಜಯ
ಕ್ಷಿತಿಧರ ದ್ವಿಜಶಿವವಂದಿತ ಜಯ ಜಯ ೬

"ಶ್ರೀ ಕೃಷ್ಣವಿಠಲ" ಸದಾರತ ಜಯ ಜಯ
ಲೋಕ ಹಿತಪ್ರದ ನಿಜಗುಣ ಜಯ ಜಯ
ಶ್ರೀಕರ ಶುಭಕರ ಜಯಕರ ಜಯ ಜಯ
ಆಕಮಲಾಸುತ ರಯೀಪತಿ ಜಯ ಜಯ ೭

## ವಾಯ ದೇವರ ಮಹಿಮಾ ವರ್ಣನೆ

### ೬೧

### ಮೂರವತಾರ , ಷಟ್ಪದಿ

ಶ್ರೀರಮೇಶ ವಿಧೀರ ವಿಪವೃತ್ರಾರಿ
ಸುರಗಣ ವಿನುತ ಸರ್ವಾಧಾರ
ನಿರುಪಮನೆ ಸ್ವತಂತ್ರಗುಣಾರ್ಣವ ಪ್ರಭುವೇ ।
ಸಾರವಾಚದ ಕಾರ ಪತಿ ಓಂಕಾರ
ವ್ಯಾಹೃತಿ ವಾಚ್ಯ ಸರ್ವಪ್ರೇರಕ
ಬಲಸುಭಾಸಕ ಹರಿಯೆ ವಾಗ್ರಸನೆ ನಮಿಪೆ ೧

ಆಪ್ತನೆಂದರೆ ಪ್ರಾಣ ಸರಿ ಪರಮಾಪ್ತ
ಹರಿಯ ಯಥಾರ್ಥಜ್ಞಾನ ಪ್ರಾಪ್ತಿ ಮಾಡಿಸಿ
ವಿಷ್ಣು ಕರುಣವ ಕೊಡಿಸುವನು ತಾನು ।
ಆಪ್ತ ನೆನ್ನೆಯಥಾರ್ಥ ಪೇಳುವ ಮತ್ತೆ
ನಿಶ್ಚಯ ಜ್ಞಾನವುಳ್ಳವ ಶಕ್ತ ಕರುಣ
ಪಟುತ್ವಯುತನಿರ್ವಂಚನೆಗಳಿಂದ ೨

ಶಿಷ್ಯ ವಾತ್ಸಲ್ಯ ಯುತ ಗುರುಸರಿ
ವಿಶ್ವ ಜನಕನ ಪ್ರಥಮ ಭಕ್ತಶ್ವಾಸಗಿಂತಲು
ಬೇರೆಯವನಿಲ್ಲ ಪವಮಾನನವ ।
ದೋಷ ಸಂಶಯ ರಹಿತ ಹರಿ ವಿಶ್ವಾಸ
ಪಾತ್ರ ವಿಶೇಷ ಮಹಿಮಸುರಾಶ್ರಯ
ನಿವನು ವಂಶನೆ ನಿಸುವ ಸೂತ್ರಗಾನಮಿಪೆ ೩

ಯಾವ ಜ್ಞಾನ ಬಲ ಸ್ವರೂಪ ಸುದೇವ
ಕ್ರೀಡಾದಿ ಗುಣಯುತ ಭವನಾವಿಕ
ಪ್ರಭು ವಾಯುವಿನಗುಣ ಚರಿತೆ ವೃಂದಗಳ ।
ಪಾವನ ಬಳಿತ್ಥಾದಿ ಶೃತಿಗಳು
ಸಾವಧಾನದಿ ಪೊಗಳುವವೊ ಆಭಾವಿ
ಬ್ರಹ್ಮನ ಮೂಲ ರೂಪವುಜ್ಞಾನ ಬಲಮಯವು ೪

ಮೂಲ ರಾಮಾಯಣ ವಿಶೇಷವ
ಪೇಳುವ ಹನುಮನೇ ಪ್ರಥಮ ನಿಹಖೂಳ
ದಿತಿ ಜನ ಸೈನ್ಯ ಮಾರಕ ಭೀಮ ನೆರಡೆನ್ನಿ ।
ಶೀಲ ಸಖಗಳ ನೀವ ಶಾಸ್ತ್ರವ
ಪಾಲಿಸಿದ ಗುರು ಮಧ್ವರಾಯರೆ ಮೂಲ
ಮುಖ್ಯ ಪ್ರಾಣ ದೇವನ ಮೂರನೆಯ ರೂಪ ೫

ಪ್ರಾಣ ನೀತ್ರಯ ರೂಪಗಳು ಸಮವೆನ್ನುವದು
ಸರ್ವ ವಿಷಯದಿ ಮುಕ್ಕಣ ಪ್ರಮುಖರ
ಜ್ಞಾನ ದಾತೃವಿಗಿನ್ನು ಸಮವುಂಟೆ ।
ಜ್ಞಾನ ವಾಚಕ ಹನುಮ ಶಬ್ದವು
ಪೂರ್ಣ ಹರಿ ಸಂದೇಶವೈದನು
ಜಾನಕಿಗೆ ನಿರ್ದೋಷ ವಾಕ್ಯಗಳನ್ನು ಧೀಮಂತ ೬

ಪಂಚರಾತ್ರಾಗಮ ಪುರಾಣ ವಿರಂಚಿ
ಜನಕನ ತೋರ್ಪವೇದವು ವಂಚಿಸದ

ಇತಿಹಾಸಗಳು ಕೂಡುತಲಿ ಸಪ್ತಗಳ ।
ಮಿಂಚಿಸುತ ಸುಜ್ಞಾನ ಪಾಪದ
ಸಂಚಯ ತರಿವ ಕಾರಣದಿ ಬಲಿವಂಚಕನ
ಭಕ್ತರು ಕರೆಯುವರು ಸಪ್ತಶಿವ ವೆಂದು ೭

ಮಾತೆಯಂದದಿ ಹಿತವ ನೀಡುವ
ಶಾಸ್ತ್ರ ವಚನಕೆ ಮಾತೃ ವೆಂಬರು
ಸಪ್ತ ಶಿವಕರ ಮಾತೃಗಳ ಧರಿಸಿಪ್ಪ ನಿವನೆಂದು ।
ಖ್ಯಾತನಾಗಿಹ ಭೀಮ ನಾಮದಿ ತೀರ್ಥವೆನ್ನಲು
ಶಾಸ್ತ್ರವಿದಿತವು ಮತ್ತೆ ಮಧುವೆನೆ
ಸುಖವು ಮುಕ್ತಿಯನೀವ ಶಾಸ್ತ್ರವನು ೮

ಇತ್ತ ದೇವನೆ ಮಧ್ವನೆಂಬರು
ಸುತ್ತುತೀತ್ರಯ ನಾಮದರ್ಥವ ನಿತ್ಯ
ತಿಳಿಯುತ ಪಠಿಸಿ ಪಾಡಲುವಾಯು ದೇವನನು ।
ಭಕ್ತ ಬಾಂಧವನಾತ ವಲಿಯುತ ತತ್ವವೇತ್ತನ
ಮಾಳ್ವ ನಿಶ್ಚಯ ಭೃತ್ಯನಾನೆಂತೆಂದು
ಮಧ್ವರ ಸಾರಿ ಭಜಿಸುತಿರಿ ೯

ಮೂಢ ಭಕ್ತಿ ಇದಲ್ಲ ಗುರುವೆಡೆ
ಈಡು ಕಾಣೆನು ಜೀವ ಕೋಟಿಲಿ
ಪ್ರೌಢ ಮಧ್ವಗೆ ಪೂರ್ಣ ಪ್ರಜ್ಞನೆ ಈತ ಶ್ರುತಿ ಸಿದ್ಧ ।
ಬೀಡು ಮಾಡಿಹ ವಿದ್ಯೆ ನೂಕುತ
ತೊಂಡ ನೆಂದಿವರಡಿಗೆ ಬೀಳಲು
ಪಾಂಡುರಂಗನ ಬಿಚ್ಚಿ ತೋರುವ ಗೋ ಸಮುದ್ರದಲಿ ೧೦

ಏನ ಪೇಳಲಿ ಏನಪೇಳಲಿ
ಜ್ಞಾನನಿಧಿ ಸರ್ವಜ್ಞ ಗುರುವರ
ತಾನು ಗೈದ ಮಹೋಪಕಾರವ ಮುಕ್ತಿಯೋಗ್ಯರಿಗೆ ।

ಜ್ಞಾನ ಬಾಹುದೆ ಬಿಟ್ಟರೀತನ
ಶೂನ್ಯವೆ ಸರಿ ಎಲ್ಲ ಆತಗೆ ಮನ್ನಿಸುವನೆ
ಅನನ್ಯವನು ಹರಿ ಶರಣು ಆಚಾರ್ಯ ೧೧

ಈತನೇ ಆನಂದ ತೀರ್ಥನು
ಈತನೇ ಆಚಾರ್ಯ ನಿಶ್ಚಯ
ಈತನೇ ಸರಿಮಾತರಿಶ್ವನು ವಾಯುವಿನರೂಪ ।
ಈತ ಚರಿಸುವ ಶಾಸ್ತ್ರವ್ಯೂಹದಿ
ದೈತ್ಯರಿಂದಾಚ್ಛಾದಿತ ಗುಣಯುತ
ಆತ್ಮಪೂರ್ಣಾನಂದ ದೇವನ ಶಾಸ್ತ್ರಮಥಿಸುತಲಿ ೧೨

ಬಿಚ್ಚಿತೋರುವ ಸಾರ ವೃಂದಕ್ಕೆ
ಚುಚ್ಚುವನು ದುರ್ವಾದಿ ಮತಗಳ
ಕೆಚ್ಚೆದೆಯವನು ಗರ್ಜಿಸುತವೇದೋಕ್ತವಾಕ್ಯಗಳ ।
ಹೆಚ್ಚು ಹೆಚ್ಚೇ ಸರಿಯು ವಿಷ್ಣುವು
ಸ್ವಚ್ಛ ಪೂರ್ಣಾನಂದ ಸುಖಮಯ
ಪೃಚ್ಛ ಪರಿವಾರ ಸರಿ ವಿಧ್ಯಾದಿಗಳು ಹರಿಗೆಂದು ೧೩

ಕಚ್ಚಿಲತೆಗಳ ಬಿಸುಡುವಂದದಿ
ನುಚ್ಚು ಮಾಡುವ ಪ್ರಶ್ನೆನೀಕವ
ಅಚ್ಚನಾರಾಯಣನೆ ಪ್ರೇರಕ ನಿವಗೆ ಜನಕನಿಹ ।
ಮೆಚ್ಚು ಮಗ ಶ್ರೀ ಲಕ್ಷೀ ದೇವಿಗೆ
ರಚ್ಚೆತನುವನು ಕಿತ್ತುವೋಡಿಸಿ
ಹೆಚ್ಚಿಸುವ ಸುಜ್ಞಾನ ದೀಪವ ಹರಿಯ ಪ್ರಥಮಾಂಗ ೧೪

ಕೊಟ್ಟು ಉಂಗುರ ಸುಟ್ಟುಲಂಕೆಯ
ಬಿಟ್ಟು ಕಾಮವ ಮೆಟ್ಟಿಖಳರನು
ಜಟ್ಟಿ ಹನುಮನು ಪಟ್ಟ ಪುತ್ರನ ಪದವಿ ಸಾಧಿಸಿದ ।
ಹುಟ್ಟಿ ಕುಂತಿಲಿ ಕುಟ್ಟಿ ಕುರುಕುಲ

ಇಟ್ಟು ಮನದಲಿ ದಿಟ್ಟ ಕೃಷ್ಣನ
ಅಟ್ಟ ಹಾಸದಿ ಮೆರೆದ ಭೀಮನು ಜ್ಞಾನ ಭಾಸ್ಕರನು ೧೫

ಹುಟ್ಟು ಸಾವಿನ ಕಟ್ಟು ಬಿಡಿಸಲು
ಘಟ್ಟಿ ದಡಿಯಲಿ ಭಟ್ಟನೆನಿಸುತ
ತೊಟ್ಟು ಕಾವಿಯು ಬಟ್ಟೆ ತವಕದಿ ಭ್ರಷ್ಟದಸ್ಯುಗಳ ।
ಕೆಟ್ಟ ಮತಗಳ ಸುಟ್ಟು ವಾದದಿ
ಕೊಟ್ಟು ಸುಜನಕೆ ಸೂತ್ರ ಭಾಷ್ಯವ
ನೆಟ್ಟ ಸಂತರ ಮನದಿ ವಿಷ್ಣುವ ಶ್ರೇಷ್ಠಗುರುಮಧ್ವ ೧೬

ಏಕೆ ಭಯ ನಮಗಿನ್ನು ನಿರಯದ
ಏಕೆ ಸಂಶಯ ಮುಕ್ತಿ ವಿಷಯದಿ
ಏಕೆ ಕಳವಳ ಮಧ್ವರಾಯರ ಶಾಸ್ತ್ರ ಪೀಯೂಷ ।
ಜೋಕೆಯಿಂ ಪ್ರತಿದಿನವು ಸೇವಿಸೆ
ಶ್ರೀಕಳತ್ರನು ಕೈಯ ಬಿಡುವನೆ
ನಾಕಪತಿಯಿಂಬಿಟ್ಟು ಸಲಹುವ ಶಾಸ್ತ್ರಸಿದ್ಧವಿದು ೧೭

ಹೆಚ್ಚು ಮಾತೇಕಿನ್ನು ಹರಿಮನ
ಮೆಚ್ಚುಯೆನಿಸಿಹ ಮಧ್ವರಾಯರು
ಬಿಚ್ಚಿತೋರಿದ ತೆರದಿ ಕೃತಿಗಳ ಭಜಿಸಿಖಿಳ ಜನಕೆ ।
ಬಚ್ಚಿಡುತ ವಿಜ್ಞಾನ ಮರ್ಮವ
ನುಚ್ಚು ನೂಕುತ ದುರ್ಮತಕಿಡಿರಿ
ಕಿಚ್ಚು ಕಮಲೇಶ ನೊಲಿಮೆಗೆ ಬೇರೊಂದು ಪಥವಿಲ್ಲ ೧೮

ನಮ್ಮಹಿರಿಯರ ಖಿನ್ನನುಡಿಗಳ
ನೊಮ್ಮನದಿ ನೀವೆಲ್ಲ ಕೇಳಿರಿ
ರಮ್ಮೆಯರಸಗೆ ಸಮ್ಮತದ ಸಚ್ಛಾಸ್ತ್ರದರ್ಪಣವ ।
ಹೆಮ್ಮೆಯಿಂದಲಿ ಕೊಟ್ಟು ಬಂದೆವು
ಒಮ್ಮೆಯಾದರು ನೋಡುವರೆ ಈ
ನಮ್ಮ ಸಂತತಿ ಹಾ ಹರಿ ಹರೀಯೆಂಬ ಕ್ರಾಂತಿಯುತ ೧೯

ಉಣ್ಣಿರುಣ್ಣಿರಿ ಮಧ್ವಕಂದರೆ
ಉಣ್ಣುತಲಿ ಭವ ಹುಣ್ಣುವಳಿಯಿರಿ
ಅಣ್ಣ ಪ್ರಾಣನದಯವ ಯಾಚಿಸಿಘನ್ನ ಶಾಸ್ತ್ರಾನ್ನ ।
ಅನ್ನ ಶೃತಿಗಳು ವಿವಿಧ ಸ್ಮೃತಿಪ
ಕ್ವಾನ್ನ ಪಾಯಸ ಗೀತೆ ಭಕ್ಷ್ಯಗಳೆನ್ನಿ
ಬಗೆ ಬಗೆ ಸರ್ವ ಮೂಲವ ಸೂತ್ರಗಳೆ ಸಾರು ೨೦

ತುಪ್ಪವೆನ್ನಿರಿ ನ್ಯಾಯ ಸುಧೆಯನು
ಗೊಪ್ಪರಾಜರ ಗ್ರಂಥ ಹಲ್ಪವು
ಅಪ್ಪರಾಯರ ವಾಣಿ ಕ್ಷೀರವು ದಾಸ ಸಾಹಿತ್ಯ ।
ತಪ್ಪದೆಲೆ ತಿಂಬಂಥ ತಿಂಡಿಯು
ಚಪ್ಪರಿಸಿ ಭಾರತದ ಕೂಟನು
ವಪ್ಪುವನು ಶ್ರೀ ಕೃಷ್ಣ ದೇವನು ಭಕ್ತ ನುಣ್ಣಲಿವ ೨೧

ಎಂತು ಪೊಗಳಲಿ ನಿಮ್ಮ ಗುರುವರ
ಹಂತ ಸುರಗಣ ವೆಲ್ಲ ನಿಮ್ಮಡಿ
ನಿಂತು ಪಡೆದರು ಜ್ಞಾನ ಪ್ರಾತರ್ನಾಮಕನೆಶರಣು ।
ಕಂತೆ ಮತಗಳ ನಾಶಗೈದನ
ನಂತ ಮಹಿಮನೆ ದೀನ ನಾನಿಹೆ
ಕುಂತಿ ನಂದನ ನೀನೆ ತಿಳಸ್ಸೆ ಸಕಲ ಶಾಸ್ತ್ರಾರ್ಥ ೨೨

ಮೂರ್ತಳೆನಿಸುವ ಚಂದ್ರಮಾನಿನಿನಾಥ
ಪ್ರಾಣನೆ ಸೂರ್ಯ ನೊಳ್ ಆದಿತ್ಯ
ನಾಮದಿ ನಿಂತು ದಿಕ್ಪತಿಗಳಿಗೆ ಶಕ್ತಿಗಳ ।
ಇತ್ತು ಸೃಷ್ಠಿಯ ಕಾರ್ಯ ವೆಸಗುವೆ
ಉತ್ತರಾಯಣ ಪಗಲು ಮಾನಿಯೆ–
ನಿತ್ಯ ಪ್ರೇರಿತ ನೀಪ್ರಜಾಪತಿನಾಮ ಹರಿಯಿಂದ ೨೩

ಖ್ಯಾತ ಮೂರ್ತಾ ಮೂರ್ತ ಧಾರಕೆ
ತತ್ವಪತಿಗಳ ಪೋಷತನುವಲಿ

ಮೃತ್ಯುಹಾಗಶನಾಪಿಪಾಸಾಪಾನ ನಾಮಗಳ ।
ಎತ್ತಿ ನಡಿಸುವೆ ದೇಹ ಕಾರ್ಯವ್ರಾತ
ಬಿಡಲೇನೊಂದು ನಡೆಯದು
ಮಾತರಿಶ್ವನೆ ನಿಧಿಗು ಆರ್ಯುರ್ದಾತ ನೆನಿಸಿರ್ಪೆ ೨೪

ಅನ್ನ ವಿಧಿಯಿಂ ಕೊಂಬೆ ಸಮಸರಿ
ಯನ್ನ ಬ್ರಹ್ಮಗೆ ಜೀವ ಗಣತಾವುಣ್ಣಲಾರರು
ನಿನ್ನ ಬಿಡೆ ಪ್ರಾಣದಿ ಪಂಚಕನೆ ।
ಸ್ವಪ್ನ ನಿದ್ರಾ ಸಮಯದೊಳ್ ಹರಿಯನ್ನು
ಕೂಡಿರೆ ಕರಣಪರು ಘನಯಜ್ಞ
ನಡಿಸಿ ಸರ್ಮರ್ಪಿಸುವೆ ನೀನೊಬ್ಬ ದೇವನಿಗೆ ೨೫

ನಿನ್ನ ನಂಬಿದ ಭಕ್ತನಿಗೆ ಭವ
ಹುಣ್ಣು ಮುಟ್ಟದು ವಿಷ್ಣು ವಲಿಯುತ
ಮನ್ನಿಸುವ ಹರಿಯಾಜ್ಞೆಯಿಂಮುಕ್ತಿದನು ನೀ ಹೌದು ।
ಘನ್ನ ಬಾಧ್ವನೆ ವಿಶ್ವ ವಂಶನೆ
ನಿನ್ನ ಮಹಿಮೆಯಗಣ್ಯ ಸಿದ್ಧವು
ನಿನ್ನ ಧೊರೆ ಹರಿ ಒಬ್ಬ ಜೀವೋತ್ತುಮನೆ ಅಶರೀರ ೨೬

ಜ್ಞಾನ ಬಲ ಐಶ್ವರ್ಯಗಳು ಪರಿಪೂರ್ಣ
ಸರಿ ವೈರಾಗ್ಯ ಹಾಗೆಯೆ ಪ್ರಾಣನಿನ್ನಲಿ
ಕರಿಸುವೆಯೊ ಆಧ್ಯರ್ಥ ನಾಮದಲಿ ।
ಮಾನ್ಯ ವಿಷ್ಣುಸಹಾಯ ನಿನಗೈನ್ಯೂನ
ವಿಲ್ಲವು ಯಾವ ತೆರದಲುಕಾಣೆ
ಅಪಜಯ ಜೀವ ಸಾಧನೆಯೆಲ್ಲ ನಿನ್ನಿಂದ ೨೭

ಶೇಷಗಸದಳ ನಿನ್ನ ಪೊಗಳಲು
ಶೇಷ ಸರಿ ಬಡದಾಸನಹೆ ವಿಶ್ವಾಸದಿಂ
ಸಂವತ್ಸರನೆ ನೀಕಾಯಬೇಕೆಂಬೆ ।
ಏಸು ಜನ್ಮಗಳನ್ನು ಕೊಟ್ಟರು

ಶ್ವಾಸ ಪತಿತವ ಮತದಿ ಪುಟ್ಟಿಸಿ
ದಾಸ ಭಾಗ್ಯವ ನೀಡು ಹರಿಯೊಳ್ ಶುದ್ಧ ಭಕ್ತಿಯುತ ೨೮

ಎರಡು ಸಹ ಮೂವತ್ತು ಲಕ್ಷಣ
ವಿರುತಿಹ ಜಗದ್ಗುರುವೆ ವಿಷ್ಣುವಿಗೆರಡು
ಬಗೆವರ ಮುರಿದು ಶೃತಿಗಳಸಾರ ವೇನೆನ್ನ
ಎರಡು ಸರಿಯೆಂತೆಂದು ಸ್ಥಾಪಿಸಿ
ಎರಡು ವಿದ್ಯೆಗಳಿರವು ತೊರುವ
ಲೆರಡು ಸುಖಗಳ ಪಡೆಯೆಸಾಧನ ಮಾರ್ಗ ನೀಡ್ವೆಬತ ೨೯

ಸರ್ವ ಶಕ್ತನೆ ಶರ್ವ ವಿನುತನೆ
ಸರ್ವ ಸರ್ವಗ ಹಿರಿಯ ತನಯನೆ
ಸರ್ವ ಜಗದಾಧಾರ ಪೋಷಕ ಸರ್ವ ತೋವರನೆ ।
ಸರ್ವ ಕಾಲದಿ ಸರ್ವ ದೇಶದಿ
ಸರ್ವ ಗುಣದಿಂ ಹರಿಯ ಯಜಿಸುವ
ಸರ್ವ ಸದ್ಗುಣ ಪೂರ್ಣ ದೋಷವಿದೂರ ಸರ್ವಜ್ಞ ೩೦

ಹಿಂದೆ ಪೂರ್ವಜರೆಲ್ಲ ಕೂಡುತಲೊಂದು
ಪಾಯವಗೈದು ಮೃತ್ಯುವತಂದು
ವಡ್ಡಲ್ ದಿವಿಜ ವೃಂದಕೆ ಕುಂದು ವದಗಿಸಲು ।
ಕಂದುತಳಿಯಲ್ ನಿಖಿಲ ಸುರಗಣ
ಕುಂದು ಮೃತ್ಯುವ ಗೈದು ಪುಡಿಪುಡಿ
ವಂದನಾರ್ಹನು ಒಬ್ಬನೀನೇ ಯೆಂದು ಸ್ಥಾಪಿಸಿದೆ ೩೧

ಪಾಹಿ ಅಮ ಶುಚಿ ಯೊಗ ಕ್ಷೇಮನೆ
ಪಾಹಿ ಅಮರಲಲಾಮ ಅನಿಲನೆ
ಪಾಹಿ ಹರಿಯಾ ಭಾಸಕನೆನಿರಪೇಕ್ಷ ನಿರವದ್ಯ ।
ಪಾಹಿ ಸತ್ಯ ವಿಶುದ್ಧ ಸತ್ವನೆ
ಪಾಹಿ ಲಕ್ಷ್ಮೀ ಪುತ್ರ ಭೃತ್ಯನೆ
ಪಾಹಿ ಜೀವಗ ಬಾದರಾಯಣಪ್ರೀಯ ಮಹರಾಯ ೩೨

ಪಾಹಿ ಹನುಮನೆ ಭೀಮ ಮಧ್ವನೆ
ಪಾಹಿ ದುರ್ಮತ ಧ್ವಾಂತ ಸೂರ್ಯನೆ
ಪಾಹಿ ನತಜನ ಪಾಲ ಪ್ರಾಣನೆ ಪಾಹಿ ಶ್ರೀಸುತನೆ ।
ಪಾಹಿ ಜಗದಾಧಾರ ಸೂತ್ರನೆ
ಪಾಹಿ ಸಾಮನೆವಂಶ ದೂರನೆ
ಪಾಹಿ ಹರಿಯಚ್ಛಿನ್ನ ಭಕ್ತನೆ ಪಾಹಿ ವಿಜ್ಞಾನ ೩೩

ಪಾಹಿ ಋಜುಪತಿ ವಾಯುಕೂರ್ಮನೆ
ಪಾಹಿ ಜೀವ ಲಲಾಮ ಗುಣನಿಧಿ
ಪಾಹಿ ಶುಚಿ ಸರ್ವಜ್ಞ ಸಾಮಗಭಾವಿ ಶತಮೋದ ।
ಪಾಹಿ ಸತ್ಯನೆ ಕಲಿವಿದಾರಣ
ಪಾಹಿ ಗುರು ಗೋವತ್ಸ ರೂಪಿಯೆ
ಪಾಹಿ ಮಿಷ್ಣು ಪದಾಬ್ಜಮಧುಕರ ಭಾರತೀ ಕಾಂತ ೩೪

ಪಾಹಿ ಅಮೃತನೆ ವಿಶ್ವರಜ್ಜುವೆ
ಪಾಹಿ ಬೃಹತೀ ಛಂದ ಮಾನಿಯೆ
ಪಾಹಿ ಹಂಸೋಪಾಸಕ ಪ್ರಭು ಆಖಣಾಶ್ಮಸಮ ।
ಪಾಹಿ ಸಾಯಂಖ್ಯಾತ ಜೀವಗ
ಪಾಹಿ ಜಗಚೇಷ್ಟಾ ಪ್ರವರ್ತಕ
ಪಾಹಿ ಅನಿಲನೆ ಶೇಷವಿಪಶಿವ ವಂದಿತಾಂಘ್ರಿಯುಗ ೩೫

ಪಾಹಿ ಪರಿಸರ ಪಂಚ ಕೋಶಗ
ಪಾಹಿ ಗುಣನಿಧಿ ಕೊವಿದೋತ್ತಮ
ಪಾಹಿ ನಮಿಸುವೆ ಅಣುಮಹದ್ಘನ ರೂಪ ವಿಖ್ಯಾತ ।
ಪಾಹಿ ವಿಶ್ವಗ ವ್ಯಸನ ವರ್ಜಿತ
ಪಾಹಿ ಹರಿಯನು ನಿತ್ಯನೋಳ್ಪನೆ
ಪಾಹಿ ವಿಷ್ಣುದ್ವಾರ ಶರಣ್ಯ ಪಾಹಿ ಹರಿ ಸಚಿವ ೩೬

ಜಯ ಜಯವು ಶ್ರೀ ಹನುಮ ಭೀಮಗೆ
ಜಯ ಜಯವು ಶ್ರೀ ಮಧ್ವರಾಯಗೆ

ಜಯ ಜಯವು ತತ್ವೇಶರರಸಗೆ ಮುಖ್ಯಪ್ರಾಣನಿಗೆ ।
ಜಯ ಜಯವು ಜಯತೀರ್ಥ ಹೃಸ್ಥಗೆ
ಜಯ ಜಯವು ಶ್ರೀಕೃಷ್ಣವಿಠಲಗೆ
ಜಯ ಜಯವು ನಾರಾಯಣಗೆ ಸಿರಿಕಾಂತ ವಿಷ್ಣುವಿಗೆ ೩೭

## ೬೨

## ಷಟ್ಪದಿ

ಹಾಟ ಗರ್ಭನ ರಾಣಿ ಸುರಗಣ ।
ಕೂಟವಾಳುವ ಶ್ರೇಷ್ಠ ಶಾರದೆ ।
ಸಾಟಿ ಯಾರೆಲೆ ವೇದ ಮಾನಿಯೆ ವಾಣಿ ಮಂದಿರೆಯೆ ।
ಏಟು ತಿಂದೆನೆ ಭವದಿ ತಾಯಿಯೆ ।
ಕೈಟ ಭಾರಿಯ ಭಕ್ತಿ ವೃಕ್ಷವ।
ನಾಟಿ ಹೃದಯದಿ ಬೆಳಸೆ ಶುಭಗುಣ ಖಣಿಯೆ ಮಂಗಳೆಯೆ ೧

ಗಾನಕವಿಕುಲ ಹಂಸವ್ಯೂಹದಿ । ಹೀನ ಕಾಕನ
ಪೋಲ್ವ ಮೂಢನ ।
ಮಾನ ಕಾಯುವ ಭಾರ ನಿನ್ನದೆ ದೀನ ವತ್ಸಲೆ ಯೆ।
ಏನು ಬೇಡೆನೆ ಅನ್ಯ ವಿಷಯವ । ಗಾನಕಲೆ
ಶುಭಮರ್ಮ ಕಳಿಸುತ ।
ಶ್ರೀನಿವಾಸನ ಭಕ್ತಿ ಜ್ಞಾನವಿರಕ್ತಿ ಕೊಡಿಸಮ್ಮ ೨

ಮಾನ್ಯ ಕೋಕಿಲ ವಾಣಿ ಪುಸ್ತಕ । ಪಾಣಿ ಸುಂದರ
ವೇಣಿ ವೀಣೆಯ ।
ಗಾನ ನುಡಿಸುವ ಜಾಣೆ ವಿಧಿಮನ ಹಾರಿ ಕೋಮಲೆಯೆ ।
ಹೀನ ಕಲಿಗುಣ ಶೂನ್ಯ ನಿತ್ಯದಿ । ಕಾಣ್ವೆ ಬಿಂಬನ
ಮೂರು ರೂಪಳೆ ।
ಸಾನುರಾಗದಿ ವಲಿದು ಹರಿಪಥ ಸಿಗಿಸಿ ಪೊರೆಯಮ್ಮ ೩

ಬೊಮ್ಮನಂಕೊಡುತ್ತೆ ಬಹುವಿಧ ।
ರಮ್ಯರೂಪಗಳಿಂದ ನಾ ನಾ ।
ರಮ್ಯಸೃಷ್ಟಿಗಳಿಗನುವಾಗುತ ಹರಿಯ ಸೇವಿಸಿದೆ ।
ಅಮ್ಮ ಶ್ರುತಿತತಿ ಅರ್ಥಗಳ ಹರಿ। ಸಮ್ಮತ ತೆರದಿ
ನುಡಿಸಿ ಕರಿಸುವಿ ।
ಯಮ್ಮ ಜಗದಿ ಸರಸ್ವತೀಯಂತೆಂದು ವಿಪಮಾತೆ ೪

ಶಕಲ ಜ್ಞಾನ ವಿದೂರೆ ವಿದ್ಯಾ । ಮುಕುಟ
ಧರಿಸಿಹೆಯಮ್ಮ ಬೋಧಿಸೆ । ಯುಕುತಿ ಶಾಸ್ತಗಳನ್ನು
ಮಾಯ್ಗಳ ಗೆಲ್ವ ಬಗೆ ತೋರು ।
ಪ್ರಕಟ ಮಾಡುತ ಶಬ್ದ ನಿಚಯದಿ ಸಕಲ ರೊಡೆಯನ
ಮಾತೆ ಯೆನಿಸಿಹೆ
ವಿಕಟ ಜಗದವತಾರ ವರ್ಜಿತೆ ಶರಣು ಶ್ರೀ ಸೊಸೆಯೆ ೫

ಶ್ರದ್ದೆ ಪ್ರದ್ಯುಮ್ನ ಕೃತಿ ಸುತೆಸು । ಮಧ್ವಶಾಸ್ತ್ರದಲಿ ಮನದಕು।
ಬುದ್ದಿಗಳ ಕಡಿಸಿ ಪ್ರಸಿದ್ಧಿಯ ನೀಡಿ ಸಾಕಮ್ಮ ।
ಪದ್ಮನಾಭನ ವೇದ ಸಮ್ಮತಿ । ಯಿಂದ ಪಾಡುತ ಭಾಗ್ಯವಾಹುದೆ ।
ಎಂದಿಗಾದರು ನೀನೆ ಮನದಲಿ ನಿಂತು ನುಡಿಸದಲೆ ೬

ವೇದ ಶಾಸ್ತ್ರಗಳೊದಿ ಕೇಳದ । ಗಾಧ ಮೂಢ
ವಿನೋದ ಗೊಷ್ಠಿಯ ।
ಹಾದಿ ಹಿಡಿದವಿವೇಕಿ ನಾನಲೆ ಕೇಳು ವಿಪತಾಯೆ ।
ಮೋದದಿಂ ನೀಕಾಯದಿದ್ದರೆ ಚರಣವ ।
ಮಾಧವನು ಸಿಗನಮ್ಮ ।
ಆದರರದಿ ಸಾರಿದೆನು ಕವಿಜನಗೇಯೆ ವಿಧಿಜಾಯೆ ೭

ಅಂಬೆ ನೀರಜ ಬಿಂಬೆ ಸ್ವಾತಿಕೆ । ಬೊಂಬೆ
ರುದ್ರರ ಬಿಂಬೆ ಭಕ್ತರ ।
ಸ್ತಂಭೆ ಶಾಂಭವಿ ವಂದ್ಯೆ ನಿತ್ಯದಿ । ಉಂಬೆ ಸುಖಗಳನೂ ।

ತುಂಬೆ ಶಾಸ್ತ್ರದ ಸಾರ ಮನದಲಿ । ವೆಂಬೆ
ಹರಿಯಡಿ ಮನದಿ ಕಾಂಬುವ । ಹಂಬಲದ
ಕೈಗೊಡಿಸಮ್ಮ ಸಮೀರ ಗ್ಹೇಳುತಲಿ ೮

ತತ್ವ ಪತಿಗಳ ನೆತ್ತಿ ಕುಣಿಸುವೆ । ಭೃತ್ಯ ನಾನೆಲೆ ನಿತ್ಯ ಭಕ್ತಳೆ ।
ವಿತ್ತ ವನಿತಾ ವ್ಯಾಧಿ ಹರಿಸುತ ಚಿತ್ತ ಶುದ್ಧಿಯನು ।
ಇತ್ತು ಹತ್ತಿಸು ನೆತ್ತಿಗೆಂಬುವೆ ।
ಸಪ್ತ ಶಿವಗಳ ಮರ್ಮ ಬೇಗನೆ
ವತ್ತಿ ಮಿಥ್ಯಾಜ್ಞಾನ ತಿಮಿರವ ಭಕ್ತಿ ಭಾಸ್ಕರಳೆ ೯



ನಳಿನ ನಾಭನ ವಲುಮೆ ಗಾಗಿಯೆ । ವಳಿತು
ಸುಖಗಳನುಂಬೆ ಭುಜಿವಿದಿ।
ತಳಿಹೆ ಪತಿತೆರದ್ವಿಶತ ಕಲ್ಪಗಳಲ್ಲಿ ಸಾಧನೆಯು ।
ವಳಿದು ಸ್ಥಾನವ ನೀಡಿ ಅಂಗದಿ । ಕಳದೆ
ಶಾಪವ ಶ್ಯಾಮಲಾಶಚಿ ।
ಗಳಿಗೆ ದ್ರೌಪತಿ ಇಂದ್ರ ಸೇನಾಕಾಳಿ ಚಂದ್ರಾಖ್ಯೆ ೧೦

ಮೂರ್ತ ಮಾನಿಯೆ ಚಂದ್ರಮಾವಿ । ಖ್ಯಾತಳಾಗುತ
ನಿಂತು ಶಶಿಯಿಲ್।
ಭೂತ ಗುಪಚಯವಿತ್ತು ಸೃಷ್ಟಿಯ ಕಾರ್ಯಗನುವಾಹೆ ।
ನೀತ ಪತಿ ಸಹವಾಸ ವೇಸ । ವ್ರತ್ರ
ನಿನಗಹುದಮ್ಮ ಕೊರತೆಯು ।
ಯಾತರಿಂದಲು ಯಾವಕಾಲುಕು ಇಲ್ಲರಯಿ ನಿನಗೆ ೧೧

ಮಾನ್ಯ ಮಧ್ವರ ಶಾಸ್ತ್ರ ಕನ್ಯಗೆ । ಚೆನ್ನ ಕನ್ನಡ
ಕವಚ ತೊಡಿಸುತ ।
ಶ್ರೀನಿವಾಸನಭಕ್ತನಿಚಯಕ್ಕೆ ಕೈಮುಗಿದು
ಆನತಾಮರಧೇನು ಮುಖ್ಯ । ಪ್ರಾಣಮಂದಿರನಾದಶುಭಗುಣ
ಪೂರ್ಣಪೂರ್ಣಾನಂದ ತದ್ವನ ಬಾದರಾಯಣಗೆ ೧೨

ದೈನ್ಯ ದಿಂದಸಮರ್ಪಿಸುತ ಪವಮಾನರಾಯನ ಕರುಣವೆಲ್ಲೆಡೆ
ಅನ್ಯ ವಿಷಯವ ಬೇಡದಂದದಿ ಮಾಡುತಲಿಯನ್ನ ।
ಜ್ಞಾನ ಭಕ್ತಿ ವಿರಕ್ತಿ ಸಂಪದ । ನೀನೆ ನೀಡುತ ಸಲಹೆ ಕೃತಿಸುತೆ ।
ನೀನೆ ಸಾಸರಿ ನಮಿಪೆ ಬೃಹತೀಖ್ಯಾತ ಭಾರತಿಯೆ ೧೩

ಸೂರಿ ಜಯ ಮುನಿ ವಾಯು ವಂತರ ।
ಸೇರಿ ತಾಂಡವ ಮಾಡಿ
ಮೆರೆಯುವ । ಶ್ರೀ ರಮಾವರ ಕೃಷ್ಣವಿಠಲನ ಪಾದ ಪಂಕಜವ
ಸೂರಿ ಸಮ್ಮತ ವೇದ ಗಾನದಿ । ಸಾರಿ ಸಾರಿಸೆ ಸೇರು ವದನದಿ ।
ನೀರ ಜಾಕ್ಷನ ಸೊಸೆಯೆ ಶುಚಿಶತಿ ನಮಿಪೆ ಭೂಯಿಷ್ಠ ೧೪

## ಶ್ರೀಜಯತೀರ್ಥರು

### ೬೩

ಗುರುರಾಜ ಕರುಣದಿ ನೋಡಯ್ಯ ಪ

ಸುರಗಣ ಒಡೆಯನೆ ಕರವೆತ್ತಿ ಮುಗಿಯುವೆ
ಕರೆಕರೆ ಮಾಡದೆ ಚರಣವ ತೋರಿಸು ಅ.ಪ.

ಭವಸಾಗರದಿ ಬಿದ್ದು ಭವ ಮೋಚಕನ ಬಿಟ್ಟು
ಭವಣೇಗಳನೆಪಟ್ಟು ನಾ ಒದ್ದಾಡುವೆ ಇಂದು
ಅವನಿಯ ಜನರೊಳು ಅವಗುಣ ಪ್ರತಿಮೆಯ
ತವಕದಿ ಪೊರೆಯದೆ ಜವನಡಿಕಳಿಸೊದೇ ೧

ಅನುದಿನದೀ ನಾನು ಅನುಮಾನದಿಂದಲಿ ನೊಂದೆ
ಅನಿಲನ ಹಾದಿಯ ಬಿಟ್ಟು ಅನ್ಯರಾನಂಬೀ ಕೆಟ್ಟೆ
ತನುಮನ ನಿನ್ನಡಿ ಅರ್ಪಿಸಿನಂಬಿದೆ
ದಿನದಿನ ದಯದಿಂ ನಿನ್ನವರೊಳು ಸೇರಿಸೊ ೨

ಕಾಮಕೇಳಿಯಲಿ ಮುಳುಗಿ ಕಾಮಿನಿಯರ ಬರೆದೆ
ಕಾಮಜನಕನ ಮರೆತೆ ಸೋಮಶೇಖರ ಪ್ರಿಯನೆ
ಶಮದಮಪಾಲಿಸಿ ತಾಮಸ ಓಡಿಸಿ
ಸಾಮಜವರದನ ಪ್ರೇಮವ ಕೊಡಿಸೋ ೩

ಜ್ಞಾನಶೂನ್ಯನು ಆಗಿ ಶ್ವಾನಂದದಿ ಇರುವೆ
ಮಾನಾಭಿಮಾನವನ್ನು ನಿನಗೆ ಅರ್ಪಿಸಿದೆನೊ
ಅನಿಲನಶಾಸ್ತ್ರದಿ ಜ್ಞಾನವ ನೀ ನೀಡಿ
ಮನದಲಿ ನಲಿನಲಿ ಮುನಿಗಳ ಒಡೆಯಾ ೪

ವಿಧವಿಧ ಟೀಕೆಗಳನು ಮುದದಿಂದಲಿ ಮಾಡಿ
ಮೋದವಂತದ ತತ್ವಗಳ ಮುಂದಕ್ಕೆ ತಂದೆಯೋ
ಸದಯದಿ ಜಯಮುನಿ ವಾಯ್ವಾಂತರ್ಗತ
ಮಾಧವ ಕೃಷ್ಣವಿಠಲನ ತೋರುತ ೫

## ೬೪

ನಂಬಿ ಭಜಿಸಿರೋ _ ಜನರೆಲ್ಲರೂ _ ನಂಬಿ ಭಜಿಸಿರೊ ಪ

ಅಂಬುಜಾಕ್ಷ ಪ್ರಿಯಾ _ ನಮ್ಮ ಜಯರಾಯರಾ ಅ.ಪ

ಕಾಶಿಯಾತಕೇ _ ಬಲು ಕ್ಲೇಶ ಯಾತಕೇ
ಕಾಸು ಕಳಕೊಂಡು _ ಅತಿಘಾಸಿ ಯಾತಕೇ
ಶ್ರೀಶನಂಘ್ರಿ ಭಜಕರಾದ _ ವಾಸವಾವೇಶರಿವರ ಪಾದ
ಆಶೆಯಿಂದ ಭಜಿಸಲೂ _ ವಾಸುದೇವನೊಲಿವನು ೧

ನೇಮ ಯಾತಕೇ _ ನಿಷ್ಠೆ ಯಾತಕೇ
ಹೋಮ ಯಾತಕೇ _ ಕಷ್ಟಯಾತಕೇ
ಪ್ರೇಮದಿಂದಲೀ _ ಇವರ ಭಜಿಸಲೂ
ತಾಮಸಗುಣ _ ತಾನೇ ಓಡೋದು ೨

ಮಧ್ವಶಾಸ್ತ್ರದ _ ಚಂದ್ರರಿವರು
ಅದ್ವೈತವಾದವ _ ಗೆದ್ದಸಿಂಹರು
ಮಧ್ವರಾಯರಾ _ ಮುದ್ದುಮೊಮ್ಮಗ
ಸಿದ್ಧಸೇವ್ಯರು _ ಸುಧೆಯ ಕರ್ತರು ೩

ಇವರ ಧ್ಯಾನವೂ _ ಜ್ಞಾನದಾಯಕಾ
ಇವರ ಪೂಜೆಯೂ _ ಪಾಪನಾಶನ
ಇವರ ಸ್ಮರಣೆ _ ಕಲಿವಿ ಭಂಜನೆ
ಇವರ ಸೇವೆಯು _ ಮುಕ್ತಿಸೋಪಾನ ೪

ಶ್ರೀಕಳತ್ರನಾ _ ಆಜ್ಞೆಯಿಂದಲಿ
ನಾಕದಿಂದಲೀ _ ಇಲ್ಲಿ ಬಂದರು
ಏಕಮನದಿ _ ಶರಣು ಹೋಗಲು
ಪಾಪನಾಶನ _ ಪುಣ್ಯವೆಗ್ಗಳಾ ೫

ಮಳಖೇಡದೀ _ ನೆಲಸಿ ಇಪ್ಪರೂ
ನಳಿನನಾಭನ _ ಒಲಿಸುತನುದಿನಾ
ನಲಿಸಿ ಮನದೊಳು _ ಒಲಿಸುವಾತನೆ
ಶೀಲವಂತನು _ ಧನ್ಯ ಮಾನ್ಯನು ೬

ನರನ ವೇಷದಿ _ ಸುರರ ಒಡೆಯನೊ
ಹರಿಯ ಕರುಣದಿ _ ಮೆರೆಯುತಿರ್ಪರು
ಶರಣಜನರ _ ದುರಿತರಾಶಿಯ
ತರಿದು ಶೀಘ್ರದಿ _ ಪೊರೆಯುತಿಪ್ಪರು ೭

ಎತ್ತಿನ್ವೇಷದಿ _ ವಾತದೇವನ
ಪ್ರೀತಿ ಪಡೆದು _ ಖ್ಯಾತಿಆದರು
ಮತ್ತೆ ಯತಿಯಾಗಿ _ ಕೀರ್ತಿಯಿಂದಲಿ
ಬಿತ್ತರಿಸಿದರು, ತತ್ತ್ವಶಾಸ್ತ್ರವ ೮

ಕಾಗಿನೀನದೀ _ ತೀರವಾಸರು
ವಿಗತರಾಗರು _ ನಿತ್ಯತೃಪ್ತರು
ಜಾಗರೂಕದಿ _ ಪೊಗಳಿ ಪಾಡಲು
ನಿಗಮವೇದ್ಯನು _ ಬೇಗ ಪೊರೆಯುವ ೯

ಶೇಷಾವೇಷದಿ _ ವಾಸಿಸುವರು
ಶೇಷಶಯನನ _ ದಾಸರೀವರು
ಬೆಸರಿಲ್ಲದೆ _ ಆಸೆ ತೊರೆದು
ದಾಸನೆನ್ನಲು _ ಪೋಷಿಸೂವರು ೧೦

ಕೆರೆಯ ಏರಿಯು _ ಬಿರಿದು ಪೋಗಲು
ಮೊರೆಯ ಇಟ್ಟರು _ ಇವರ ಅಡಿಗೆ
ಭರದಿ ಕರುಣದಿ ಹರಿಯ ಸ್ತುತಿಸಿ
ಕರದಿ ಮುಟ್ಟಲು _ ಏರಿ ನಿಂತಿತು ೧೧

ಯರಗೋಳದ _ ಗುಹೆಯ ಒಳಗೆ
ಮರುತದೇವನ _ ಕರುಣದಿಂದಲಿ
ಪರಿಪರಿಯಲಿ _ ಬರೆದು ಟೀಕೆಯ
ಕರೆದು ಸುರಿದರು _ ತತ್ವಕ್ಷೀರವ ೧೨

ಇವರ ನಾಮವು _ ವಿಜಯ ಸೂಚಕ
ಇವರ ಕೀರ್ತನೆ _ ಭವಕೆ ಔಷಧ
ಇವರ ಕರುಣದಿ _ ಅನಿಲನೊಲಿವನು
ಇವರ ಶಿಷ್ಯರೇ _ ಅವನಿಶ್ರೇಷ್ಠರು ೧೩

ಸರ್ವಕ್ಷೇತ್ರದ _ ಯಾತ್ರೆಯಾ ಫಲ
ಸರ್ವದಾನವ _ ಮಾಡಿದ ಫಲ
ಇವರ ಪಾದವ _ ನಂಬಿ ಭಜಿಸಲು
ತವಕದಿಂದಲಿ _ ತಾನೇ ಬರುವುದು ೧೪

ಜಯತೀರ್ಥರ _ ಹೃದಯವಾಸಿಯು
ವಾಯುಹೃದಯಗ _ ಕೃಷ್ಣವಿಠ್ಠಲನು
ದಯದಿ ನುಡಿಸಿದಾ _ ಪರಿಯು ಪೇಳಿದೆ
ಜೀಯ ಕೃಷ್ಣನೆ _ ಸಾಕ್ಷಿ ಇದಕ್ಕೆ ೧೫

## ಶ್ರೀ ವಾದಿರಾಜರು

### ೬೫

ಗುರುವರ ದಯಮಾಡ್ವೈ ಹಯಮುಖ
ಪದಯುಗ ನಿಜ ಭಕ್ತಾಗ್ರಣೀ ಪ

ಚರಣವ ನಂಬಿದೆ ಮುಂದಿನ ಪರಿಸರ
ಸರಸರ ಸುರಿಸುತ ವರಗಳ ಕರುಣದಿ ಅ.ಪ

ನಿನ್ನನೆ ನಂಬಿದ ಅನ್ಯರವಲ್ಲದ
ಚಿಣ್ಣರ ಬಿಡುವರೆ ಘನ್ನಗುಣಾರ್ಣವ
ಸಣ್ಣವರೆನ್ನದೆ ಮನ್ನಿಸಿ ಕೈಪಿಡಿ
ಚಿನ್ಮಯ ನಂದನ ಅನ್ಯರ ಪೋಷಕನೆ ೧

ದಾಸರ ದೋಷವಿನಾಶಗೈವುದು
ಕ್ಲೇಶವ ಭಾವೀಶ್ವಾಸ ನಿಯಾಮಕಗೆ
ವಾಸವ ಗುರುಶಿವ ಶೇಷಸುವಂದಿತ
ವಾಸಿಸಿ ಹೃದಯದಿ ಭಾಸಿಸು ಹರಿದಾರಿ ೨

ಆರ್ತಿವಿದೂರ ಪರಾರ್ಥಕೆ ನೆಲಸಿಹ
ಖ್ಯಾತ ಕವೀಂದ್ರನೆ ಪ್ರೀತಿಯ ಬೇಡುವೆನು
ಮಾತೆಯ ತೆರಮುರವ್ರಾತವ ನೋಡದೆ
ನಾಥನೆ ನೀಡಿಸು ಆತ್ಮವಿಕಾಸವನು ೩

ವಿಜ್ಞಾನಾಸಿಯ ದಾನವ ಗೈಯುತ
ದೀನನ ಮೌಢ್ಯದಿ ಶೂನ್ಯವಗೈಯುತ
ಪ್ರಾಜ್ಞನ ಮಾಡ್ಯೆ ಪ್ರಾಜ್ಞಲಲಾಮನೆ
ಆಜ್ಞಾಧಾರಕ ನಿನ್ನ ಜನುಮ ಜನುಮದಲಿ ೪

ವೇದವ್ಯಾಸರ ಪಾದಾರಾಧಕ ಮೋದಮುನೀಂದ್ರರ
ಪ್ರೇಮವ ಪಡೆದಿಹನೆ ವೇದವ್ಯಾಸರ ಸೇವಿಪ ಭಾಗ್ಯವ
ಸಾದರದಿಂ ಕೊಡು ಕಾಮಿತ ಕೊಡುವವನೆ ೫

ಹಿರಿಯರ ಕರುಣದಿ ಕಿರಿಯರ ಸಾಧನೆ
ಶರಣನ ಭಾರವು ಸೇರಿದೆ ನಿಮ್ಮಡಿ
ಹರಣವ ವಪ್ಪಿಸಿ ಚರಣವ ಪಿಡಿದಿಹೆ
ಪೊರೆಯ್ಯೆ ಮನತರ ಕುರುಡನು ನಾನಿಹೆ ೬

ಮಿಥ್ಯಾಮತ ವಿಧ್ವಂಸನೆ ಗೈಯುವ
ಸದ್ಗ್ರಂಥಂಗಳದಾತನೆ ಬಾಗುವೆನು
ಪಾರ್ಥನಸಖ "ಶ್ರೀಕೃಷ್ಣವಿಠಲ"ನ
ಭಕ್ತಿತರಂಗವ ನೀಡುತ ಕಾಯುತ ೭

## ೬೬

ವಾದಿರಾಜಗುರು ನಿಮ್ಮಡಿಗೆರಗುವೆ
ಸಾದರದಿಂದಲಿ ಮಂದನ ಕೈಪಿಡಿಯೋ ಪ

ಸಾಧುಜನಾಶ್ರಯ ಮೇದಿನೀಸುರತರು
ಪಾದವಪಿಡಿದಿಹೆ ಬೋಧಿಸು ವಿಜ್ಞಾನ ಅ.ಪ.

ಕಾದಿಡೆ ಸುಜನಕೆ ಮಧ್ವಾಗಮನಿಧಿ
ಸಾದರದುದಿಸಿದಿ ಬುಧಜನಕುಲಮೌಳಿ

ಬೂದಿಯ ಮಾಡುತ ದುರ್ಮತಜಾಲವ
ಮಾಧವ ಮಧ್ವರ ಸೇವೆಯ ಸಲ್ಲಿಸಿದೇ ೧

ಕವಿತಾವನಿತೆಯ ಕುಣಿಸುತ ಶಾಸ್ತ್ರವ
ನವವಿಧ ರಸದಿಂ ಪೇಳಿದೆ ಶಿಷ್ಯರಿಗೆ
ಭುವಿಯಲಿ ಮೆರೆದೆಯೋ ಮಧ್ವಾನುಜ ತೆರ
ಪವನ ಮತಾಬ್ಧಿಯ ಸೋಮನೆ ಶರಣೆಂಬೆ ೨

ರಿಕ್ತಬ್ರಹ್ಮನ ಭಕ್ತರ ನೊಲ್ಲನು
ಯುಕ್ತಿಗಳೆಂಬುವ ಮಲ್ಲಿಗೆ ಪಟ್ಟಲಿ
ಶಕ್ತಯತೀಂದ್ರನೆ ಅಡಗಿಸಿ ಸರ್ವೋ-
ದ್ರಿಕ್ತನ ಗುಣಗಣ ಸಾಧಿಸಿ ನೀ ಮರೆದೇ ೩

ತೀರ್ಥಕ್ಷೇತ್ರವ ಪಾವನಗೈಯ್ಯಲು
ಸುತ್ತುತನೀಡಿದೆ ತೀರ್ಥಪ್ರಬಂಧವನೂ
ಪಾರ್ಥಿವ ಮೊರೆಯಿಡೆ ಅಕ್ಷತೆನೀಡುತ
ಶತ್ರುಗಳಳಿಸುತ ಪೊರೆದೆಯೊ ಕರುಣಾಳು ೪

ಅರವತ್ನಾಲ್ಕು ಕಲಾಜ್ಞನೆ ಗುಣನಿಧಿ
ಸುರಗಣಗಚ್ಚರಿಯೇ ಸರಿ ತವ ಮಹಿಮ
ಹರಿಸಿದೆ ಮೃತ್ಯುವ ರಾಜನ ಅಳಿಯಗೆ
ಸಿರಿಪತಿ ವ್ಯಾಸರ ಕಂಡೆಯೊ ಪ್ರತ್ಯಕ್ಷ ೫

ಗುಂಡಕ್ರಿಯೆ ವೈಕುಂಠ ವರ್ಣನೆ
ಕಂಡಕಂಡಪದ ಪುಂಜವ ಪಾಡುತಲೀ
ಕೂಡದು ಭಾಷಾ ಸಡಗರ ವೆಂಬುದ
ಪಂಡಿತನಿಕರಕೆ ತೋರಿದೆ ಯತಿತಿಲಕಾ ೬

ಜಂಗಮಗರುವನ ಭಂಗಿಸೆ ತವಕದಿ
ಇಂಗಿಸಿ ಸಲಹಿದೆ ವಿಪ್ರರ ಕಷ್ಟಗಳ
ಗಂಗಾಪಿತ ತ್ರಿವಿಕ್ರಮ ದೇವನ
ಮಂಗಳ ಸುರಿಸಲು ಸ್ವಾದಿಲಿ ಸ್ಥಾಪಿಸಿದೆ ೭

ಗೋಧರ ಹಯಮುಖ ಸಾಕ್ಷಾತ್ತಿ ಎಂಬುವ
ಛಂದದಿ ನೀಡಿದ ಓದನವೆಂತೆನೆ
ಸಾಧ್ಯವೆ ಶೇಷನು ಪೊಗಳಲು ನಿಮ್ಮನು
ಮಂದಿರನವನಿವ ನೆನ್ನುತ ಕೈ ಪಿಡಿಯೋ ೮

ಇಂದ್ರನ ದೂತರ ತಡೆಯುತ ದಿನತ್ರಯ
ಚಂದದಿ ಕುಳಿತೆಯಾ ಬೃಂದಾವನದೊಳಗೆ
ಇಂದಿಗು ನೋಳ್ಪರು ಬುಧಜನ ನಿಮ್ಮನು
ವೃಂದಾರಕಗಣ ವಂದಿತ ಚರಣಯುಗ ೯

ಸುಂದರ ಹಯಮುಖ ರಾಮನು ಕೃಷ್ಣನು
ವೇದವ್ಯಾಸರು ಹನುಮಾದಿ ತ್ರಯರು
ಮಧ್ಯದಿ ಕುಳಿತಿಹ ನಿನ್ನ ಸುನಾಲ್ಕೆಡೆ
ನಿಂದಿಹರೆಂಬುದು ಸಿದ್ಧವು ಮಹಮಹಿಮಾ ೧೦

ಬೃಂದಾವನ ಪಂಚದಿ ಹರಿ ತಾನಿಹ
ಚಂದದಿ ಸೇವೆಯ ಕೊಳ್ಳುತ ನಿನ್ನಿಂದ
ಸುಂದರ ದಶಗಳ ಪಂಚನುರೂಪವ
ವಂದಿಸಿ ನೋಡುತ ನೆನೆಯುವೆ ಏನೆಂಬೆ ೧೧

ಗಂಗಾಪಿತ ತ್ರಿವಿಕ್ರಮದೇವನ
ಹಿಂಗದೆ ನೆನೆಯುವೆ ಲಕ್ಷಾಭರಣವನು
ರಂಗಗೆ ನೀಡಿದೆ ನಮ್ಮಯ ಭವವನು
ಇಂಗಿಸೆ ಕಷ್ಟವೇ ಗುರುವರ ದಯಮಾಡೋ ೧೨

ಜಯಮುನಿ ಹೃದಯದಿ ವಾಯುವಿನಂತರ
ಜಯದಿಂ ನಲಿಯುವ ಶ್ರೀಕೃಷ್ಣವಿಠಲನ
ದಯದಿಂ ತೋರಿಸು ಭಾವೀಜಯಾಸುತ
ಹಯಮುಖ ಕಿಂಕರ ನಮಿಸುವೆ ಭೂಯಿಷ್ಠಾ ೧೩

## ೬೭

ಶರಣು ವಾದಿರಾಜ ಗುರುವೆ ಶರಣು ವಾಜಿವಕ್ತ್ರಪ್ರಿಯನೆ
ಶರಣು ನಂದಮುನಿಯ ಅನುಜ ಶರಣು
ಭಾವಿ ಮುಖ್ಯಪ್ರಾಣನೆ ಪ

ದುರಿತರಾಶಿ ತರಿದು ಎನ್ನ ಭರದಿ ಕರುಣ ತೋರಿ ನಿನ್ನ
ಚರಣಭಕ್ತರಲ್ಲಿ ಮುನ್ನ ಇರಿಸಿ ಸಲಹೊ ಕರುಣಶರಧಿಯೆ ಅ.ಪ.

ಘೋರಕಲಿಯು ಬಂದನೆಂದು ಸಾರಿ
ಹರಿಯಮುಂದೆ ನಿಂದು
ಸೇರಿ ಸ್ತುತಿಸೆ ದಿವಿಜವೃಂದ ಧೀರ ಲಾತವ್ಯ ಬಂದೆ ಹಾ
ಚಾರು ಯುಕ್ತಿಮಲ್ಲಿಕಾದಿ ಸಾರಗ್ರಂಥರಾಶಿ ಇತ್ತು
ಈರಮತವ ಮೆರೆಸಿ ಮೆರೆದ ಶೂರ ನಿನ್ನ ಪೊಗಳಬಲ್ಲೆವೆ ೧

ಎರಡು ಹತ್ತು ಮೇಲೆ ನೂರುವರುಷ ಪೊರೆದು ಶಿಷ್ಯಸಂಘ
ತೊರೆಯದೇನೆ ಕಾಯ ಕುಳಿತೆ ಭರದಿ ವೃಂದಾವನದಲೀ
ತೊರೆಯಲಾಗದೇನೆ ನಿನ್ನ ತುರಗವದನ ರಾಮಕೃಷ್ಣ
ಅರವಿದೂರ ವೇದವ್ಯಾಸ ಪೊರೆವರೆಲ್ಲ ಸೇವೆಕೊಳ್ಳುತಾ ೨

ಹನುಮ ಭೀಮ ಮಧ್ವಹಾಗೆ ಗಣಪನೈಯ್ಯ ಸುರರು ಎಲ್ಲ
ಮಣಿದು ಕುಣಿದು ನಿನ್ನ ಸಹಿತ ಮಣಿದು ಹರಿಯ ಭಜಿಸುತಿಹರು
ತನುವ ಕೆಡಹಿ ರಾಗದಿಂದ ನೆನೆದು ನಿನ್ನ ನೋಡೆಸದನ
ಜನುಮ ಜನುಮ ದೋಷ ಕಳೆವ ಘನ ಮಹಾತ್ಮೆಗೀಡುಕಾಣೆ ೩

ಎರಡು ಕಮ್ಮಿ ಎರಡುನೂರು ವರವಿರಂಚಿ ಕಲ್ಪಗಳಲಿ
ತೊರೆದು ಕಾಮ ಹರಿಯ ಯಜಿಸಿ ಮೆರೆವ
ನಿಮ್ಮ ಮಹಿಮೆಗೇನೆಂಬೆ
ಸುರರು ವಿವಿಧ ಬಲಿಗಳಿತ್ತು ಚರಣ ಪಿಡಿದು ನಡೆವರೆನಲು
ನರನು ಪೊಗಳಬಲ್ಲನೇನು ಹರನಗುರುವೆ ಶಿರವ ಬಾಗುವೆ ೪

ವರವಿಮಾನದಲ್ಲಿ ಕುಳಿತು ಚರಿಸುತಿರಲು ಒಮ್ಮೆಯೇನೆ
ಸುರರು ಎಲ್ಲ ಕರೆಯೆನಿನ್ನ ಧರಿಸಿ ರೂಪ ನಿಚಯ ನಡೆದೆಯಾ
ವರವಿಶೇಷಪೂಜೆಕೊಂಡು ಸ್ಥಿರವಗೈದು ಪದವಿಗಳನು
ಕರೆದು ಹರುಷ ದಿವಿಜಗಣಕೆ ಪೊರೆದ ನಿನಗೆ ತುಲ್ಯ ಕಾಣೆವೈ ೫

ಸಿರಿಯಪತ್ರ ಹರಿಗೆ ಇತ್ತು ಮರುತನಂತೆ ಪಡೆದು ವರವ
ದುರಳ ಚೈವ ಕೊಡಲು ಶಾಪ ಹರುಷದಿಂದ
ಕೊಂಡು ಭುವಿಯಲಿ
ಧರಿಸಿನಿಂದು ದಂಡ ಕಾಷ್ಠ ದುರುಳವಾದಿಗಜಗಳಳಿದು
ಚರಿಸಿ ದೇಶವೆಲ್ಲ ಕೊನೆಗೆ ಕುರುಹು ತೋರಿನಿಂತ ಸ್ವಾದಿಲಿ ೬

ಏನು ನಿಮ್ಮ ಮಹಿಮೆ ಗುರುವೆ ತಾನೆ ಬಂದು ವಾಜಿವದನ
ಸಾನುರಾಗದಿಂದ ಕೊಂಬ ಹೂರ್ಣಭಕ್ಷ್ಯವೆಲ್ಲ ಪೂರ್ಣ
ಪೂರ್ಣನೀನು ಜೀವಗಣದಿ ಪೂರ್ಣತನ್ನ ಕಂದನೆಂದು
ದಾನಗೈದ ನಿನ್ನ ಸತಿಗೆ ಜ್ಞಾನಪೂರ್ಣಬಲನು ನೀನ ಹೋ ೭

ಸೇರಿ ಇಹರು ಬ್ರಹ್ಮವಾಯು ಚಾರು ಭ್ರಾತೃನಿನ್ನ ಬದಿಲಿ
ಮೀರಿ ಇಹುದು ಯಾವುದಿಲ್ಲ ಮೂರುಜಗದಿ ಸತ್ಯಸತ್ಯವೋ
ಮೂರುಕಣ್ಣಿನಾತ ಮುಂದೆ ಭಾರಿಭೂತರಾಜ ನಿಮ್ಮ
ಸಾರ ಚರಣ ಪಿಡಿದು ಭಜಿಪ ಯಾರು ಸಾಟಿ ಇಲ್ಲ ಸಾರುವೆ ೮

ಗಂಗೆಮೊದಲು ಎಲ್ಲ ತೀರ್ಥ ತಂಗಿ ಧವಳಗಂಗೆಯಲ್ಲಿ
ತುಂಗ ಮಹಿಮ ನಿನ್ನ ಯಜಿಸಿ ಹಿಂಗಿಸುವರು ತಮ್ಮ ಶಮಲ
ಕಂಗಳಿಂದ ನೋಡೆ ಕೇಳೆ ಭಂಗ ಸತ್ಯಸರ್ವಪಾಪ
ಅಂಗವದ್ದಿ ಭಜಿಪ ನರಗೆ ರಂಗ ಒಲಿವ ಸುರರು ಕೈವಶ ೯

ನಿನ್ನ ನಿಲಯ ಸುತ್ತ ನೃತ್ಯ ವನ್ನು ಗೈದು ಭಜಿಸೆ ಹರಿಯ
ಘನ್ನ ಜ್ಞಾನ ಚೆನ್ನ ಪಡೆದು ಸನ್ನು ತಾಂಗ ನೆಡೆಯಕಾಣುವ
ಅನ್ನಸತ್ರ ನಿನ್ನ ಕ್ಷೇತ್ರ ಅನ್ನಪತಿಯ ತೋರ್ಪನಿನಗೆ
ಇನ್ನು ಸರಿಯೆ ಕಾಮಧೇನು ಚಿಣ್ಣನೆಂದು ಪಿಡಿಯೊ ಶರಣನ ೧೦

ಹತ್ತು ಐದು ನಾಲ್ಕು ಆರು ಹತ್ತು ಐದು ಸಹಿತ ಒಂದು
ಹತ್ತು ಹತ್ತು ಮತ್ತೆ ಒಂದು ಹತ್ತುನೂರು ಹಾಗನಂತ
ಸುತ್ತ ಪಂಚನಿಲಯಗಳಲಿ ನಿತ್ಯ ಧೊರೆಯ ರೂಪಗಳನು
ನಿತ್ಯನುತಿಪೆ ಬೃಹತಿಯಿಂದ ಸತ್ಯಪದವಿಸಿದ್ಧ ನಿನಗೆಲ್ಲೈ ೧೧

ಗಿರಿಗಳರಸು ಮಗಳ ಸಹಿತ ಕರೆದು ನಿಮ್ಮ ರತ್ನರಾಶಿ
ಸುರಿದು ಶಿರದಿ ಪೂಜೆಗೈದು ಪರಮ ಧನ್ಯನಾದ ತಾನಹೋ
ತರಣಿ ಜನರು ಮಾರ್ಜನಾದಿ ಪರವಿಶೇಷ ಸೇವೆಗೈದು
ಹರುಷದಿಂದ ಹಾಡಿ ನಮಿಸೆ ದೊರೆಯ
ಕೊಡುವೆ ಕಾಮಿತಾರ್ಥವ ೧೨

ದೀಪಸಾಲು ಹಚ್ಚಿ ಭಜಿಸೆ ಪೋಪುದೈಯ್ಯ ಭವದ ತಾಪ
ಆ ಪರೇಶ ಒಲಿದು ಜ್ಞಾನ ದೀಪ ಇಡುವ ಹೃದಯಕಮಲದಿ
ಕೋಪ ತಾಪ ದೂರನಾಗಿ ಶ್ರೀಪತಿಯ ದಾಸನಾಗಿ
ಲೇಪ ರಹಿತನಾಗಿ ಭವದ ಕೂಪ ದಾಟ ಪೋಪ ಬೇಗಹೋ ೧೩

ಯಮನ ಪುರವ ಸಾರಿ ನೀನು ವಿಮಲರೂಪ ತೋರಿ ಹಾಗೆ
ಅಮರ ಜ್ಞಾನ ಬೋಧೆಯಿತ್ತು ಯಮನ ರಾಜ್ಯ ಬರಿದುಗೈದೆಹೊ
ಕಮಲೆಕಂದ ಕಾಮಕೊರಗಿ ನಮಿಪ ನಿನ್ನ ರೂಪ ನೋಡಿ
ಶ್ರಮವು ಆಯ್ತುಕಾಮನಿಂದ ಅಮರಸ್ತ್ರೀವೃಂದಕ್ಕೆಲ್ಲ ವೈ ೧೪

ದುಃಖಕೊಡದ ನಿನ್ನ ಅಸ್ಥಿ ಶಂಖಚಕ್ರ ಮಯವು ಹೌದು
ಪಂಕಜಾಕ್ಷ ಅಂಗದಲ್ಲೆ ಅಂಕೆರಹಿತ ಸುಖವು ನುಂಬೆಹೊ
ಟೊಂಕದಿರುವ ಸೂತ್ರ ತಾನು ಕಿಂಕಿಣೀ ಸುರಾವದಿಂದ
ಶಂಕೆ ಕೊಡದೆ ಸಾರುತಿಹನು ಬಿಂಕವಾಗಿ ಪದವಿಬರ್ಪುದ ೧೫

ಮೇರುಗಿರಿಯ ಶಿಖರದಲ್ಲಿ ಕ್ರೂರಮದನ ತಾಪದಿಂದ
ಚಾರುಕನ್ಯೆಯೊಬ್ಬಳಿನ್ನು ತೋರೆ ಸ್ವಾಂಗ ನಿನ್ನ ಬಯಸುತ
ಧೀರನೀನು ಕದಲದಿರಲು ಕ್ರೂರ ತಪದಿ ಹರಿಯ ಒಲಿಸಿ
ನೀರೆ ಪಡೆದ ಲೈಯ ನಿನ್ನ ಸೇರಿ ಸುಖಿಪ ಭಾಗ್ಯಮುಂದಕೆ ೧೬

ಗರುಡನೇರಿ ನಿನ್ನ ಸಹಿತ ಹರಿಯು ತೋರಿಸಕಲಲೋಕ
ತರಿಸಿ ಅಮೃತ ಕರದಿ ಕುಡಿಸಿ ಅರವಿ ದೂರ ನಿನ್ನ ತಬ್ಬಿದ
ಮರುತನಂತೆ ವ್ಯಾಜರಹಿತ ಚರಣಭಜರ ನಿನಗೆ ತಾನೆ
ಕರೆದು ಕೊಟ್ಟ ವಾಯುಪದವಿ ತುರಗವದನ ಪ್ರಥಮ ಭಕ್ತಹೋ ೧೭

ಗೆದ್ದು ವೀರಶೈವಗುರುವ ಗದ್ದುಗೆಯನು ಏರಿ ಮೆರೆದೆ
ಮೆದ್ದು ಗರವ ಸುಖದಿ ನಿಂದೆ ತಿದ್ದಪಾಟು ತೋರ್ದೆ ಉಡುಪಿಲಿ
ಬದ್ಧನಾದ ವಿಠಲ ನಿನಗೆ ಬಿದ್ದ ನೃಪನ ಗೇಸಿ ಕಾಯ್ದೆ
ಶುದ್ಧ ವಿಷ್ಣುಭಕ್ತಿ ತೋರಿ ಮಧ್ವಸುತರ ಪೊರೆದ ದಾನಿಹೋ ೧೮

ನೂರುನೂರು ಆನೆಮೀರಿ ಭಾರಿಬಲದ ಮೆರೆವ ಶಕ್ತ
ನೇರನಿಲಿಸಿ ಧ್ವಜದಸ್ತಂಭ ದೂರಗೈದೆ ಶಿಷ್ಯಕಳವಳ
ಭಾರ ಹೌರ ಸ್ಥೂಲಸೂಕ್ಷ್ಮ ತೋರಬಲ್ಲೆ ಇಚ್ಛೆಯಂತೆ
ಮೇರೆ ಇರದ ಮಹಿಮನೆಂದು ಸಾರಿಸಾರಿ ನುತಿಪೆ ಜೀಯನೆ ೧೯

ಗಂಗೆಪಡೆದ ರಂಗನನ್ನು ಅಂಗನಿಂದ ತರಿಸಿ ನೆಟ್ಟು
ತುಂಗವಿಭವದಿಂದ ಯಜಿಸಿ ಕಂಗಳಿಂದ ನೋಡಿ ಉತ್ಸವ
ಅಂಗಮರೆತು ನಂದ ಕುಡಿದೆ ಸಂಗದಿಂದ ಕಂಡ ಜನಕೆ
ಭಂಗವಾಯ್ತು ಸಕಲ ಬಂಧ ಕೊಂಗಿ ಖಳರ ಬಿಟ್ಟು ಸತ್ಯವೈ ೨೦

ಬರಿಯ ಕವನವಲ್ಲ ಕೇಳಿ, ಗುರುವೆ ದ್ವಿಜನ ಸ್ವಪ್ನದಲ್ಲಿ
ಅರುಹಿ ತನ್ನ ಚರಿತೆಯನ್ನು ಬರೆಸಿ ಇಹನು ಪೊರೆಯೆ ಶಿಷ್ಯರ
ಅರಸಿ ನೋಡಿ ಧನ್ಯರಾಗಿ ಒರೆಸಿ ಕಾಮಕ್ರೋಧವೆಲ್ಲ
ಚರಣಪಿಡಿಯೆ ಭಕ್ತಿಯಿಂದ ಗುರುವು ಬಿಡನು ನಿಮ್ಮನೆಂದಿಗು ೨೧

ಸುಧೆಯ ಕರ್ತ ಜಯಮುನೀಂದ್ರ ಹೃದಯವಾಸಿ ವಾಯುವಂದ್ಯ
ಪದುಮೆ ರಮಣ ಕೃಷ್ಣವಿಠಲ ಸದರದಿಂದ ಮುಕ್ತಿ ನೀಡುವ
ಮುದದಿ ವಾದಿರಾಜ ಹೃದಯ ಸದನ ವಾಜಿವಕ್ತ್ರಗೆರಗಿ
ಬದರಿನಿಲಯ ನನ್ನ ನೆನೆದು ಪದವನಿದನು ಪಠಿಪ ಭಕ್ತಗೆ ೨೨

## ಶ್ರೀರಾಘವೇಂದ್ರ ಸ್ವಾಮಿಗಳು

### ೬೮

ಗುರುಗಳ ನೋಡಿರಿ _ ನೀವು _
ಗುರುಗಳ ನೋಡಿರಿ ರಾಘವೇಂದ್ರ ಪ

ಗುರುಗಳ ನೋಡಿ ಚರಣದಿ ಬಾಗಿ
ಕರೆಕರೆ ನೀಗಿ ವರಸುಖ ಪಡೆಯಿರಿ ಅ.ಪ

ಕಾಮಿತ ಫಲಗಳ ಇತ್ತು ಇತ್ತು
ತಾಮಸ ಗುಣಗಳ ಕೆತ್ತಿ ಕೆತ್ತಿ
ರಾಮನ ಭಕ್ತಿಯ ಬಿತ್ತಿ ಬಿತ್ತಿ
ಪ್ರೇಮದಿ ಶಿಷ್ಯರ ಸಲಹುವ ನಮ್ಮ ೧

ಅಂತೆ ಕಂತೇ ಸಂತೆ ಮಾತು
ಸಂತರ ಬೆಲ್ಲ ಇವರಲಿಲ್ಲ
ಎಂಥಾ ಭಕ್ತಿ ಅಂಥಾ ಫಲವು
ಕುಂತೀ ಭೀಮನ ಪಂಥಾ ಪಿಡಿದು ೨

ಇಲ್ಲ ಎಂಬಗೆ ಎಲ್ಲಾ ಇಲ್ಲಾ
ನಲ್ಲ ಎಂಬಗೆ ಎಲ್ಲಾ ಉಂಟು
ಕ್ಷುಲ್ಲ ಸಂಶಯ ಹಲ್ಲು ಮುರಿದು
ಫುಲ್ಲ ನಾಭನ ಬಲ್ಲವರೊಡನೆ ೩

ಕಲಿಯೆಂದೇಕೆ ಅಳುವಿರಿ ನೀವು
ಒಲಿಯಲು ಗುರುವು ಸುಳಿಯುವ ಹರಿಯು
ತುಳಿಯುತ ಕಲಿಯ ಬೆಳಸಿರಿ ಭಕ್ತಿ
ಸುಲಭವು ಕೇಳಿ ಕಳೆಯದೆ ಕಾಲ ೪

ಕೃಷ್ಣ ವಿಠಲನ ಇಷ್ಟ ಗುರುಗಳು
ತೃಷ್ಟರಾದೆಡೆ ಇಷ್ಟ ಕರಗತವು
ಭಷ್ಟರಾಗದೆ ಶಿಷ್ಟರ ಸೇರುತ
ಪುಷ್ಟಿಯ ಗೈಸುತ ಸುಷ್ಟು ಜ್ಞಾನವ ೫

೬೯

ನಂಬಿದೇ ಗುರುವರಾ ನಂಬಿದೇ ಪ

ನಂಬಿದೆ ಗುರುಸಾರ್ವಭೌಮಾ
ತುಂಟುಮನದೊಳು ಹರಿಭಕ್ತಿ ನಿಸ್ಸೀಮಆಹಾ
ಅಂಬುಜೋದ್ಭವಪಿತನ ಕಂಭದಿ ತೋರಿದ
ಶಂಬರ ಕುಲದೀಪ ಪ್ರಹ್ಲಾದ ವ್ಯಾಸಮುನಿಯೇ ಅ.ಪ.

ದಾಸನೆಂದಡಿಗೆ ಬಿದ್ದೆನೋ ಈಗ
ದೋಷ ನಾಶಮಾಡೋ ಎನಗೆ ಬೇಗ ಆಹಾ
ವಾಸುಕಿಶಯನನ ಬ್ಯಾಸರದೆ ಸ್ತುತಿಸಿ
ಈಶನ ಸರ್ವತ್ರವ್ಯಾಪ್ತಿಯನರುಹಿದ ಭೂಪ ೧

ಪಾತಕರೊಳಗೆ ಅಗ್ರೇಸರನಾನು
ಪೂತಮಾಡುವರೊಳಗೆ ನಿಸ್ಸೀಮ ನೀನು ಆಹಾ
ತಾತನಪ್ಪಣೆಯಂತೆ ವ್ಯಾಸರಾಜಾವನಿಸಿ
ಖ್ಯಾತಿಯಿಂದಲಿ ತರ್ಕತಾಂಡವರಚಿಸಿ ಮೆರೆದೇ ೨

ತಾಪಸಶ್ರೇಷ್ಠ ಬ್ರಹ್ಮಣ್ಯಕುವರನಾದೆ
ಶ್ರೀಪಾದರಾಯರ ಪ್ರಿಯ ಶಿಷ್ಯನಾದೆ ಆಹಾ
ಗೋಪಾಲಕೃಷ್ಣನ್ನ ಕುಣಿಕುಣಿದಾಡಿಸಿ
ಭೂಪನ ಕುಹಯೋಗ ಕಳೆದ ಯತಿಕುಲತಿಲಕ ೩

ಮಧ್ವಶಾಸ್ತ್ರಗಳ ಮಂದರರಿಯದಿರಲು
ಮುದದಿಂದ ಪದಸುಳಾದಿಗಳ ರಚಿಸಿದೆ ನೀನು ಆಹಾ
ಆದರದಿಂದಲಿ ಪುರಂದರಕನಕರಿಗೆ
ಸದುಪದೇಶವ ಕೊಟ್ಟು ಜಗದುದ್ಧಾರಮಾಡಿದ ಪ್ರಭುವೇ ೪

ಮತ್ತೆ ಪುಟ್ಟಿದೆ ವೆಂಕಣ್ಣಭಟ್ಟ ನೆಂದೆನಿಸೀ
ಮತ್ತ ಕೇಸರಿಯಂತೆ ಮಧ್ವಶಾಸ್ತ್ರದಿ ಮೆರೆದೇ ಆಹಾ
ಕತ್ತಲೆ ಅದ್ವೈತವಾದಗಳಿಗೆಲ್ಲಾ
ಕತ್ತಿಎನಿಸಿದ ಪರಿಮಳಾಚಾರ್ಯ ಗುರುವೇ ೫

ವಿಪ್ರನು ದಿಟ್ಟತನದಿ ನಿನ್ನ ಗಂಧವ ತೇದುಕೊಡುಎನೆ
ಕ್ಷಿಪ್ರದಿ ತೋರಿದೆ ನಿನ್ನ ಮಹಿಮೆಯಜಗಕೇ ಆಹಾ
ಅಪ್ಪ ಶ್ರೀರಾಮರ ಪೂಜಿಸಬೇಕೆಂದು
ಒಪ್ಪಿಸನ್ಯಾಸವ ರಾಘವೇಂದ್ರನಾದ ೬

ಮುದದಿ ದೇಶ ದೇಶವ ಚರಿಸಿದೇ
ಸಮಯದಿ ಸುಜನರಕ್ಲೇಶಗಳಳಿದೇ ಆಹಾ
ಮೋದಮುನಿಯ ಗ್ರಂಥಗಳಿಗೆಲ್ಲ ಟಿಪ್ಪಣಿ ಮಾಡುತ
ಬುಧರಿಗೆ ತತ್ವ ಕನ್ನಡಿ ತೋರ್ದ ಗುಣಗಣನಿಧಿಯೇ ೭

ಪರಿಪರಿ ಮಹಿಮೆಯ ತೋರುವ ಗುರುವೇ
ಸುರತರು ಅಂದದಿ ಹರಕೆ ಗಳೀವೆ ಪ್ರಭುವೇ ಆಹಾ
ಮೂರೆರಡು ಒಂದುನೂರು ವರುಷ ಪರಿಯಂತ
ಸಾರಿಸಾರಿದವರ ಪೊರೆದು ಮೆರೆಯುವ ದಿವಿಜವಂದಿತ ಗುರು ೮

ದಯದಿಂದ ನೋಡೆನ್ನ ದೀನೋದ್ಧಾರ
ಜೀಯನೆ ಭವ ಬಿಡಿಸು ಕರುಣಾಸಾರ ಆಹಾ
ಜಯತೀರ್ಥವಾಯ್ವಂತರ್ಗತ ಶ್ರೀಕೃಷ್ಣ ವಿಠಲನ ಹೃ-
ದಯಮಂದಿರದಿ ತೋರೆನಗೆ ಗುರುಸಾರ್ವಭೌಮ ೯

## ೭೦




ಭಜಿಸಿ ಬದುಕಿರೋ _ ಭರದಿ
ಸುಜನ ರೆನಿಸಿರೋ ಪ

ಭಜಕ ಭೂಜ _ ಸುಜನ ರಾಜ
ರಾಘವೇಂದ್ರರಾ ಅ.ಪ

ಕಲಿಯ ತುಳಿಯಲು _ ಸುಜನ ಮಲಿನ ಕಳಿಯಲು
ಒಲಿದು ಭವಿಯೊಳು _ ಬಂದ ಅಲವ ಮಹಿಮರ ೧

ವೇಧ ದೂತರ _ ಪ್ರಹ್ಲಾದರೆಂಬರ
ಸಾಧು ಸೇವ್ಯರ _ ದುರ್ಬೋಧೆ ಕಳಿವರ ೨

ನಾರಸಿಂಹನ ಕರುಣ ಸೂರೆ ಪಡದಿಹ
ಭಾರಿ ಭಕ್ತರ ದೇವರ್ಷಿ ಛಾತ್ರರ ೩

ವ್ಯಾಸರಾಯರ _ ಶ್ರೀನಿವಾಸ ಯಜಕರ
ಶೇಷದೇವರ ಆವೇಶ ಯುಕ್ತರ ೪

ರಾಜ ಗುರುಗಳು ಕವಿರಾಜ ಮಾನ್ಯರು
ನೈಜ ತೇಜರು ನಿರ್ವ್ಯಾಜ ಪ್ರೇಮರು ೫

ಹರಿಯ ತರಿಸಿದಾ ಮುರಹರನ ಕುಣಿಸಿ ದಾ
ಮುರವ ಹರಿಸಿದಾ ಧೊರೆಗೆ ಹರುಷ ಸುರಿಸಿದಾ ೬

ಮಾನವಂತರಾ ಬಹುಜ್ಞಾನವಂತರಾ
ದಾನ ಶೀಲರಾ ಅನುಮಾನ ರಹಿತರ ೭

ಭ್ರಾಂತಿ ವಾದವ ವಿಶ್ರಾಂತಿ ಗೊಳಿಸಿದ
ಶಾಂತಿ ಸಾಗರ ವೇದಾಂತ ಭಾಸ್ಕರ ೮

ಶ್ರೀ ಸುಧೀಂದ್ರರ ವಿಶ್ವಾಸ ಪುತ್ರರ
ದೋಷದೂರರ _ ಗುರು ದೋಷ ಕಳಿವರ ೯

ಮಂತ್ರ ಸಿದ್ಧರು ಬಹು ಗ್ರಂಥ ಕರ್ತರು
ತಂತ್ರ ಮಲ್ಲರು ಹರಿ ಮಂತ್ರಿ ಸಚಿವರು ೧೦

ಯೋಗಿ ವರ್ಯರ ಭವ ರೋಗ ವೈದ್ಯರ
ರಾಗ ರಹಿತರ ವೈರಾಗ್ಯ ಭಾಗ್ಯರ ೧೧

ವಾದಿ ಭೀಕರ ಶ್ರೀವಿಜೇಂದ್ರ ಪೌತ್ರರ
ಮೋದ ತೀರ್ಥದಿ ನಿತ್ಯ ಮಿಂದು ಮೀಯ್ವರ ೧೨

ತರ್ಕದಿಂದಲು ಹರಿಯು ಶಕ್ತಿಯಿಂದಲು
ಯುಕ್ತಿಯಿಂದಲು ಒಲಿಯ ಭಕ್ತಿ ಇಲ್ಲದೆ ೧೩

ಶ್ರೀಶ ದಾಸರ ಪದ ಪಾಂಶು ಧರಿಸದೆ
ದೇಶ ತಿರುಗಲು ಬರಿಘಾಸಿ ಸಿದ್ಧವು ೧೪

ಭಕ್ತರೊಲಿಯದೆ ನಿಜ ಭಕ್ತಿ ಸಿಕ್ಕದು
ಪಕ್ವವಾಗದೆ ಭಕ್ತಿ ದಕ್ಕ ಶ್ರೀ ಹರಿ ೧೫

ಇವರ ಮಂತ್ರವ ಭಕ್ತ ಜವದಿ ಜಪಿಸಲು
ಅವಗೆ ಕರಗತ ಸಿದ್ಧ ಭವದಿ ವಾಂಛಿತ ೧೬

ಜ್ಞಾನಿಯಾಗುವ ಬಹುಮಾನ ಪಡೆಯುವ
ಶ್ರೀನಿವಾಸನ ಭಕ್ತ ಶ್ರೇಣಿ ಸೇರುವ ೧೭

ಅಲ್ಪ ಸೇವೆಯೆ ಮೇರು ಕಲ್ಪ ವಾಹುದೊ
ಕಲ್ಪಕಾದರು ಕಾಕು ಸ್ವಲ್ಪ ತಟ್ಟದೊ ೧೮

ಸುತ್ತಿ ನಮಿಸಲು ನಿಖಿಳ ಯಾತ್ರೆಯಾ ಫಲ
ಭಕ್ತ ಪಡೆಯುವ ಸಂದೇಹ ಸಲ್ಲದೊ ೧೯

ಪುತ್ರ ನೀಡುವ ಸಂಪತ್ತು ದೊರಕಿಪ
ವೃತ್ತಿ ಕಲ್ಪಿಪ ಆಪತ್ತು ಕಳಿಯುವ ೨೦

ರಾಮ ನರಹರಿ ಕೃಷ್ಣ ಬಾದರಾಯಣ
ಪ್ರೇಮದಿಂದಲಿ ದಿವಿಜ ಸ್ತೋಮ ವೆಲ್ಲವು ೨೧

ಸೇರಿ ಇವರಿಗೆ ಕೀರ್ತಿ ಸೂರೆ ಕೊಡುತಿರೆ
ಪಾರವಿಲ್ಲವು ಸತ್ಯ ಮಹಿಮೆ ಗೆಂಬುವೆ ೨೨

ಅಗ್ನಿ ತುಲ್ಯರು ಶಂಕು ಕರ್ಣ ವಿದಿತರು
ವಿಘ್ನ ಕಳಿವರು ಶ್ರೀ ಸತ್ಯ ಸಂಧರು ೨೩

ಗುರುವು ಒಲಿದರೆ ತಾ ಹರಿಯು ಒಲಿಯುವ
ಗುರುವು ಮುನಿದರೆ ಯಾರು ಪೊರೆವರಿಲ್ಲವೊ ೨೪

ಶುದ್ಧ ಭಕ್ತಿಲಿ ಈ ಪದವ ಪಠಿಸಲು
ಸಿದ್ಧಿ ಸತ್ಯವು ಸರ್ವತ್ರ ವಿಜಯವು ೨೫

ಸಾರಿ ಸಾರುವೆ ಕೇಳಿ ಕ್ರೂರ ಕಲಿಯಲಿ
ದೂರ ಸಾಧನೆ ಇವರ ಸೇರ ದಿರ್ಪಗೆ ೨೬

ಜಿಷ್ಣು ಸೂತ ಶ್ರೀ ಕೃಷ್ಣ ವಿಠಲನ
ಶ್ರೇಷ್ಟ ಭಕ್ತರ ಶ್ರೀ ರಾಘವೇಂದ್ರರ ೨೭

## ೭೧

ಯಾತಕೆ ಮರೆತೆನ್ನ ಯತಿಕುಲ ತಿಲಕನೆ
ಪ್ರೀತಿಯ ಬಯಸುತ ಬಂದೆ ಪ

ವಾತಸುತಗತಿಪ್ರಿಯ ದೂತನೆ ನಾಥನೀನೆಂತೆಂದು ನಂಬಿದೆ
ವಾತಪಿತನಡಿ ಮತಿಯ ಪ್ರೇರಿಸೋ
ಖ್ಯಾತಗುರು ಶ್ರೀ ರಾಘವೇಂದ್ರನೆ ಅ.ಪ.

ದೇಶದೇಶದಿ ಬರುವ ದಾಸಜನರಘ
ನಾಶಗೈಸಿ ಪೊರೆವೊ ದಾಶರಥಿ ಕಿಂಕರಾ
ಶೇಷಶಯನನ ದೋಷ ಜ್ಞಾನ ವಿಶೇಷದಿಂದಲಿ ನ್ಯಾಸಮಾಡಿದೆ
ದಾಸನೆನ್ನಯ ದೋಷ ಕಳೆಯುತ ಬೀಸು ದೃಷ್ಟಿಯ
ಭೂಸುರೋತ್ತಮ ೧

ಛಲದಿ ಭಕ್ತಿಯ ಮಾಡಿ ಒಲಿಸಿ ಹರಿಯ ಪಾದ
ಲಲಿತಕೀರ್ತಿಲಿ ಮೆರೆದೆ ಭಳಿರೆ ಭಳಿರೆ ಗುರುವೇ
ಗೊಲ್ಲಕೃಷ್ಣನ ಚೆಲ್ವ ನಾಟ್ಯದಿ ನಿಲ್ಲಿಸಿದ ನಿನಗೆಲ್ಲಿ ಸರಿಯೈ
ನಲ್ಲ ಯತಿವರ ಕಾಲಿಗೆರಗುವೆ ಶೀಲಭಕುತಿಯ ಪಾಲಿಸೀಗಲೆ ೨

ವ್ಯಾಸಮುನಿಯು ಎನಿಸಿ ಶ್ವಾಸಮತವ ಮೆರೆಸಿ
ದೋಷ ಹರಿಸಿ ಧೊರೆಗೆ ದಾಸ ದೀಕ್ಷೆಯ ತೋರ್ದೆ
ಈಶದಾಸರ ಭೇದ ವಾದವ ಆಶುಕವಿತದಿ ವಿಶದಪಡಿಸಿದೆ
ಶ್ರೀಶಶಯನನಾವೇಶ ಸಂಯುತ ಭೇಶಕಾಂತಿ ವಿಶಾಲಕರುಣಿಯೆ ೩

ದಾತ ಈತನೆಂಬ ಖ್ಯಾತಿ ಬಿರುದು ನಿನಗೆ
ಪ್ರೀತಿಯಿಲ್ಲವೇ ಗುರುವೇ ಜೋತು ಬಂದೆ ಅಡಿಗೇ
ನಾಥ ಜಯಮುನಿ ಪ್ರೀತಿಯ ಪಡೆಯುತ ಗೀತೆ
ಬೋಧೆಯ ನೀತಿ ಪೇಳಿದೆ
ಏತಕೀತಡ ಮಾತಲಾಲಿಸು ದೂತನಿನ್ನವ ಪೂತಕಾಯನೆ ೪

ಪರಮ ಭಕ್ತರ ವೃಂದ ನಿರುತ ನಮಿಪ ಚೆಂದ
ಅರಿಯೆ ವರ್ಣನೆ ಎಂದ ಸುರಿಸು ಭಕ್ತಿಯ ಗಂಧ
ಚಾರು ಮಂಗಳಚರಿತ ನರಹರಿ ಭಾರಿಸೇವಿಪ ಸೂರಿ ಶೇಖರ
ಬೀರಿಕರುಣವ ಭಾರತೀಶನ ಸಾರಶಾಸ್ತ್ರದಿ ತೋರು ತತ್ವಾರ್ಥ ೫

ಲೋಕ ಹರಕೆ ನೀಡಿ ಸಾಕಿ ಸಲಹೆ ಹೆಜ್ಜೆ
ನೂಕಿ ದುರಿತರಾಶಿ ಸಾಕುಹರಿಯ ತೋರಿ
ಶ್ರೀಕರಾರ್ಚಿತ ಪಾದಪಲ್ಲವ ಪಾಕನಾಶನ ಏಕ ವೀರನ
ಏಕಮನಸಿಲಿ ಧ್ಯಾನಿಪ ಧೊರೆ ನಾಕ ಋಷಿಗತಿಪ್ರಿಯ ಶಿಷ್ಯನೆ ೬

ಪಾಹಿ ಜ್ಞಾನದ ಖಣಿಯೆ ಪಾಹಿ ಭಕ್ತರ ನಿಧಿಯೆ
ಪಾಹಿ ಮತಿಮತಸ್ಥಂಭ ಪಾಹಿ ಶ್ರೀ ಹರಿಯ ದೂತ
ಪಾಹಿಸುಗುಣೋದಾರ ಮಹಿಮನೆ ಪಾಹಿನತಜನ ಭಾರವಹಿಪನೆ
ಪಾಹಿಜಯಮುನಿ ವಾಯುವಂತರ ಗೇಹ ಸಿರಿಕೃಷ್ಣವಿಠಲ ಭಜಕ ೭

## ೭೨

ರಾಜರ ನೋಡಿದಿರಾ _ ಗುರು _ ರಾಜರ ನೊಡಿದಿರಾ ಪ

ರಾಜರ ನೊಡಿ _ ಭಕುತಿಯ ಮಾಡಿ
ಗೋಜನ ಕರುಣಕೆ _ ಭಾಜನ ರಾದೀರಾ ಅ.ಪ.

ತುಂಗ ಮಹಿಮರು _ ನರ – ಸಿಂಗ ಭಕ್ತರು
ಭಂಗರಹಿತರು _ ಸುರ _ ಸಂಘ ಮಾನಿತರು ೧

ಯೋಗಿ ವರ್ಯರು _ ಬಹು _ ತ್ಯಾಗಶೀಲರು
ರಾಗ ಶೂನ್ಯರು _ ಭವ _ ರೋಗ ವೈದ್ಯರು ೨

ತಂತ್ರ ಮಲ್ಲರು _ ಬಹು _ ಗ್ರಂಥಕರ್ತೃಗಳು
ಮಂತ್ರ ಸಿದ್ಧರು _ ಮ _ ಹಂತ ಮಠದವರು ೩

ಶಾಂತ ಮೂರ್ತಿಗಳು _ ವೇ _ ದಾಂತ ಬಲ್ಲವರು
ದಾಂತ ಶೇಖರರು _ ಏ _ ಕಾಂತ ಭಕ್ತರು ೪

ರಾಘವೇಂದ್ರರು _ ಇವರೆ _ ವ್ಯಾಸರಾಜರು
ಭಾಗ್ಯವಂತರು _ ಪ್ರ _ ಹ್ಲಾದರಾಜರು ೫

ದೂಡು ಸಂಶಯಾ ನೀ _ ಮಾಡು ಭಕುತಿಯಾ
ಬೇಡು ಬಯಕೆಯಾ ಪೋ _ ಗಾಡು ದುಃಖವಾ ೬

ಸೃಷ್ಟಿ ನಾಯಕಾ _ ಶ್ರೀ _ ಕೃಷ್ಣವಿಠಲನ
ಶ್ರೇಷ್ಠ ಭಕ್ತರೂ _ ಸಂ–ತುಷ್ಟಿ ನೀಡುವರು ೭

೭೩.

ಶರಣ ಜನ _ ಪರಿಪಾಲ
ಗುರು ಸಾರ್ವ _ ಭೌಮಾ
ದೊರಕಿಸುತ ಹರಿಕರುಣ
ಪೊರೆ ರಾಘವೇಂದ್ರಾ ಪ

ಅಂದು ಹರಿ ತವಶರದಿ
ತಂದು ಕರ ಪೊರೆದಂತೆ
ನಂದಿ ಸುತ ದುರಿತೌಘ
ಇಂದೆನಗೆ _ ಮೈದೊರು ಗುರುವೇ
ಕುಂದು ಮಯ ಕಲಿಯೊಳಗೆ
ಕಂದುತಿಹ ಕಂದರನು
ತಂದೆ ಗುರು ಕಾಯದಿರೆ
ಮುಂದು ಬರೆ ಆಗುವದೆ ಸ್ವಾಮೀ ೧

ಕತ್ತಲೆಯು ಸುತ್ತಿಹುದು
ಮುತ್ತಿಹವು ಕುತ್ತುಗಳು

ಬತ್ತಿಹವು ಶಕ್ತಿಗಳು
ಹತ್ತವೈ ಚಿತ್ತದೊಳು ಏನೂ
ಎತ್ತುಗಳ ತೆರದಂತೆ
ಸುತ್ತುತಲಿ ಭವದಲ್ಲಿ
ಭಕ್ತಿಯನು ಕಾಣದಲೆ
ಮೃತ್ಯುವಿಗೆ ತುತ್ತಾಹೆ ನಲ್ಲೋ ೨

ಪರಿಪರಿಯ ಹರಕೆಗಳ
ಪೂರೈಸಿ ಭಕುತರಿಗೆ
ನಿರುತದಲಿ ಪೊರೆವವಗೆ
ಭಾರವೇ ನಾ ನೊಬ್ಬ ಧೊರೆಯೇ
ಗುರು ಸೇವೆ ಮಾಡರಿಯೆ
ಬರಿ ಮೂಢ ಕಡು ಪಾಪಿ
ಶಿರವಿಡುವೆ ಚರಣದಲಿ
ಕರುಣಾಳು ಭರವಸೆಯೆ ನನಗೇ ೩

ಪ್ರಹ್ಲಾದ ಬಲಿತಾತ
ಬಾಹ್ಲೀಕ ಕುರುಪೋಷ
ಶ್ರೀ ಹರಿಯು ಗುರುಭಕ್ತಿ
ವಾಹಿನಿಯ ಹರಿಸೈಯ ಸತ್ಯಸಂಧಾ
ದೇಹದಲಿ ಬಲವಿಲ್ಲ
ಈಹಗಳು ಬಿಡದಲ್ಲ
ಬಾಹಿರನು ನಿನಗಲ್ಲ
ತ್ರಾಹಿ ಗುರು ನೀ ಬಲ್ಲೆ ಎಲ್ಲಾ ೪

ಶ್ರೀ ಮಧ್ವ ಗುರು ಚೇಲ
ತಾಮಸರ ನಿರ್ಮೂಲ
ಶ್ರೀಮಂತ ಗುಣಮಾಲ
ಶ್ರೀ ಮನೋಹರ ಕೃಷ್ಣವಿಠಲ ಯಜಕಾ

ಕಾಮಿತಾ ಫಲದಾತ
ಪಾಮರನ ತವಭೃತ್ಯ
ಸ್ತೋಮದಲಿ ಸೇರಿಸುತ
ನೇಮದಲಿ ಹರಿನಾಮ ನುಡಿಸೆಂಬೆ ಸತತಾ ೫

## ಸುವ್ವಿಮಟ್ಟು

### ೭೪

ಶರಣು ರಾಘವೇಂದ್ರ ಗುರುವೆ
ಶರಣು ವ್ಯಾಸರಾಜ ಪ್ರಭವೆ
ಶರಣು ನಾರಸಿಂಹ ಭಕ್ತ
ಶರಣು ಶರಣು ಶಂಕು ಕರ್ಣನೆ ಪ

ನಿರುತ ನಿಮ್ಮ ಚರಣ ಕಮಲ
ಗೆರಗಿ ಎರಗಿ ಬೇಡಿ ಕೊಂಬೆ
ತರಿದು ದುರಿತ ರಾಶಿ ಭರದಿ
ಹರಿಯ ಕರುಣ ಕೊಡಿಸು ಕರುಣಿಯೆ ಅ.ಪ

ವಿಧಿಯ ಶಾಪ ಧರಿಸಿ ಮುದದಿ
ಉದಿಸಿ ಬಂದು ದೈತ್ಯ ಕುಲದಿ
ಹೃದಯ ಗತನೆ ವಿಶ್ವವ್ಯಾಪ್ತ
ಪದುಮನಾಭನೆಂದು ತೋರ್ದೆಹೋ
ಬುಧರ ಮಕುಟ ಭಕ್ತಿ ಶರಧಿ
ಅಧನ ರಾಜ ಮದನ ತೇಜ
ಮಧುರ ಬೋಧ ಮಧ್ವ ಚೇಲ
ತ್ರಿದಶ ಮಾನ್ಯ ಪ್ರಹ್ಲಾದ ಬಾಹ್ಲೀಕ ೧

ಕಲಿಯು ಬರಲು ಗುರುವು ಸಹಿತ
ತುಳಿದು ಶೃತಿ ವಿರೋಧ ಬೋಧೆ
ಸಲಹೆ ಸುಜನ ತತಿಯ ಸುಮತಿ

ಚಲುವ ಕುವರ ನೆನಿಸಿ ಬಂದೆ ಹೋ
ಬಲಿಸಿ ಕೃಷ್ಣನನ್ನು ಕುಣಿಸಿ
ಬಲಿಸಿ ವಾಯು ಮತವ ಮೆರಸಿ
ಒಲಿದು ನೃಪಗೆ ರಾಜ್ಯವಾಳಿ
ಹಳಿದೆ ವಿಧುವ ಕೀರ್ತಿ ವಿಭವದಿ ೨

ಮತ್ತೆ ಬಂದೆ ರಾಘವೇಂದ್ರ
ಹತ್ತು ಆರು ಮತ್ತೆ ನಾಲ್ಕು
ಮೊತ್ತ ಕಲೆಗಳೆಲ್ಲ ಬಲ್ಲ
ಸತ್ಯ ಪ್ರಾಣ ಶಾಸ್ತ್ರ ಮೆಲ್ಲನೆ
ಎತ್ತ ಸಾಟಿ ಕಲ್ಪವೃಕ್ಷ
ನಿತ್ಯ ವಿವಿಧ ಮಹಿಮೆ ತೋರ್ಪೆ
ಇತ್ತು ಪೊರೆವೆ ಜನರ ಬಿಡೆಯ
ಭಕ್ತಿ ವಿತ್ತ ನೀಡು ಭೃತ್ಯಗೆ ೩

ನಾರಸಿಂಹ ವೇದ ವ್ಯಾಸ
ಮೂರುತೀಶ ರಾಮಚಂದ್ರ
ಸೂರಿಗಮ್ಯ ಕೃಷ್ಣ ದೇವ
ಭಾರಿ ಮಧ್ವ ಸುರರು ಎಲ್ಲರು
ಸೇರಿ ನಿಮ್ಮ ನಡಿಸಿ ಕಾರ್ಯ
ಸೂರೆ ಗೈಸುತಿರಲು ಕೀರ್ತಿ
ಪಾರವಿಲ್ಲ ಮಹಿಮೆಗೆಂಬೆ
ಈರ ಪಿತನ ಕರುಣ ಭೂಷಿತ ೪

ರಾಘವೇಂದ್ರ ನಿಮ್ಮ ನಾಮ
ಯೋಗ್ಯ ಜಪಿಸೆ ಭಕ್ತಿಯಿಂದ
ಶ್ರೀಘ್ರನಾಶ ಅಘಸಮೂಹ
ಹಾಗೆ ಸಿದ್ಧಿ ವಾಂಛಿತಂಗಳು
ಯೋಗ ಸಿದ್ಧಿ ಭೋಗ ಸಿದ್ಧಿ

ಯೋಗ ಪತಿಯ ಭಕ್ತಿ ಸಿದ್ಧಿ
ಬೇಗ ಪಡೆದು ಕ್ರಮದಿ ಭವದ
ಬೇಗ ನೀಗಿ ಮುಕ್ತಿ ಕಾಂಬುವ ೫

ದಾನ ಗೈದನಿಷ್ಟ ಪುಣ್ಯ
ದೀನ ಸುಜನ ಶಿಷ್ಯ ತತಿಗೆ
ಶ್ರೀನಿವಾಸನನ್ನು ಯಜಿಪ
ದಾನ ಶೌಂಡ ನಿಮಗೆ ಸಾಟಿಯ
ಕಾಣೆ ಕಾಣೆ ಸತ್ಯ ಸತ್ಯ
ನಾನು ಮೂಢ ಪಾಪಿ ಕೃಪಣ
ಏನು ಸೇವೆ ಮಾಡಲಾಪೆ
ಭಾನು ತೆರದಿ ಕಾಯ ಬೇಕೆಂಬೆ ೬

ನಿನ್ನ ನೆನೆದ ಮಾತ್ರಕಿನ್ನು
ಅನ್ನ ವಸನ ಎಲ್ಲ ಸಿದ್ಧ
ಹೊನ್ನು ಹೆಣ್ಣು ಮಣ್ಣು ವಿಷಯ
ನಿನ್ನ ಕೇಳ್ವ ಜ್ಞಾನಿ ಆಹನೆ
ಮನ್ನಿಸೆನ್ನ ದೋಷರಾಶಿ
ನಿನ್ನ ಶಿಷ್ಯನೆಂದು ಗ್ರಹಿಸು
ಮನ್ನ ಮಾಡು ಭವವ ಬೇಗ
ಕಣ್ಣು ನೀಡು ಜ್ಞಾನ ದೆಂಬುವೆ ೭

ಜಯ ಸುಧೀಂದ್ರ ಪ್ರೇಮ ಪುತ್ರ
ಜಯ ವಿಜೇಂದ್ರವರ ಸುಪೌತ್ರ
ಜಯ ಜಯೇಂದ್ರ ಕರುಣ ಪಾತ್ರ
ಜಯ ಕವೀಂದ್ರ ಮಧ್ವ ಛಾತ್ರನೆ
ಜಯ ಭವಾಬ್ಧಿ ಪೋತ ಚರಣ
ಜಯ ದಯಾಬ್ಧೆ ಸುಗುಣ ಕೋಶ
ಜಯ ಯತೀಂದ್ರ ಕಾಮಧೇನು
ಜಯವು ಜಯವು ಜ್ಞಾನ ಭಾಸ್ಕರ ೮

ಸತ್ಯಸಂಧ ಸತ್ಯ ಸ್ತಂಭ
ಸತ್ಯ ಭೃತ್ಯ ಸತ್ಯ ವೇತ್ತ
ಸತ್ಯನಾಥ ನೊಲಿ ಮೆಯಿಂದ
ಹೃಸ್ಥ ಹರಿಯು ನಿತ್ಯ ಕಾಂಬನೆ
ಸತ್ಯ ಮಾತೆ ಸಿರಿಯ ನಾಳ್ವ
ಮುಕ್ತಿದಾತ ಕೃಷ್ಣವಿಠಲ
ಚಿತ್ತದಲ್ಲಿ ಸುಳಿಯಲೆಂಬ
ಭೃತ್ಯ ಬಯಕೆ ಸತ್ಯ ಮಾಡ್ಪ್ರಭೋ ೯

## ೭೫

## ಷಟ್ಪದಿ

ಶ್ರೀ ರಮೇಶ ಪದಾಬ್ಜ ಭೃಂಗ ಸ
ಮೀರ ಮತಕುಲ ದೀಪ ಶಾಸ್ತ್ರೋ
ದ್ಧಾರ ದಿವಿಜ ಲಲಾಮ ಶುಭಗುಣ ಸಾಂದ್ರ ಗುರುವರನೇ
ಸೇರಿಹೆನು ತವಶಿಷ್ಯ ಕೋಟಿಲಿ ಬೀರಿ ಕರುಣಾ ದೃಷ್ಟಿ ಶ್ರುತಿ ಭಂ
ಡಾರ ಸೂರೆಯ ಮಾಡ್ವ ಹಾ ಹಾ ಕಾರದಿಂ ತಪಿಪ ೧

ಬಾಲ ನೆನ್ನಯ ಶಿರವ ನಿಮ್ಮಯ ಶೀಲಕರದಿಂ ಭೂಷಿಸುತ ಕವಿ
ತಾ ಲತಾಂಗಿಯ ತಾಂಡವಾಡಿಸಿ ಚಂದ್ರಮೌಳಿನುತ
ಕಾಳಿಮನಕುಮುದೇಂದು ಜಗಸಂ
ಚಾಲಕ ಪ್ರಭು ಮುಖ್ಯ ಪ್ರಾಣಗು
ಪಾಲಿಸುತ ಸತ್ತಾದಿ ಸಕಲವ ಪೊರೆದು ಮೆರವಂಥಾ ೨

ವೇದ ವೇದ್ಯ ವಿನಾಂತ ತದ್ವನ ಸಾಧು ಪೂರ್ಣಾನಂದ ಚಿನ್ಮಯ
ಗಾಧ ವರ್ಜಿತ ಮಹಿಮ ಸೃಷ್ಟ್ಯಾ ದೃಷ್ಠ ಕರ್ತ ವಿಭು
ಸಾಧು ವಾಚದಕಾರ ಪತಿ ಮಾ ವಂದ್ಯ ನಿರುಪಮ ನಾರಸಿಂಹನು
ಅಂದು ನಿಮ್ಮನು ಕಾಯ್ದು ತೆರಪೊರೆ ಶ್ರೀ ಸುಧೀಂದ್ರ ಸುತ ೩

ಏನಿದೇನಿದು ನಿಮ್ಮ ಮಹಿಮೆಯ
ಮಾನವರಿಯಲು ಸುರರಿಗಾಗದು
ಮಾನವರ ಪಾಡೇನು ಶಿರತೂ ಗುತಿಹ ಫಣಿರಾಜ
ಮಾನ್ಯ ಸುರ ಋಷಿ ಕರುಣ ಬಲವೋ
ಮೇಣ್ವರಿಸರನ ಕೃಪೆಯೊ ಕಾಣೆನು
ದಾನಿ ನರಹರಿ ವರದ ಫಲವೋ ಮೊತ್ತವೇ ಯೆಂಬೆ ೪

ಬಾಲ ವೃದ್ಧರು ಹಾಗೆ ವನಿತಾ ಸಾಲುಗಳು ಮತ್ತಿತರ ಜನತಾ
ವೆಲ್ಲ ಕೂಡುತ ನಿಮ್ಮ ಭಜಿಸುವ ಬಗೆಯ ನೇ ನೇ[illegible]ಪೆ
ಭೂಲಲನೆಯನಲಂಕರಿಸಿದನೆ ಪಾಲಿಸುತ ಜಂಭಾರಿ ಮೇಣಾ
ಬಾಲ ಸುಬ್ರಹ್ಮಣ್ಯನೋ ಶಂಕಿಪುದು ಸುರನೀಕಾ ೫

ಸೂಕ್ಷ್ಮಮತಿಗಳೆ ಪೇಳಿ ಸರ್ವಾಧ್ಯಕ್ಷನವತಾರವನು ಯಾವ ಸು
ಲಕ್ಷಣ ಭಕುತಗೇನೆ ಮಾಡಿಹ ನಮ್ಮಗುರುವ ಬಿಡೆ
ಪಕ್ಷ ವಹಿಸದೆ ಪೇಳಿ ಯಾವನು ಲಕ್ಷ್ಯ ಮಾಡದೆ ಕಷ್ಟ ಮಾತೆಯ
ಕುಷಿಯಂ ಬಂದಿಹನು ಮುಮ್ಮುಡಿ ನಮ್ಮ ನುದ್ಧರಿಸೆ ೬

ಹಂತ ನಿಮ್ಮಯ ಶಾಂತ ಗುಣ ನಾ
ನೆಂತು ಬಣ್ಣಿಪೆ ನೂಕಿದ ಖಳಗ
ಣಾಂತದಲಿವಿಧಿ ಶಂಖು ಕರ್ಣನ ವ್ಯಾಜ ವಿಲ್ಲದಲೆ
ದೈತ್ಯ ಪಿತತಾನಿತ್ತ ಬಾಧೆಗೆ ನಾಥ ನರಹರಿ ಬಂದುದಚ್ಚರಿ
ಯಂತೆ ಭಾವಿಸೆ ಭಕ್ತವತ್ಸಲ ಬಿರುದು ಪೊಳ್ಳೆಬಿಡೆ ೭

ಕುಂತಿಕಂದನ ಯುಗದಿ ಕರಕರೆ ಕಂತೆ ಕುರುಕುಲಕಾಟೆಕ್ಕಲಿ ಬರೆ
ಅಂತೆಯೇ ಸರಿ ವ್ಯಾಸರಾಜಗೆ ತಾಳಲೀ ಜನ್ಮ
ಸ್ವಂತ ಸತಿ ಸಂಹಾರ ಕಾಟವು ಮತ್ತೆ ಯತಿ ಯಂತಾಗೆ ಹಾಗೆಯೆ
ನಿಂತಿರಲು ವೃಂದಾವನದಿ ಕಾಡುವರು ಶಿಷ್ಯಗಣಾ ೮

ಸತಿಯ ಬೇಕೆಂದೊಬ್ಬ ನೀಡ್ವೈ ಸುತನ ದಂಪತಿ ವ್ಯಾಜ್ಯ ಹರಿಸಿರಿ
ಜತನ ಮಾಡಿಸಿ ವೇತನವ ಹರಿಸಿನ್ನು ವ್ಯಾಧಿಗಳ

ಪಥನ ವಾಯಿತು ಕೂಳುಕೊಡಿಸೈ ಸತತ ವೀತೆರ ಬಯಕೆ ವ್ರಾತದಿ
ಸುತಪ ನೀನೆಂತಾಗೆ ಕುಪಿತನು ಬಲ್ಲ ಬತ ಹರಿಯೇ ೯

ನೀನು ನಿಂತಿಹೆ ಎಂದು ನಾಸ್ತಿಕರಿನ್ನು
ತಿರುಗುತಲಿಹರು ತಮ್ಮಯ
ಹೀನ ನಡತೆಗಳಿಂದ ಸ್ತ್ರೀಯರು ವಿಧಿಯ ನಡೆಸುವರು
ಚೆನ್ನ ಔಷಧ ವಿಹುದು ನಿನ್ನಲಿ ಹಣ್ಣಿನಾಶಯ ತೋರಿನೀ ಭವ
ಹುಣ್ಣುವಳಿಯುವೆ ಎಷ್ಟು ಕರುಣಿಯೊ ಗುರುವೆ ಶರಣೆಂಬೆ ೧೦

ಮೃತ್ತಿಕೆಯೆ ತಾ ನಿತ್ತು ಸಲಹಿತು ವಿತ್ತಪುತ್ರ ಕಳತ್ರ ವೆಲ್ಲವ
ನೆಂತೆನಲು ಬಲು ಹುಚ್ಚುತನವ ರ್ಣಿಸಲು ಮಿಕ್ಕುದುದಾ
ಉಕ್ತಿ ಭಜಿಸುವಗೇನು ಪೇಳ್ವುದು ಮುಕ್ತಿಕರಗತ ವೇಕೆ ಸಂಶಯ
ಶಾಸ್ತ್ರ ಭಾಗ್ಯವೆ ಸಾಕು ಕರುಣಿಸಿ ನಮಿಪೆ ಭೂಯಿಷ್ಠ ೧೧

ಇಂತು ಸಿದ್ಧವು ಇಲ್ಲ ಜಗದಲಿ ಪಂಥ ಒಡ್ಡವೆ ನಿಮ್ಮ ತೆರಗುರು
ವೆಂತ ರಾಮ ಪದಾಬ್ಜ ಮಧುಕರ ಮಧ್ವ ಮುನಿಕಂದ
ಗೀತೆ ಸ್ಮೃತಿ ಶೃತಿ ಸೂತ್ರ ಮರ್ಮವ
ಕಿತ್ತು ಕೊಟ್ಟೆಯೊ ಶಿಷ್ಯ ಸಂಘಕೆ
ಸುತ್ತಿ ಕಲಿಯುತ ಮುಕ್ತಿ ಸೂರೆಯ ಮಾಡಲೆಂದು ಖರೆ ೧೨

ಪ್ರೀತಿತಮ ಇವನಂಥ ದಾತನ
ಗ್ರಂಥ ನಿಚಯವ ಭೋಜ್ಯ ಕಿಡುತಲಿ
ಸುತ್ತಿಗೆದ್ದಲು ಹುಳಕೆ ಮೆಚ್ಚುವ ನೇನು ಪಯ ಸುರಿಯೆ
ಪುತ್ರರಿಗೆ ಮದ್ದಿಕ್ಕಿ ಪಿತನಿಗೆ ಮತ್ತೆ ಭೋಜನ ವಿಕ್ಕೆ ಬಹುಸು
ಪ್ರೀತಿ ಯಾದಂತಾಯ್ತು ಹರಿಹರೀ ಪಾಹಿಮಾಂ ಪಾಹೀ ೧೩

ಶುಂಠನಾದರು ಪಠಿಸೆ ನಮ್ಮಯ ಕಂಠದಿಂ ಬಂದಂಥ ನುಡಿವೈ
ಕುಂಠ ರಮಣನ ಕಾಂಬ ಪಂಡಿತ ನೆನೆಸಿ ಧರೆಯೊಳಗೆ
ಕಂಟಕವ ನಿರಿದು ಭವದಲಿ ವಿಷ ಕಂಠ ಗಾತಪ್ರಿಯ ತನ್ನಯ
ಭಂಟನನು ಮಾಡಿಕೊಳಲೆಂತೆಂದೆನ್ನ ಹರಿಸಿ ಪೊರೆ ೧೪

ಏಳಿರೇಳಿರಿ ಸಂತ ಮಿತ್ರರೆ ಕೇಳಿ ಕೇಳಿದುದೆಲ್ಲ ನೀಡುವ
ಪಾಲಕನು ಶ್ರೀ ರಾಘವೇಂದ್ರನು ಇಲ್ಲ ಮರೆಯುತಿರೆ
ಕೇಳಿ ಭವಸುಖ ಮತ್ತೆ ಭವದಲಿ ಬೀಳುವರೆ ವಿಜ್ಞಾನ ಯಾಚಿಸಿ
ಕೊಲ್ಲಿರೀ ಸಂಸಾರ ಬೀಜವ ಕಲಿಯು ಎಷ್ಟರವ ೧೫

ನಾಲ್ಕುಶತ ಐವತ್ತು ವರುಷವೆ ವೋಲಗವ ಕೈಕೊಂಬ ಮುಂದಿವ
ಅಲಸವ ಮಾಡಿದೆಡೆ ಸುರತರು ಬಿಟ್ಟತೆರವೇನೆ
ಜಾಲ ಮಾತುಗಳೇಕೆ ಮುಂದಿನ
ಶೀಲ ಮಾರ್ಗವ ನೋಡ್ವ ಜಾಣನು
ಪಾಲಿಸೈಧೋರೆ ಕೆಟ್ಟೆ ಕೆಟ್ಟೆನು ಎನ್ನ ಕೈ ಕೊಡುವ ೧೬

ಏಕೆ ಭಯ ನಮಗಿನ್ನು ನರಕದ ಏಕೆ ಕಳವಳ ಅಶನ ವಸನಕೆ
ಏಕೆ ಸಂಶಯ ಜ್ಞಾನ ವಿಶಯದಿ ಪಿಡಿಯೆ ಗುರುವರನೆ
ನೂಕಿ ವಿಷಯದಿ ಬಯಕೆ ಬೇಗನೆ
ಬೇಕು ಎನ್ನುತ ಜ್ಞಾನ ನಿಧಿಗಳ
ಹಾಕಿ ದಂಡವ ಪಾಹಿ ಗುರುವರ ಪಾಹಿ ಯೆಂತೆನ್ನ ೧೭

ಶತ್ರುವೀತನನನ್ಯರಿಗೆ ನಿಜ ಮಿತ್ರ ಮತಿಮತ ಸಂತತಿಗೆ ಸಂ
ಶಪ್ತ ಸುಜನಗೆ ಕಾಮಧೇನುವು ಜ್ಞಾನ ಭಾಸ್ಕರನು
ಮತ್ತೆ ಹರಿಗುರು ದೂತ ನಿವ ಬಹು
ಶಕ್ತ ನೀಡುವ ಭುಕ್ತಿ ಹಾಗೆ ವಿ
ರಕ್ತ ಭಕ್ತಿಯು ಭಕ್ತ ವೃಂದಕೆ ಭ್ರಷ್ಟ ಬಿಟ್ಟವನು ೧೮

ಜಯ ಜಯವು ಗುರುಸಾರ್ವಭೌಮಗೆ
ಜಯ ಜಯವು ಮಂತ್ರಾಲಯಸ್ಥಗೆ
ಜಯ ಜಯವು ವಿಜಯೀಂದ್ರ ಪೌತ್ರಗೆ ವ್ಯಾಸರಾಜನಿಗೆ
ಜಯ ಜಯ ಪರಿಮಳಾ ಪ್ರದಾತಗೆ
ಜಯಜಯವು ಖಂಡಾರ್ಥ ನೀಡ್ದಗೆ
ಜಯ ಜಯವು ಸಶರೀರ ಬೃಂದಾ ವನದಿ ಸೇರ್ದವಗೇ ೧೯

ಜಯ ಜಯವು ಬಾಹ್ಲೀಕ ರಾಯಗೆ
ಜಯ ಜಯವು ಶ್ರೀ ಸತ್ಯಸಂಧಗೆ
ಜಯ ಜಯವು ಪ್ರಹ್ಲಾದರಾಜಗೆ ಶಿಷ್ಯ ವತ್ಸಲ್ಯಗೆ
ಜಯ ಜಯವು ಶ್ರೀ ರಾಘವೇಂದ್ರಗೆ
ಜಯ ಜಯವು ಮಂಗಳವ ಸುರಿಪಗೆ
ಜಯ ಜಯವು ಜಯ ಮುನಿಯ ಪ್ರೀಯಗೆ ನಮ್ಮ ಗುರುವರಗೆ ೨೦

ಮಾನನಿಧಿ ಜಯತೀರ್ಥ ರಾಯರ
ಘನ್ನ ಹೃದಯಗ ವಾಯು ವಂತರ
ಶ್ರೀ ನಿಲಯ ಶ್ರೀ ಕೃಷ್ಣವಿಠಲ ಪ್ರೀಯ ಗುರುರಾಜ
ನಾನು ಪಾಮರ ಬಾಲ ನುಡಿಗಳ ನೀನೆ
ತಿದ್ದುತ ಮನ್ನಿಪುದು ನಾ
ನಿನ್ನ ದಾಸರ ದಾಸನೆಂದು ಸ್ವೀಕರಿಸು ಶರಣು ೨೧

೭೬

ಸೋಜೀಗ ರೊಳಗತಿ ಸೋಜೀಗ ರಾಘವೇಂದ್ರಾ ಗುರು ಪ

ಸೋಜೀಗ ವಲ್ಲವೆ ರಾಜಾ ಗುರುವು ನೀನು
ನೈಜ ರೂಪದಿ ಬಂದು ಮಾಜಾದೆ ಪೊರೆವುದು ಅ.ಪ

ಬೆಂಬಲ ನಿನಗೆಂದು ಸ್ತಂಭದಿ ಹರಿ ಬಂದ
ಬೆಂಬಲ ನೀನಮಗೆ ಇಂಬು ಪಾಲಿಸು ಗುರುವೇ
ನಂಬೀದ ಜನಗಣ ಡಿಂಭದಿ ನೀ ಮೂಡಿ
ಹಂಬಲ ವಳಿಪುದು ಅಂಬಕ ದೊಳು ಕಂಡೇ ೧

ಇಲ್ಲ ಹರಿಯು ಎಂಬ ಕ್ಷುಲ್ಲ ಸಂಶಯ ವೆಂಬ
ಹಲ್ಲು ಮುರಿದು ಭಕ್ತರಲ್ಲಿ ತುಂಬುವೆ ಭಕ್ತಿ
ಇಲ್ಲದಿರಲು ನೀನು ಕಳ್ಳ ಕಲಿಯು ಜಗ
ವೆಲ್ಲ ತುಂಬುತ ಶೃತಿ ಸುಳ್ಳು ಎನಿಸುತಿದ್ದಾ ೨

ನಿರುತ ನೀಡುತ ಹರಿಕೆ ಕರೆದು ಪೊರೆವೆ ಜನರ
ಸರಿಯು ಕಾಣೆನು ನಿನಗೆ ಹರಿಯ ಕಿಂಕರ ಶರಣು
ಮರುತ ದೇವನ ಮತ ಮೆರೆಸಿ ಕುಣಿಸುತ್ತಿರುವೆ
ಶರಣ ಜನರ ಪೊರೆವ ಪರಮಾಪ್ತ ಸಿದ್ಧವೋ ೩

ಹುಣ್ಣು ಅಳಿಸಿ ಭಕ್ತಿ ಹಣ್ಣು ತಿನ್ನಿಸಿ ಜ್ಞಾನ
ಕಣ್ಣು ಪಾಲಿಪ ಗುರು ಮಣ್ಣು ಗೂಡಿಸೊ ಭವವ
ಸಣ್ಣವರೆಮ್ಮ ಶಂಕು ಕರ್ಣನೆ ಸಲಹೈಯ್ಯ
ಗಣ್ಯರೊಳಗೆ ಗಣ್ಯ ಪೂರ್ಣ ಪ್ರಜ್ಞರ ಪ್ರೀಯಾ ೪

ಹಿಂದೆ ಹೋಯಿತು ಹೊತ್ತು ಮುಂದೆ ಕಾದಿದೆ ಮೃತ್ಯು
ಇಂದು ಭಾರವ ಪೊತ್ತು ಕಂದರೆಮ್ಮನು ಕಾಯೋ
ಇಂದ್ರ ತಾತನ ಹೃದಯ ಮಂದೀರದಲಿ ನಲಿವ
ಇಂದಿರೇಶ ಕೃಷ್ಣವಿಠಲ ರಾಯನ ತೋರು ೫

## ಸತ್ಯಧ್ಯಾನತೀರ್ಥರು

### ೭೭

ಇಷ್ಟು ಸುಲಭದಲಿ ಈ ಮುದ್ದು ಯತಿ ವರರಿಗೆ
ಪ್ರೇಷ್ಠತಮ ನೀ ನೊಲಿದ ಬಗೆಯೇನೋ ರಾಮಾ ಪ

ಪಟ್ಟ ಪುತ್ರನ ಶ್ರೇಷ್ಠ ಪೀಠದಲಿ ಕುಳಿತಿಂದು
ಮುಟ್ಟಿ ಪೂಜಿಪ ಭಾಗ್ಯಗಿಟ್ಟಹುದೆ ಏನೆಂಬೆ ಅ.ಪ.

ಚಿಕ್ಕತನದಲೆ ನೂಕಿ ವಿಷಯ ವಿದ್ಯೆಗಳನ್ನು
ಚೊಕ್ಕ ಶಾಸ್ತ್ರಗಳಲ್ಲಿ ಇಕ್ಕಿ ದಾಸರ ಮನವಲಿದ್ಯೋ
ಕಕ್ಕಸವುಭವವೆಂದು ವೈರಾಗ್ಯ ಧರಿಸುತಲಿ
ಭಕ್ತಿ ಮಾಳ್ಪುದ ನೋಡಿ ಮುಕ್ತರಾಶ್ರಯ ವಲಿದ್ಯೋ ೧

ದಾನಶೂರರು ಬಹು ನಿದಾನ ವಂತರು ಹಾಗೆ
ಮಾನ ಸಾಗರರೆಂದು ಜ್ಞಾನಿ ಪ್ರಾಪ್ತನೆ ವಲಿದ್ಯೋ

ದೀನ ಜನ ಮಂದಾರ ಮಾನ್ಯ ಮುನಿಕುಲ ತಿಲಕ
ಶೂನ್ಯವಾದಧ್ವಾಂತ ಭಾನು ವೆಂದೊಲಿದ್ಯೋ ೨

ಮೋದವಿತ್ತರು ಸತ್ಯಧ್ಯಾನ ತೀರ್ಥರು ಹಿಂದೆ
ಸಾಧಿಸುತ ಸುಖಮತದ ಜಯ ಭೇರಿ ಜಗದೀ
ಸಾಧು ಜನರ ಜ್ಞಾನ ಖೇದವಳಿಯುತ ಪ್ರಮೋದ
ವೀಯುವರೀಗೆ ಸಿದ್ಧವೆಂದೊಲಿದ್ಯೋ ೩

ಹಿಂದಿ ನ್ಹಿರಿಯರ ವಲವೊ ಮಂದಿ ಪುಣ್ಯವೊ ಮತ್ತೆ
ತಂದೆ ಕರುಣವೊ ಕಾಣೆ ಬಂದುದೀ ಪೀಠದಲಿ
ನಂದ ಮುನಿ ವಿಧಿ ವಿನುತ ರಾಮ ನಿನ್ನೊಲಸಿಹ ಪ್ರ
ಮೋದ ತೀರ್ಥರುಸತ್ಯ ಪಾಮರರಿಗಾಗುವುದೆ ಸ್ತುತಿಸೆ ೪

ಸಾಧು ಸಜ್ಜನ ಪ್ರಾಪ್ಯ ಬಾದರಾಯಣ ಶರಣು
ಮೋದ ಮಯ ನಿರ್ದೋಷ ವೇದ ವೇದ್ಯನೆ ಶರಣು
ಮಾಧವ ಶ್ರೀ ಕೃಷ್ಣ ವಿಠಲರಾಯನೆ ಶರಣು
ಗಾಧವರ್ಜಿತ ಮಹಿಮ ಶ್ರೀ ರಾಮ ಶರಣು ಶರಣು ೫

## ಭೂತರಾಜರು

### ೭೮

ಭೂತರಾಜ, ಭೂತರಾಜ, ಭೂತರಾಜ ಜೈ ಜೈ ಜೈ ಪ

ಖ್ಯಾತ ವಾದಿರಾಜ, ಗುರುವ । ಪ್ರೀತಿಪಾತ್ರ
ಭಾವಿರುದ್ರ ಜೈ ಜೈ ಜೈ ಅ.ಪ.

ಮೂಲ ಹರಿಯ ನಾಮ ಧರಸಿ । ವ್ಯಾಳ ವಿನುತ ಗುರುವಿನಲ್ಲಿ
ಶೂಲಿ ಯಂತೆ ವಿದ್ಯೆ ಘಳಿಸಿ । ಕಾಳ ಮನದಿ ಮೆರೆದ
ಮುನಿಗೆ ಜೈ ಜೈ ಜೈ ೧

ಹರಿಯ ಮುಖಜರನ್ನು ಬಹಳ, ಜರಿದು ಜರಿದು ಗರ್ವ ದಿಂದ ।
ಗುರುಗಳನ್ನು ಬಿಡದೆ ಬೆದಕಿ, ಪುರದಲಾದೆ
ಬೊಮ್ಮರಕ್ಕಸ ಜೈ ಜೈ ಜೈ ೨

ಘೋರ ಅಡವಿ ಸೇರಿ ಭರದಿ, ದಾರಿಯಲ್ಲಿ ಬಂದ ಜನರ ।
ಸೊರೆಕೊಂಡು ಮಾನಧನವ, ಕ್ರೂರನೆಂದು ಕರಸಿ ಕೊಂಡೆ ೩

ಏನು ನಿನ್ನ ಜ್ಞಾನ ಮಾನ, ಹೀನ ಜನ್ಮ ಬಂದರೂನು ।
ಜ್ಞಾನ ಪೂರ್ಣ ಗುರುವಿನೊಡನೆ, ಮಾನವಾದ ಪಕ್ಷಗೈದೆ ೪

ಕರುಣ ಶರಧಿ ವಾದಿರಾಜ, ಭರದಿ ಹರಿಸಿ ಕೀಳು ಜನ್ಮ ।
ಚರಣ ಭಜಿಪ ಭಾಗ್ಯಕೊಡಲು, ಮೆರದೆ ಭೂತರಾಜ ನೆನಿಸಿ । ೫

ಕ್ಷಮಿಸನೇನು ಸುತನಪಿತನು, ನಮಿಸಿ ನಿಂತ ನಿನಗೆ ನುಡಿದ ।
ಅಮರನಾಥ ಗುರುವು ನೀನು, ನಮಗೆ ಮಗನು
ಸುಖದಿ ಬಾಳೆಂದು ೬

ನಾರಸಿಂಹ ನಿನ್ನ ಬಿಂಬ, ಭಾರಿ ಗಾತ್ರ ಕೆಂಪು ನೇತ್ರ ।
ಚಾರು ವಡವೆ ಗಣವ ಧರಿಸಿ, ವೀರ ರೂಪದಿಂದ ಮೆರೆವೆ ೭

ಹಾರಿ ಹೋಗಿ ಧನಪನೆಡೆಗೆ, ತೋರಿ ನಿನ್ನಶೌರ್ಯ ಪಡದು ।
ಭಾರಿ ರತ್ನ ಮಕುಟ ನುತಿಸಿ, ನೇರ ಶಿರದಲಿಟ್ಟೆ ಗುರುವಿಗೆ ೮

ಪಥದಿ ಖಳನ ಕೊಂದು ಬೇಗ ರಥ ಸಮೇತ ಬದರಿಯಿಂದ
ಪೃಥಿವಿ ಅಳೆದೆ ದೊರೆಯತಂದು, ವಿತತ ಮಹಿಮ ದುಷ್ಟದಮನ ೯

ಕ್ಷೇತ್ರಪಾಲ ಶರಣು ಭಾವಿಸೂತ್ರ ವಲಿಯ ಬಿಡಲು ನಿನ್ನ
ಗಾತ್ರಕೆಡಹಿ ಬೇಡಿ ಕೊಂಬೆ, ನೇತ್ರ ನೀಡೊ ಹರಿಯ ಕಾಂಬ ಜೈ ೧೦

ಕಳೆದು ಬೇಗ ಹೊಲಸು ಮನವ, ಬೆಳಿಸಿ ಹರಿಯ ದೃಢಸುಭಕ್ತಿ
ಕಲಿಯ ತುಳಿವ ಶಕ್ತಿ ನೀಡಿ, ಕಲಸೊ ಸಾಧುಸಂಗ ಜೀಯ, ಜೈ ೧೧

ಶೃಂಗ ಪುರದಿ ಖಳರ ಸೊಕ್ಕು ಭಂಗ ಗೈದು ನಿಂತೆ ಅಲ್ಲ
ಲಿಂಗ ತಂದೆ ಕದರಿಯಿಂದ, ತುಂಗ ಮಹಿಮ ಮಂಗಳಾಂಗ ಜೈ ೧೨

ಗುರುವು ಕೊಟ್ಟ ನೂಪೂರಾವ, ಧರಿಸಿ
ಕುಣಿದು ಮುದದಿ ಭಜಿಪೆ
ಗರಳ ಕಂಠ ಭಾವಿ ಶರಣು, ಚರಣ ಪಿಡಿವೆ ಸ್ತೋತ್ರಪ್ರೀಯ ಜೈ ೧೩

ಸ್ವಾದಿ ಕ್ಷೇತ್ರದಲ್ಲಿ ನೆಲಸಿ । ವಾದಿರಾಜ ವೈರಿ ವೃಂದ
ಬೂದಿಗೈದು ಭಕ್ತಿಗಣಕೆ, ಮೋದ ಕೊಡಿಸು ತಿರ್ಪೆಭೂಪ ।ಜೈ ೧೪

ರಾಜ ಬಿರುದು ಸಹಿತ ಭಾರಿ । ವಾಜಿ ಏರಿ ನಡೆಯೆ ವಾದಿ
ರಾಜ ದಯದಿ ಮೆರೆವ ನಿನ್ನ । ನೈಜ ಮಹಿಮೆ
ಅಳಿಯೆ ಸಿಗದು ಜೈ ೧೫

ವಂದು ಕಮ್ಮಿ ನಾಲ್ಕು ಹತ್ತು, ತಂದೆ ವಿಧಿಯ ಕಲ್ಪಗಳಲಿ ।
ಕುಂದು ರಹಿತ ಹರಿಯ ಯಜಿಸಿ, ಇಂದು ಉಂಬೆ ದಿವ್ಯ ಪದವಿ ೧೬

ಭೀತಿ ಕರವು ನಿನ್ನ ರೂಪ, ವ್ರಾತ್ಯಗಣಕೆ ವಾದಿ ರಾಜ ।
ದೂತ ನಿನಗೆ ಪ್ರತಿಯ ಕಾಣೆ, ಪ್ರೀತಿ ಸುರಿಸು ಭೃತ್ಯರೆಮಗೆ ಜೈ ೧೭

ರಾಜ ರೆಡೆಯ ಬಲದಿ ನೆಲಸಿ, ರಾಜ ಮಂತ್ರಿ ಕೆಲಸ ನಡೆಸಿ
ಸೂಜಿ ತಪ್ಪಿಗೆಡೆಯ ಕೊಡದೆ, ರಾಜ ಕ್ಷೇತ್ರ ಕಾಯುತಿರ್ಪೆ ಜೈ ೧೮

ಕರ್ಣ ಆವಿ ಕರ್ಣ ಗುಂಪು, ನಿನ್ನ ಸ್ತುತಿ ಸೇವಿಸುವರು ।
ದೊಣ್ಣೆ ಸೇವೆ ದುಡುಕಿ ದವಗೆ, ಚೆಣ್ಣರೆಂದು ತಪ್ಪ ಕ್ಷಮಿಸು ಜೈ ೧೯

ಚಿತ್ರ ವೈಯ ನಿನ್ನ ಚರಿತೆ, ಭಕ್ತರಿಂದ ಕೊಂಡು ಹರಿಕೆ
ಕಿತ್ತು ವಗೆದು ವಿವಿಧ ದೋಷ, ಎತ್ತಿ ಕೊಡುವೆ ಕಾಮಿತಾರ್ಥಜೈ ೨೦

ಭೂತ ಪ್ರೇತ ಬಾಧೆ ಸಕಲ, ಆರ್ತಿನಾಶ ಪದವ ಪಠಿಸೆ ।
ನಾಥ ಶ್ರೀ _ ಕೃಷ್ಣ ವಿಠಲ, ಪ್ರೀತಿ ಯಿಂದ ನಲಿದು
ನಲಿವ ಜೈ ಜೈ ಜೈ ೨೧

## ಪುರಂದರದಾಸರು

### ೭೯

ಎಂತು ಪೊಗಳಲಿ ನಾನು ಪ

ಕಂತುಪಿತನೇಕಾಂತ ಭಕ್ತನ ಪಂಥವನು ಪದ
ಪಂಕ್ತಿಯಲಿ ತುಂಬಿಟ್ಟು ಸಲಹಿದ ದಾಸವರ್ಯರ ಅ.ಪ.

ಪಾಂಡುರಂಗನ ನಿತ್ಯ ನೆನೆಯುತ್ತ
ಪಂಡಿತೋತ್ತಮರೊಡನೆ ಸುಖಿಸುತ್ತ
ಕಂಡು ಹರಿಯನು ಮುಂದೆ ಕುಣಿಯುತ್ತ
ಕುಂಡಲಿಗೆ ನಿಜ ಭೂಷಣವು ಎನಿಸುತ್ತ
ಭಂಡಜನರಾ ಪುಂಡುಮಾರ್ಗವ
ಕಂಡಕಂಡೆಡೆ ಖಂಡ್ರಿಸುತ ಬ್ರಹ್ಮಾಂಡ
ದೊಡೆಯನ ಭಕ್ತಿ ಬಿತ್ತುತ
ಹಿಂಡಿ ಮತಿಮತ ರಸವ ಕುಡಿಸಿದ ದಾಸವರ್ಯರ ೧

ಮೊದಲು ಗಾಯಕ ದೇವಸಭೆಯಲ್ಲಿ
ಮುದದಿ ಕಾಮುಕ ಚೇಷ್ಟೆ ನಡೆಸುತಲಿ
ಪದವಿಯಿಂ ಚ್ಯುತನಾಗಿ ದಾಸಿಯಲಿ
ಉದಿಸಿ ಬಂದು ಸಾಧು ಸಂಗದಲಿ
ಬದಿಗೆ ತಳ್ಳುತ ಭವದ ಕೋಟಲೆ

ಮುದದಿ ಜಪಿಸುತ ವಾಸುದೇವನ
ಪದವಿ ಸಾಧಿಸಿ ದೇವ ಋಷಿ ತಾ
ಪದುಮನಾಭನ ನೆನೆದು ನರಕವ ಬ
ರಿದು ಮಾಡ್ದ ಮಹಾನುಭಾವನ ೨

ಕಾಸಿನಾಶಯವು ಮೋಸವೆಂತೆಂದು
ಹೇಸಿವಿಷಯದಿ ಲೇಸು ಸಿಗದೆಂದು
ಶ್ರೀಶ ಸಿಗುವನು ದಾಸಗೆಂತೆಂದು
ಆಶೆಯಿಂದಲಿ ಸಾರಬೇಕೆಂದು
ಓಸು ಸಂಪದ ನೂಕಿ ಭರದಿಂ
ವ್ಯಾಸರಾಯರ ಶಿಷ್ಯನೆನಿಸುತ
ವಾಸುದೇವನ ದಾಸನಾಗುತ
ದೋಷಜ್ಞಾನವ ನಾಶಮಾಡಿದ
ದೇಶ ತಿರುಗಿದ ದಾಸವರ್ಯರ ೩

ಭಕ್ತಿಯಿಲ್ಲದ ಗಾನ ತಾನಿನ್ನು
ಕತ್ತೆಕೂಗನುಮಾನವಿಲ್ಲೆಂದು
ನಿತ್ಯದೇವನ ಗಾನ ಗೈಯಲು
ಗಾತ್ರವಿದು ನಿಜವೀಣೆಯೆಂತೆಂದು
ಸಪ್ತಸ್ವರಗಳ ಕ್ಲಪ್ತಮರ್ಮಗ
ಳೆತ್ತಿ ತೋರುತ ಶ್ರೇಷ್ಠತರ ಸಂಗೀತ
ಶಾಸ್ತ್ರವ ಬಿತ್ತಿ ಜಗದೊಳು
ಸೂತ್ರ ಸಂಮತ ನೀತಿ ನುಡಿದಿಹ ದಾಸವರ್ಯರ ೪

ಮುಂದೆ ದಿವಿಜರ ಭಾಷೆ ಶಿಥಿಲತೆಯ
ಪೊಂದಿ ಪುಸ್ತಕ ದೀಚೆ ಬರದೆಂದು
ಛಂದ ಮರ್ಮವ ತಂದಿಡುವೆ ನಮ್ಮೀ
ಅಂದ ಕನ್ನಡ ದೊಳಗೆ ಎಂತೆಂದು

ಕಂದ ವೃತ್ತ ಸುಳಾದಿ ಪದಗಳ
ಛಂದ ಭೂಷಣವೃಂದ ನೀಡುತ
ನಂದದಿಂ ಕರ್ಣಾಟಮಾತೆಯ
ಮುಂದೆ ತಾ ನಲಿವಂತೆ ಮಾಡಿದ ದಾಸವರ್ಯರ ೫

ನಾರಿ ಮನೆ ಪರಿವಾರ ಹರಿಗೆಂದು
ಸಾರವನ್ನೆ ಮುರಾರಿ ಮನೆಯೆಂದು
ಚಾರು ಶ್ರುತಿಗತಸಾರ ನಡತೆಯಲಿ
ಸೂರಿಯಾದವ ತೊರಬೇಕೆಂದು
ನೀರಜಾಕ್ಷನ ಧೀರ ದೂತನ
ಸಾರ ಮನವನು ಸಾರಿ ಸಾರುತ
ದೂರ ಒಡಿಸಿ ಮೂರು ಮತಗಳ
ನೇರ ಸುಖಪಥ ತೋರಿಸಿದ ಮಪರಾಯ ದಾಸರ ೬

ಕರ್ಮಕೋಟಲೆಗಿಲ್ಲ ಕೊನೆಯೆಂದು
ಮರ್ಮತಿಳಿಯುತ ಬಿಂಬಹೃದಯಗನ
ನಿರ್ಮಮತೆಯಿಂದೆಸಗಿ ಕರ್ಮಗಳ
ಕರ್ಮಪತಿಗೊಪ್ಪಿಸುತ ಸರ್ವಸ್ವ
ಭರ್ಮಗರ್ಭನ ಭಕ್ತಿ ಭಾಗ್ಯದಿ
ಪೇರ್ಮೆಯಿಂ ಹರಿದಾಸನೆಸಿಸುತ
ಶರ್ಮ ಶಾಶ್ವತವಿತ್ತು ಸಲಹುವ
ವರ್ಮ ನೀಡಿದ ವಿಶ್ವಬಾಂಧವ ೭

ಇಂದಿರೇಶನು ಮುಂದೆ ಕುಣಿಯುತಿರೆ
ಕುಂದುಂಟೆ ಮಹಿಮಾತಿಶಯಗಳಿಗೆ
ತಂದೆ ಕೌತಕ ವೃಂದ ಮಳೆಗರೆದು
ಕಂದನನು ಪೊರೆದಂದವೇನೆಂಬೆ
ಬಂದು ಸತಿಸಹ ಮಂದಿರಕೆ ಗೋ

ವಿಂದ ಪಾಕವಗೈದು ಬ್ರಾಹ್ಮಣ
ವೃಂದಕಿಕ್ಕುತ ದಾಸರಿಗೆ ಮುದ
ತಂದ ಮಾಧವ ಭಾಗ್ಯಕೆಣೆಯುಂಟೆ ೮

ದೀನ ಹೊಲೆಯಗೆ ಪ್ರಾಣ ಬರಿಸಿದನು
ಏನು ಒಲ್ಲದೆ ಹರಿಯ ಯಜಿಸಿದನು
ಜ್ಞಾನ ಭಾಗ್ಯದಿ ಮುಳುಗಿ ತೇಲಿದನು
ದೀನ ಜನರುದ್ಧಾರ ಮಾಡಿದನು
ದಾನಿ ಜಯಮುನಿ ವಾಯು ಹೃದಯಗ
ಚಿನ್ಮಯ ಶ್ರೀ ಕೃಷ್ಣವಿಠಲನ
ಗಾನ ಸುಧೆಯನು ಬೀರಿಸುತ ವಿ
ಜ್ಞಾನವಿತ್ತ ಮಹೋಪಕಾರಿ ವಿಶೇಷ ಮಹಿಮನ ೯

## ಜಗನ್ನಾಥದಾಸರು

## ೮೦

ರಕ್ಷಿಸೋ–ಗುರುವರ–ರಕ್ಷಿಸೋ ಪ

ರಕ್ಷಿಸೊ ಗುರುವರ ನಂಬಿದೆ ನಿನ್ನ
ಈಕ್ಷಿಸೊ ಕರುಣ ಕಟಾಕ್ಷದಲಿನ್ನ
ಶಿಕ್ಷಿಸು ಮಧ್ವಾಗಮವ ಮುನ್ನ
ಉಕ್ಕಿಸು ಭಕ್ತಿ ವಿರಕ್ತಿ ಚೆನ್ನ । ಆಹ
ಲಕ್ಷ್ಮೀಕಾಂತನ ಅಪರೋಕ್ಷದಲಿ ಕಂಡು ಪ್ರ–
ತ್ಯಕ್ಷ ಔತಣ ಉಂಡ ದಕ್ಷ ಶ್ರೀ ಜಗನಾಥ ವಿಠಲನ ದೂತ ಅ.ಪ.

ನರಸಿಂಹದಾಸರ ಕುವರಾ–ಧರಿಸಿದೆ ಶ್ರೀನಿವಾಸನಪೆಸರ
ವರಕವಿತಾ ಹುಟ್ಟಿನ ಸಾರ–ಮೆರೆಯಿತು ಕೀರ್ತಿ ಅಪಾರ \ಆಹ
ವರದೇಂದ್ರನ್ನ ಅಶುಕವಿತಿಯಲಿಪೊಗಳಿ ವರಶಿಷ್ಯನಾಗುತ
ಮೂರೊಂದು ಶಾಸ್ತ್ರದಿ ಕಡುಹುಲಿ ಎನಿಸಿದೆ ೧

ನ್ಯಾಯಶಾಸ್ತ್ರದಿ ಜಗಜ್ಜಟ್ಟೀ-ವೇದಾಂತರಸಗಳ ಭಟ್ಟಿ
ಮಾಯಾವಶಿರ ಮೆಟ್ಟಿ-ಅಹಂಕಾರ ಶಿರದಲಿಟ್ಟಿ ಆಹ
ಶ್ರೇಷ್ಠವಿಜಯದಾಸರು ಮನೆ ಮುಟ್ಟಿ ಕರೆದರು ನಿನ್ನ ಬಹು
ಕೆಟ್ಟ ಅಹಂಕಾರದಿ ಪೋಗದೆ ಅನಿಷ್ಟವ ಗಳಿಸಿ
ಬಹು ಕಂಗೆಟ್ಟೀ ಬತ ೨

ಹಿರಿಯರ ದ್ರೋಹ ಗೈದುದರಿಂದ-ಕರಗಿ
ಹೋಯಿತು ಕಳೆಮುಖದಿಂದ
ಜರಿದರು ಜನರು ನಿಂದೆಗಳಿಂದ-ಗುರುಕ್ಷಯ
ಕಚ್ಚಿತು ಭರದಿಂದ ಆಹ
ಭರದಿ ಹರಿಯ ಕರುಣ ಜರುಗಿ ಪೋದುದಕಂಡು
ಕೊರಗಿ ಕೊರಗುತ ಕ್ಷೇತ್ರ ತಿರುಗುತ ಕೊನೆಗೆ
ಗುರು ರಾಘವೇಂದ್ರರ ಪುರವ ಸೇರುತ ಬಹಳ
ಸೊರಗಿ ಕಾಯ ದೆರಗಿ ಸೇವೆಯಗೈದೆ ೩

ಕರುಣಾಮಯನು ಸ್ವಪ್ನದಿ ಗುರುವು-
ಗುರು ದ್ರೋಹ ಕಾರಣ ವರುಹಿ
ಸುರಿಸಿ ಆಶೀರ್ವಾದವ ಶಿರದಿ-
ತೆರಳೆಂದ ವಿಜಯದಾಸರ ಬಳಿ ಆಹ
ತೆರೆದು ಕಂಗಳು ಒಡನೆ ತರಿದು ಮದಮಾತ್ಸರ್ಯ
ಚರಣದಿಂದಲೆ ನಾರಿ ಎರಗಿ ದಾಸರ ಕರುಣ
ಕರೆದು ಕುಡಿಯುತ ಶಿಷ್ಯ-
ವರನು ಎನಿಸುತ ಚರಣಸಾರುವ ಬಿಡದೆ ಗೋಪಾಲದಾಸರ ೪

ಕಂಡು ಶಿಷ್ಯಪ್ರಚಂಡ ಗುರುವು-ಉದ್ದಂಡ ಮಹಿಮ
ಸ್ವಗುರುಭಾವವತಿಳಿದು
ಕುಂಡಲಿಗಿವ ಜ್ಞಾನಬೀರಲೆಂದು ಉಂಡು ಸಂತಸ
ತನ್ನಾಯುವನೆ ಇತ್ತ ಆಹ
ಕೊಂಡು ಆಯುರ್ದಾನ ತೊಂಡನೆಂದಡಿಗೆರಗಿ
ಕೊಂಡು ಶ್ರೀಹರಿದಾಸ ಗಂಡುದೀಕ್ಷೆಯ ಒಡನೆ

ತಾಂಡವಾಡುತ ಪೋಗಿ ಪಾಂಡುರಂಗನ ಪುರದಿ
ಮಂಡೆ ಮುಳುಗಿಸೆ ನದಿಲಿ ಕಂಡೆ ಅಂಕಿತ ಶಿರದಿ ೫

ಪಂಡಿತನಾನೆಂಬ ಹೆಮ್ಮೆ ಬರಿ–ಪುಂಡತನವಲ್ಲದೆ ಹರಿಯ ನಿಜ
ತೊಂಡ ಲಕ್ಷಣವಲ್ಲೆಂಬ ತತ್ವಪ್ರಕಾಂಡವಾಯಿತು
ನಿನ್ನ ಚರಿತೆ ಆಹ
ತಂಡತಂಡದ ಕವನ ದಂಡೆ ಹಾರಲು ಹರಿಗೆ
ಪಂಢರೀಶನು ಭಕ್ತ ಶೌಂಡ ನಿನಗೆ ಕಾಣಿಸೆ
ಕೊಂಡು ಔಡಣ ನಡಿಸೆ
ಉಂಡು ಸಂತಸದಿಂದ ತುಂಡುಗೈಯುವ ಭವವ
ಕಂಡೆ ನಾಕವ ಭುವಿಲಿ ೬

ದೇಶದೇಶಗಳ ಸಂಚರಿಸಿ–ಹೇಸಿ ಮತಗಳ ನಿರಾಕರಿಸಿ
ಬೀಸಿ ಮತಿಮತ ಗಾಳಿ ಸುಖಿಸೆ–ಆಶು ಶಿಷ್ಯರ
ಪೊರೆದೆ ಹರೆಸಿ ಆಹ
ಭಾಷಾದ್ವಯ ಯೋಜನೆ ಮೀಸಲು ನಿನಗೆಂಬೆ
ವ್ಯಾಸ ರಾಜಾದಿಗಳ ಆಶೆಯಂದದದಿ ತತ್ವ–
ರಾಶಿ ತುಂಬುತ ಗ್ರಂಥರಾಜ ರಚಿಸುತ ಜಗಕೆ
ತೋಷ ತಂದಿತ್ತಿಯೊ ದಾಸಜನರುಲ್ಲಾಸ ೭

ಶ್ರೀಮದ್ಧರಿಕಥಾಮೃತಸಾರ–ನೇಮ ದಿಂದೋದುವನೆ ಧೀರ
ತಾಮಸರಿಗಿದು ಬಹಳದೂರ–
ನೀಮಾಡಿದೆ ಮಹೋಪಕಾರ ಆಹ
ಕಾಮವರ್ಜಿತವಾಗಿ ಪ್ರೇಮದಿ ನರಹರಿಯ
ಭಾಮಸಹ ಸಂತತ ನೇಮದಿಂ ಧ್ಯಾನಿಸುತ
ಹೋಮಿಸುವೆ ನಿತ್ಯ ಸಕಲೇಂದ್ರಿಯ ವ್ಯಾಪಾರ
ಧೂಮಕೇತುವು ಎನಿಸುತ ನಮ್ಮಘಕಾನನಕೆ ೮

ಪ್ರಾಣೇಶ ಕರ್ಜಗಿ ದಾಸಾರ್ಯರವೃಂದ–
ನೀನಾಗಿ ಪೊರೆದಂತೆ ಘನ ಅಭಿಮಾನದಿಂದ

ದೀನರೆಮ್ಮಯವೃಂದ ಕಾಯೆಂಬೆ ಮುದದಿಂದ–
ತಾಣ ನಿಮ್ಮದೆ ನಮಗೆ ದಾಸಪಂಥ ಸ್ತಂಭ ಆಹ
ಕೃಷ್ಣಾಗ್ರಜ ಶಲ್ಯ ಸಹ್ಲಾದ ಮತ್ತಾ
ಮಾನ್ಯ ಪುರಂದರ ದಾಸಾತ್ಮಜನೀನಂತೆ
ದೀನಜನೋದ್ಧಾರಗೈಯ್ಯೆ ಮುಂದೇಳುಬಾರಿ
ಜನ್ಮಯೆತ್ತು ವಿಯಂತೆ ಶರಣು ಕರುಣಾಮಯ ೯

ಪ್ರಾಕೃತ ಭಾಷೆಮಲಿನ ವೆಂತೆಂದು–ತಾಕಿಸಿದ್ದರು
ಕನ್ನಡಕೆ ಮುಳ್ಳು
ಸೋಕಿಸುತ ಪರಾವಿದ್ಯೆಮದ್ದು–ಶೋಕ ಹರಿಸಿದೆ
ಕುವರ ನೀಮುದ್ದು ಆಹ
ಶರ್ಕರಾಕ್ಷಸಗೋಷ್ಠ ಅನುಸಂಧಾನ ಕ್ರಮ ಸು
ನೀಕವಡಗಿಸಿ ಕವನ ಕಡಲೊಳು ಸಾಕಿಹೆ ಹರಿ
ಭಕ್ತಸಂಘವ ಹಿರಿಯ ದಾಸರ ಪಥವನನುಸರಿಸಿ
ಶಕ್ತನಾವನು ಗುಣಿಸೆ ನಿನ್ನುಪಕಾರ ಜಗಕೆ ೧೦

ಸಣ್ಣವನು ನಾ ನಿನ್ನು ಗುರುವೇ–ನಿನ್ನವ ಸತ್ಯ ಮನ್ಮನ ಪ್ರಭುವೆ
ಮನ್ನಿಸಪರಾಧ ಕಲ್ಪ ಧ್ರುಮವೆ–ಚಿಣ್ಣರ ಸಲಹೆ ಪಿತಗೆ ಶ್ರಮವೆ ಆಹ
ಘನ್ನ ಜಯತೀರ್ಥ ವಾಯ್ವಂತರ್ಗತ ಶ್ರೀ
ಕೃಷ್ಣವಿಠಲ ತದ್ವನನೆಂದು ಭಜಿಸುವ ಭಾಗ್ಯ
ಜನ್ಮಜನ್ಮಂತರ ಕೊಟ್ಟು ಕಾಪಾಡುವಂಥ
ನಿನ್ನಭಯಕರವೆನ್ನ ಶಿರದಲಿಡುವಲಿ ಸತತ ೧೧

## ಆತ್ಮನಿವೇದನೆ

### ೮೧

ಏನಿದು ಎನ್ನಯ ಬಾಳು–ನರಹರೀ ಪ

ಶ್ರೀನಿಧಿಯನು ಮನಮನೆಯೊಳು ನಿಲಿಸದಾ ಅ.ಪ.

ಕಳೆಯಿತು ಆಯು–ಕಳೆಯಿತು ಕಾಯೊ
ಬೆಳೆಯಿತು ಆಶೆ–ಉಳಿಯಿತು ಸಾಧನ ೧

ಹೊಟ್ಟೆಗೆ ಹಾಕೇ–ಪುಟ್ಟಿದು ದಾಯ್ತೇ
ಪೊಟ್ಟೆಯ ತುಂಬವೆ–ದುಷ್ಟ ಮೃಗಂಗಳು ೨

ಇಲ್ಲವು ತಾ ಹರಿ–ಎಲ್ಲವೂ ನೀನೇನೆ
ಇಲ್ಲವು ಯಾಕೇ–ಎಲ್ಲ ಕಾಲದಿ ಸುಖ ೩

ಪುಟ್ಟವುದೇ ಜಗ–ಪುಟ್ಟಿಸ ನಿಲ್ಲದೇ
ಭ್ರಷ್ಟರ ಮತವಿದು–ಅಷ್ಟಕರ್ತನ ಬಿಡೆ ೪

ಮಾನವಾ ತನುವಾ–ಬಾಹೋದೆ ದುರ್ಲಭ
ಮಾನದ ಶ್ರೀ ಕೃಷ್ಣ ವಿಠಲನ ತೋರದಿಹ ೫

## ೮೨

ತಂಬೂರಿ ಹಿಡಿಸಿದನು ಪ

ಅಂಬುಜಾಕ್ಷನು ದಯದಿ ಅ.ಪ

ನಂಬೀದ ಜನರಿಗೆ ಬೆಂಬಲ ತಾನೆಂಬ
ನಂಬಿಕೆ ಹೃದಯದಿ ತುಂಬುತ ತಾನೀಗ ೧

ಆಶಾ ಪಾಶಕೆ ಸಿಲುಕಿ ಬೇಸತ್ತು ಬೆಂಡಾಗಿ
ಮೋಸ ಹೋಗುತ್ತಲಿದ್ದೆ ಶ್ರೀಶ ದಯಾಂಬುಧಿ ೨

ಹುಟ್ಟಿದ ದಿನದಿಂದ ಕಷ್ಟದಲ್ಲೇ ಬಂದೆ
ಮುಟ್ಟಲಿದನು ಈಗ ಸಂತುಷ್ಟಿಯ ಕಂಡೆನು ೩

ಕಾಡಿ ಬೇಡುವರಿಲ್ಲ ನಾಡೆಲ್ಲ ನಮ್ಮದೇನೆ
ನೀಡುವ ದೊರೆ ಒಬ್ಬ ಈಡಿಲ್ಲದವನಾತ ೪

ಸ್ಮರಣೆ ಒಂದೇ ವಿಧಿ ವಿಸ್ಮರಣೆ ನಿಷೇಧ
ಹರಿನಾಮ ಸುಧೆಯನ್ನು ಕರೆದು ಕರೆದು ಕುಡಿವೆ ೫

ತಂಬೂರಿ ಸಿಗುವುದು ತುಂಬ ಭಾಗ್ಯವು ಸತ್ಯ
ಹಂಬಲಂಗಳ ಬಿಡಿಸಿ ತುಂಬುವ ಹರಿ ಮನದಿ ೬

ಪುಣ್ಯ ರಾಶಿಗಳೆಲ್ಲ ವದಗಿ ಬಂದವೊ ಏನೋ
ಚಿನ್ಮಯ "ಶ್ರೀ ಕೃಷ್ಣವಿಠಲ"ನ ದಾಸನಾದೆ ೭

## ೮೩

ನಂಬದೆ–ನಾ–ಕೆಟ್ಟೆ ಪ

ಅಂಬುಜಾಕ್ಷನೆ ನಿನ್ನಾ ಅ.ಪ

ಗಳಿಸಿತು ಬಹುಕಾಲಾ ವಿಷಯಕೆ ಆಯ್ತೆಲ್ಲಾ
ಅತಿಶಯ ವಾಯ್ತಾಶೇಗತಿಯನು ನಾಕಾಣೆ
ಮತಿವಂತ ವ್ರತತತಿ ಜಪಜಪ ಹೋಮಕೆ
ಪತಿಗತಿಯೆನಿಸುವ ಗತಿದಾಯಕ ನಂಬದೆ ೧

ಬಂದೆನು ಬಹುಸಾರಿ ನೊಂದೆನು ಈ ಪರಿಯೇ
ಕಂದಿಸೆ ಯಮರಾಯಾ ಬಂಧುವು ಯಾರ್ಹೆಯ
ಇಂದಿರೆ ಮನಶಶಿ ಸುಂದರಮೂರ್ತಿ
ಮಹೇಂದ್ರ ಪರಾತ್ಪರ ಪೂರ್ಣಾನಂದನ ೨

ಮಾಡಿಹೆನಪರಾಧ ಪಾಡದೆ ತವ ಮಹಿಮೆ
ಬೇಡುವೆ ನಿಜಭಕ್ತಿ ಓಡಿಸು ಈ ಬುದ್ಧಿ
ಓಡಿಸೆ ಜಗ ಕಾಪಾಡುತಜೀವರ
ಈಡು ದಿಕ್ಕಿಲ್ಲದ ಗೂಢ ಸ್ವತಂತ್ರನೆ ೩

ಜ್ಞಾನವ ನಾಬಿಟ್ಟೆ ಹೀನನು ಹೇ ಧೊರೆಯೆ
ಜ್ಞಾನದ ಶರಣೆಂಬೆ ಏನನು ಕೊಡಲಾರೆ
ಆನತ ಬಂಧುವನಂತ ಗುಣಾರ್ಣವ
ಶ್ರೀನಿಧಿ ಸೃಷ್ಟಿವಿನೋದವ ಗೈವನ ೪

ಬಂದಿಯು ನಾನ್ನೈಯಾ ಬಂಧಕ ನೀನ್ನೈಯ
ಎಂದಿಗುನಾದಾಸಾ–ತಂಡಿಡು ನೀಲೇಸಾ
ನಂದ ಮುನೀಂದ್ರ ಸುಮಾನಸ ಮಂದಿರ
ನಂದದ ಶ್ರೀವರ "ಶ್ರೀ ಕೃಷ್ಣವಿಠಲ"ನ ೫



## ೮೪

ಯಾತರವ ನಾನ್ನೈಯ ಇಂದಿರೇಶ ಪ

ಹೋತನ ಕೊರಳೊಳಗೆ ಮೊಲೆಯಿರ್ಪ ತೆರದಲಿ ಅ.ಪ

ಗ್ರಾಸಕ್ಕಲ್ಲದೆ ನಾನು ದೇಶ ದೇಶಕೆ ಪೋಗಿ
ವಾಸಪಗೆ ಸಮರೆಂದು ದೋಶಿಗಳ ಪೊಗಳೀ
ಕಾಸುಗಳಿಸಲು ದಾಸ ವೇಷ ಹಾಕಿದ ಶೂರ
ಏಸು ಜನ್ಮವು ಕಳಿಯೆ ನಾಶವಾಗದೊ ಆಶೆ ೧

ನೇಮ ನಿಷ್ಠೆಗಳಾಟ ಪರರಿಗೋಸುಗ ಹೂಡಿ
ಕೋಮಲಾಂಗಿಯರ ಮನ ಮೆಚ್ಚಿಸುತ ಜಗದೊಳಗೆ
ಹೇಮದಾಶೆಗೆ ಸೂಳೆ ಪ್ರೇಮವನ್ನು ತೋರ್ಪಂತೆ
ನಾಮಸವಿಯುಣ್ಣದಲೆ ಗಾಯನವ ಮಾಡುವೆನು ೨

ವ್ಯಾಸಕೂಟದಿ ಬೇರೆ ದಾಸಕೂಟವು ಎಂಬ
ದೋಷವಾದವ ಮಾಡಿ ವ್ಯಾಸದಾಸರ ದ್ರೋಹ
ಗ್ರಾಸವಾದೆನು ನಾನು ಶಾಸ್ತ್ರವಾಹುದೆ ಬೇರೆ
ಭಾಷೆ ಬೇರೆಯು ಆಗೆ ಶ್ರೀಶ ಹರಿಸೋ ಇದನು ೩

ಮಾನವರ ಬಹುಮಾನ ಸಾನುರಾಗದಿ ಬಯಸಿ
ನಾನು ಮೋದಿಸುವೆ ಹೀನ ಮತಗಳ ಹುಳುಕು
ಪ್ರಾಣಪತಿಮತ ಮೇಲ್ಮೆಗಾನಮಾಡೆನು ದೃಢದಿ
ಸ್ವಾನುಸಂಧಾನ ವಹೀನ ಜ್ಞಾನಿಯೊ ನಾನು ೪

ಖ್ಯಾತಿ ಜೀವನಕಾಗಿ ಶಾಸ್ತ್ರವೋದಿದ ಮೂಢ
ನೀತಿ ಪೇಳುವೆ ಜನಕೆ ನೀತಿತೆರನಾನಡಿಯೆ
ಆತ್ಮಸ್ತುತಿ ಪರನಿಂದೆ ನಿತ್ಯ ನೇಮವುಯನಗೆ
ಈತರದ ಹರಿದಾಸ ಮಾತರಿಶ್ವಗೆ ದೂರ ೫

ದಾನ ಧರ್ಮಗಳಿಲ್ಲ ಮೌನ ಜಪ ತಪವಿಲ್ಲ
ಹೀನಗುಣ ಬಿಡಲಿಲ್ಲ ನಾನುಯೆಂಬುವೆನಲ್ಲ
ಮಾನಿನೀ ಮನೆ ಸೊಲ್ಲು ಏನು ಬಿಡೆದಿಹೆನಲ್ಲ
ನಿನ್ನ ನಂಬಿಹೆನಲ್ಲ ನೀನು ಬಿಡೆ ಮದ್ದಿಲ್ಲ ೬

ಇಂತುಟಾದರು ಮೆರೆವೆ ಹಂತ ನಿನ್ನಯ ಕೃಪೆಯೊ
ಯೆಂತು ಪೇಳಲಿ ಜೀಯ ಸಂತ ಜಯಮುನಿ
ವಾಯುವಂತರದಿ ನಲಿವಂಥ "ಶ್ರೀ ಕೃಷ್ಣವಿಠಲ"ನೆ
ನಿನ್ನಂಥ ದೊರೆಯಿಲ್ಲ ಸರ್ವೋತ್ತಮನೆ ಶರಣ್ಯೆಯ ೭

## ೮೫

ಲಜ್ಜೆ ಲಜ್ಜೆ ನಿನ್ನ ನಂಬಿ ಕೆಟ್ಟೆನಾನು ಮಾಡೊದೇನು ಪ

ಗೆಜ್ಜೆ ಕಟ್ಟಿದ್ದೊರೆ ಕೃಷ್ಣ ಭಜನೆಯಲ್ಲಿ ಮಾನದಲ್ಲಿ ಅ.ಪ.

ಆರು ವಲಿದು ಮಾಡೊದೇನು ಆರುಮುನಿದು ಮಾಡೊದೇನು
ಊರುಮಂದಿ ನಕ್ಕರೇನು ಚಾರು ಚಾರು ಮೆಚ್ಚಲೇನು
ಭಾರಿದೇವ ವಿಶ್ವಜನಕೆ ಹರಿಯದಾಸನೆಂದು ಇನ್ನು
ಈರ ಮತವ ಸಾರಿಸಾರಿನಲಿದು ನಲಿದು ಸುಖಿಪುದಕ್ಕೆ ೧

ದುಡ್ಡು ಕಾಸುಬೇಡ ನಮಗೆ ದೊಡ್ಡತನವು ಬೇಡ ಹಾಗೆ
ಹೆಡ್ಡತನನ ಬಿಟ್ಟು ಪಿರಿಯಕೃಷ್ಣನನ್ನು ಭಜಿಸಲಿಕ್ಕೆ
ಅಡ್ಡಿಏನು ಕುರುಡು ಮನವೆ ನೆನೆದುನೆನೆದು ನೋಡುನೀನೆ
ದೊಡ್ಡತನವೆ ಸತ್ಯವೀದು ದಡ್ಡತನವೆ ದುರಭಿಮಾನ ೨

ಹರಿಯದಾಸದೀಕ್ಷೆ ಪಡೆಯೆ ಸುಲಭವಲ್ಲ ಸುಲಭವಲ್ಲ
ದುರಿತ ರಾಶಿಪೋಗಿ ಶುದ್ಧ ಚಿನ್ನದಂತೆ ಆಗದೇನೆ
ಹಿರಿದು ಕಾಣೊ ಇಂಥಾ ಜನ್ಮ ಬರಿಯ ಮಾತಿಗೊಲಿಯದೇವ
ಅರಿವಿನಂತೆ ನಡೆಯದಿರಲು ತೊರೆದು ಎಲ್ಲ ದುರಭಿಮಾನ ೩

ಗೆಜ್ಜೆಕಟ್ಟಿ ಕುಣಿದು ಕುಣಿಯೆ ಲಜ್ಜೆನಾಶವಾಹುದೈಯ್ಯ
ಲಜ್ಜೆನಾಶವಾಗಿ ಭಕ್ತಿಯುಕ್ತಿ ಉಕ್ಕಿಹರಿಯುತಿರಲು
ಅಬ್ಜಪೀಠ ಪಿತನುತಾನೆ ಅಪ್ಪಿಕೊಂಡು ನಲಿದುನಲಿವ
ಅಬ್ಜನಾಭ ನಲಿದು ವಲಿಯೆ ಹೆಚ್ಚುಉಂಟೆ ಅದರಕ್ಕಿಂತ ೪

ಮೆರೆಯುತಿರಲು ದುಷ್ಟಕಲಿಯು ಅನ್ಯಮಾರ್ಗ ಸಾಧ್ಯವಿಲ್ಲ
ಹರಿಯ ಭಜನೆ ಒಂದೇ ದಾರಿ ಹರಿಯ ವಲಿಸೆ ಸಿದ್ಧವೀದು
ಜರಿದು ವಿಷಯ ಬೆರಸಿ ಭಕ್ತಿ ಸಿರಿಯ ರಮಣ "ಕೃಷ್ಣವಿಠಲ"
ಚರಣ ಯುಗವ ಭಜಿಸಿ ನೀನು ಮಾನ್ಯನಾಗೋ ಧನ್ಯನಾಗೊ ೫

## ೮೬

ಶ್ರೀಪತೀ–ಎನಗೇನು ಗತೀ ನನಗಾಗಲಿ ನಿನ್ನಲಿ ರತೀ ಪ

ಚಪಲ ತನದಿ ಬಹು ಕಪಟಭಕುತಿನಟಿಸಿ
ವಿಪುಳಮತಿಯು ಎನಿಸಿ ಗುಪಿತ ದೋಷಿಯು ಆದೆ ಅ.ಪ.

ಬಟ್ಟೆ ನೋಡಲು ಬಹು ಛಂಧ–ಮೇಲೆ
ಘಟ್ಟಿ ಬಣ್ಣದ ಕಾವಿ ಶಾಟಿ ಹಾಗೆ
ಪಟ್ಟೆಮಡಿಗಳ ಭಾರೀ ಥಳಕೊ–ಬಹಳ
ದಟ್ಟ ತುಳಸೀಸರಗಳ ಹೊಳಪೂ ಆಹಾ

ಸೃಷ್ಟಿಗೊಡೆಯನೆ ಎನ್ನ ಕೆಟ್ಟ ತನಗಳನ್ನು
ಎಷ್ಟೆಂದು ಬಣ್ಣಿಪೆ ನಿಟ್ಟ ನೆನೆಯದೆ ಪರರ
ದೃಷ್ಟಿನೋಡುತ ಹಿಗ್ಗಿ ಅಟ್ಟಹಾಸದಿ ಕುಣಿದು
ಕೂಗಿ ಪಾಡುವಂಥ ಭ್ರಷ್ಟ ಮಾನವ ನನಗೇ ೧

ವೇದ ವಾದಗಳೇನು ಕಾಣೆ-ಶುದ್ಧ
ಸಾಧು ಕರ್ಮಗಳೊಂದು ಇಲ್ಲ-ಜನರ
ಮೋದಗೋಸುಗವೇನೆ ಎಲ್ಲ_ಕಾಮ
ಕ್ರೋಧವ ನಿಬಿಡಿತೇನೇ ಬಿಚ್ಚೆಹೃದಯಾ ಆಹಾ
ಮಧ್ವರಾಯರ ಶಾಸ್ತ್ರ ಗ್ರಂಥ ಸಹ ತಿಳಿಯದೆಲೆ
ಸಿದ್ಧ ಸಾಧಕನಂತೆ ಸಾಧುಲಿಂಗವ ತೋರಿ
ಮುಗ್ಧಗೈಯ್ಯುತ ಮಂದಿ ಮೆದ್ದು ಪಕ್ವಾನ್ನಗಳ
ಗೆದ್ದುಕೊಳ್ಳುವೆ ಬಹಳ ದಕ್ಷಿಣೆ ಬಹುಮಾನ ೨

ನೇಮನಿಷ್ಠೆಗಳಾಟ ಹೊರಗೆ-ಗೃಹದಿ
ಪ್ರೇಮವಿಲಾಸ ಆಟ ಕೂಟಜನ
ಸ್ತೋಮರೆಲ್ಲವ ನುಡಿವ ನೀತಿ ಖ್ಯಾತಿ
ಕಾಮುಕನಾಗಿ ಚರಿಸಿದೆ ಜಗದೀ ಆಹಾ
ಹೇಮದಾಸೆಗೆ ಸೂಳೆ ಪ್ರೇಮವ ತೋರ್ಪಂತೆ
ಕಾಮಿತಪ್ರದ ನಿನ್ನ ನಾಮ ಸವಿಯನುಣ್ಣದೆ
ತಾಮಸರಿಗೆ ಉಪದೇಶ ನೀಡುತ ಸತ್ಯ-
ಭಾಮೆಯರಸ ನಿನಗೆ ದೂರನಾದೆನಲ್ಲಾ ೩

ಹಾಡಿಹಾಡುವೆ ಎತ್ತಿ ಸುತ್ತ ಜನರು
ನೋಡಿ ಹಿಗ್ಗುತ ಬಾಪು ಬಾಪು ನುಡಿಗೆ
ಹಾಡಿನಲ್ಲಿಹ ಸವಿಯುಣ್ಣ ದೇನೆ
ಆಡಿ ಆಡಿಪೆ ಶಿರವ ಜ್ಞಾನಿಯಂತೆ ಆಹಾ
ಕೇಡು ಚಿಂತಿಸಿ ಪರರ ಸ್ವಾರ್ಥಗೋಸುಗನಿತ್ಯ
ಕಾಡಿ ಬೇಡುತ ಜನರ ದೂಡುತಿಹೆ ಸಂಸಾರ

ಪ್ರೌಢ ಭಕ್ತರ ಗೋಷ್ಠಿಕೂಡಿ ಭಜಿಸದ ಎನ್ನ
ಗಾಢ ಡಂಭಕೆ ಜಗದಿ ಈಡು ಕಾಣೆಸು ಸ್ವಾಮಿ ೪

ಭಾರಿ ಶಾಲುಗಳನ್ನೆ ಹೊದ್ದು–ನಿತ್ಯ
ಕೇರಿಕೇರಿ ಪುರಾಣಗಳನ್ನು ಮೆದ್ದು–ಹಾರಿ
ಹಾರುತ ತತ್ವರಾಶಿ ನುಡಿದು–ಊರು ಜ–
ನರಮುಂದೆ ಪಾಂಡಿತ್ಯ ತೋರ್ಪೆ ಆಹಾ
ನಾರಿ ಮನೆ ಧನಮ ಮತೆ ದೂರಗೈಯ್ಯದೆ ಮನದಿ
ತೋರಿ ತೋರುವೆ ಪರಮವೈರಾಗ್ಯ ಭಕ್ತಿಯ
ದೂರಿ ದೂಡುವೆ ಪರರ ಹುಳುಕುಗಳನು ಎತ್ತಿ
ಪಾರುಗಾಣದ ಕರುಣ ತೋರದಿದ್ದರೆ ಇನ್ನು ೫

ಗುಡಿಗೆ ಹೋಗುವೆ ನಾನು–ನಿತ್ಯ ಅಲ್ಲಿ
ಬೆಡಗು ಸ್ತ್ರೀಯರ ಹುಡುಕುವುದೇನೆ ಕೃತ್ಯ
ದೃಢಭಕುತಿಯನು ಮಾಡಲೊಲ್ಲೆ ಸತ್ಯ–ನ
ಮಡದಿ ಮಕ್ಕಳಿಗಿಲ್ಲ ಭೃತ್ಯಾನುಭೃತ್ಯಾ ಆಹಾ
ಹುಡುಕೀ ನೋಡಿದಾಗ್ಯೂ ವಿರಕ್ತಿ ಭಕ್ತಿಗಳಿಲ್ಲ
ಬಿಡಲು ಪೊರೆಯೆ ಪುರಾಣಶಾಸ್ತ್ರಗಳನ್ನು
ಗುಡುಗಿ ಗುಡುಗುವೆ ನಿತ್ಯ ಎನ್ನ ಅನಾದಿ
ಜಾಡ್ಯವ ಹರಿಸಿ ಬಿಡಿದು ಭಕ್ತಿಯ
ನೀ ಕಲಿಸದಿದ್ದರೆ ಈಗ ೬

ದೊಡ್ಡ ಪಂಡಿತ ನಾನೆಂಬ ಹೆಮ್ಮೆ–ಶುದ್ಧ
ದಡ್ಡನೆಂಬುದ ಬಲ್ಲೆ ಮನದಿ–ಹಾಗೂ
ಅಡ್ಡ ಬೀಳೆನು ಭಕ್ತ ಗಣಕೆ ಸುಳ್ಳು
ವೊಡ್ಡುತವರನು ಹಳಿದೂ–ಕುದಿದೇ ಮನದೀ ಆಹಾ
ದುಡ್ಡುಗೋಸುಗ ಬಹಳ ದೊಡ್ಡ ದಾಸನು ಎನಿಸೀ
ಹೆಡ್ಡಮಂದಿಯ ಮುಂದೆ ದೊಡ್ಡ ಭಾಷಣ ಮಾಳ್ಪೆ
ಗುಡ್ಡದೊಡೆಯನೆ ಭಕ್ತಜಿಡ್ಡುಲೇಶವು ಕಾಣೆ
ದೊಡ್ಡ ನಾಮವ ಹಾಕಿ ಸಡ್ಡೆ ಮಾಡದೆ ತಿರಿವ ೭

ಕಚ್ಚಿ ಬಿಡದಿಹ ತುಚ್ಛ ಕಲಿಯು-ಬಹಳ
ಮೆಚ್ಚಿ ಬಂದಿಹ ನವನು ಬಿಡುವನೇನು
ಇಚ್ಛೆ ನನ್ನದು ನಡೆಯದೇ ನೊಂದು
ತುಚ್ಛ ವಿಷಯದಿ ಸೆಳೆದು ಸೆಳೆಯುತಿಹನು ಆಹಾ
ಇಚ್ಛೆಯಿಂದಲಿ ಜಗವ ಸೃಜಿಸಿ ಪಾಲಿಪಲೀಲೆ
ಹಚ್ಚಿಕೊಂಡಿಹ ನಿನಗೆ ನನ್ನ ಪಾಲಿಪುದೇನು
ಹೆಚ್ಚು ಕಾರ್ಯವೆ ಜೀಯ ಮುಚ್ಚಿಕೊಂಡಹ ನಿನ್ನ
ಸ್ವಚ್ಛ ಬಿಂಬವ ತೋರಿ ಮೆಚ್ಚಿ ಕೊಡದಿರೆ ಜ್ಞಾನ ೮

ಶ್ವಾಸಮತದಲಿ ಜನ್ಮ ವಿತ್ತೆ-ವಿಜಯ
ದಾಸರ ಪ್ರಿಯ ಮೋಹನ್ನ ಪರಂಪರೆಯ
ದಾಸನೆನಿಸಿ ಯೆನ್ನ ಮೆರೆಸಿ ಹೀಗೆ
ದೋಷಿಗೈವುದು ಥರವೆ ಶ್ರೀಭಕ್ತಪ್ರಿಯ ಆಹಾ
ವಾಸುದೇವನೆ ತುರ್ಯಲೇಸು ದೃಷ್ಟಿಯ ಬೀರೆ
ನಾಶವಾಗದೆ ದೋಷ ಭಾಸವಾಗದೆ ಜ್ಞಾನ
ಕಾಸುಬೀಡೆನು ಹಿರಿಯ ದಾಸರ ಗುಣ ನೋಡಿ
ಲೇಸು ನೀಡೆಂತೆಂಬೆ ಶ್ರೀಕೃಷ್ಣವಿಠಲಾ ೯

## ೮೭

ಹರಿದಾಸನ ಮಾಡಿಕೊಂಬುವಿಯ ಎನ್ನ ಪ

ಪರಮಕರುಣಾಶರಧಿ ಭಕ್ತ ಪ್ರಸನ್ನ ಅ.ಪ.

ತಂಬೂರಿ ಹಿಡಿಸುತ ಕೈಲಿ-ಪರಮಸಂಭ್ರಮದಿಂದ
ಪಾಡುವ ಶೈಲಿ ತಿಳಿಸಿ
ತುಂಬಿ ಹರಿಗುರು ಭಕ್ತಿ ಗಾಳಿ ಹೃದಯ ಬಿಂಬನ
ನೋಡಿ ಕುಣಿದು ಕುಣಿಯುವ ೧

ಹಿಂದಿನ ದುರುಳ ಕಥೆಗಳ ಅಳಿಸೀ–ಮುಂದಿನ
ಸುಖಕೆ ದಾರಿಯ ತಿಳಿಸೀ
ಎಂದೆಂದು ಅಹಂಮಮತೆ ಕೊಡದೆ–ನಂದ ದಿಂದ
ಪಥ ಸಾಗಿಸಿ ಬಿಡದೇ ೨

ಗೆಜ್ಜೆಕಟ್ಟಿಸಿ ಕಾಲುಗಳಲ್ಲೀ ಭರದಿ–ಭರ್ಜಿಸಿ ವಿಷಯ
ಕಜ್ಜಿಗಳನು ನಿರುತ
ಉಜ್ಜಲಿಸುತ್ತ ಭಕ್ತಿಯ ದೀಪ ಪರರು ಸಜ್ಜನ ಸಂಗ
ದಿರಿಸಿ ಕಾಯುತ ಲೀಗ ೩

ಕಿರಿಯದಾಸನು ಎಂದು ಜರಿಯದೆಲೆನಗೆ ಹಿರಿಯ ದಾಸರ
ಕರುಣ ಕವಚವ ತೊಡಿಸಿ
ಪರಮ ಅದ್ಭುತ ಚರಿತೆ ವಿಶೇಷ ನುಡಿಸಿ–ಹರಿಸಿ ಕಲಿಗಣ
ಬಾಧೆ ತಟ್ಟದ್ದಾಂಗೆ ೪

ದಿಟ್ಟಜಯಮುನಿ ವಾಯು ಹೃಸ್ಥ ಸಿರಿ ಪ್ರೇಷ್ಠತನು
ಶ್ರೀಕೃಷ್ಣವಿಠಲ ಪರಮೋ–
ತೃಷ್ಟ ದೈವವೆಂದಾರ್ಭಟಿಸಿ ನಿನಗಿಷ್ಟದಾಸನಾಗಿ
ಚರಿಸಿ ನಲಿವಂಥ ೫

## ೮೮

ಹಿಂಗಾಯಿತಲ್ಲಾ ಏನಿದು ಹರಿಹರಿ ಪ

ಮಂಗನ ತೆರ ಈ ಅಂಗವ ವಿಷಯತ
ರಂಗೆ ವಡ್ಡುತ ರಂಗನ ಮರೆತಿಹೆ ಅ.ಪ.

ಬರಿದೆಯೆ ಹೋಗುತ್ತಿರುವುದು ಹೊತ್ತು
ಹರಿಧ್ಯಾನಕೆ ಸಾಲದು ಪುರಸೊತ್ತು
ತಿರುಗಲು ಮನೆಮನೆ ಸಾಲದು ಹೊತ್ತು
ಸರಸಿಜನಾಭನೆ ಇದಕ್ಕೇನು ಮದ್ದು ೧

ಶ್ರೀ ಕಮಲೇಶನ ಪೂಜೆಯ ಮಾಡನೆ
ಆಕಳಿಸುತ ಮೈ ಕೈ ಮುರಿಯುವೆನು
ಸ್ವೀಕರಿಸಲು ಸವಿ ಪಾನೀಯಂಗಳ
ಮುಖಸಹತೊಳೆಯದೆನೂಕುತ ಮುಖ ಪ್ರಕ್ಷಾಳನೆ ಬಿಡುವೆ ೨

ಸ್ನಾನವ ಮಾಡೆನು ಸಂಧ್ಯಾ ತಿಳಿಯೆನು
ಧ್ಯಾನವು ಯೆಂತೆನೆ ಕೂಳಿನ ಚಿಂತೆಯು
ಆನನ ಮುಸುಕುತ ಬರಿಪಿಚಿಯೆಂದು ನಿ
ಧಾನದಿ ಜಪಸರ ನೂಕುವೆನಲ್ಲಾ ೩

ಮಂತ್ರವು ಬಾರದು ಸ್ತೋತ್ರವು ಬಾರದು
ತಂತ್ರದಿ ನೂಕುವೆ ದೇವರ ಪೂಜೆಯ
ವಿಧಿಗಳ ಮೌನದಿ ಕರ್ಮಗಳೆಲ್ಲವ
ಮಂತ್ರಿಯ  ಮಡಿದಿಯು ಪೇಳಿದ ತೆರದೊಳು
ಯಂತ್ರ ವಿಧಾನದಿ ನುಡಿಯುವೆ ದಿನವಹಿ ೪

ಹೀನಕ ವೃತ್ತಿಗಳಿಂದಲಿ ಜೀವನ
ವರ್ಣವಿವೇಕವ ನಡಿಸಲಸಾಧ್ಯವು
ಜನ್ಮದಿ ವಿಪ್ರನು ನಾನಿಹೆ ಬರಿಸರಿ
ತಿನ್ನುತ ಕುಡಿಯುತ ತಳ್ಳುವೆ ಆಯುಷ್ಯ ೫

ಊಟದ ಚಪಲವು ತಿಂಡಿಯ ಚಪಲವು
ನೋಟದ ಚಪಲವು ಚಪಲ ಕಂದರ್ಪನ
ಕಾಟದಿ ಸಿಲುಕಿಹೆ ಕೈಟಭಮರ್ದನ
ದಾಟುವೆದೆಂತೋ ಭವವನು ಕಾಣೇ ೬

ಏರಿದೆ ಬಹುನಿತ್ರಾಣವು ಗಾತ್ರದಿ
ಮೀರಿದವಯ ಶಾಸ್ತ್ರಾಭ್ಯಾಸಕೆ
ಕಾರುವರ್ಕೈ ವಿಷ ಬಾಂಧವರೆಲ್ಲರು
ಆ ರವಿಸುತನಾಳ್ಗಳಗು ನಾನಿಹೆ ೭

ಮಡದೀ ಮಕ್ಕಳ ಪಾಶದಿ ಬಿದ್ದಿಹೆ
ದುಡಿಯದ ಕಾರಣ ದುಗುಡವ ತೋರ್ಪರು
ನಡೆಯದು ತುಸನನ್ನ ಮಾತೇನಿಲ್ಲ
ಮಿಡುಕುತ ಮಿಡುಕುವೆ ಮುಪ್ಪಿನ ಹಿಡಿತದಿ ೮

ತೋಡಿದರೂ ಎದೆ ಕಾಣೆನು ಭಕ್ತಿಯ
ಕಾಡನು ಸೇರಲೊ ಬಾವಿಗೆ ಬೀಳಲೋ
ಜೋಡಿಯು ಆಗಲೊ ಜೋಳಿಗೆ ಪಿಡಿಯಲೊ
ಓಡದು ಬುದ್ಧಿಯು ತೋರಿಸು ಹಾದಿ ೯

ಕರುಣಾಮಯ ನೀನೆಂಬುವ ಬಿರುದನು
ಹಿರಿಯರ ಮುಖದಿಂ ಕೇಳಿಹೆ ಸ್ವಾಮಿಯೆ
ಭರವಸೆ ಎನಗಿಹದೊಂದೇ ನಿಶ್ಚಯ
ಶರಣನ ಬಿಡದಿರು ಆಪದ್ಬಾಂಧವ ೧೦

ಪಾಮರ ನಿಹೆಬಹು ಕಲುಷಿತ ಚಿತ್ತನು
ಭೀಮಾರ್ಚಿತ ಪದಯಗ ನಂಬಿಹೆ
ಪ್ರೇಮವ ಸುರಿಸುತ ಕಾಯ್ಯೆ ಬೇಗನೆ
ಸಾಮನೆ ಶರಣ್ಯೆ "ಶ್ರೀ ಕೃಷ್ಣವಿಠಲಾ" ೧೧

## ೮೯

ಹ್ಯಾಂಗೆ ಉದ್ದರಿಸುವಿ ಎನ್ನ ಕೃಷ್ಣ ಕರುಣ ಸಂಪನ್ನ ಪ

ಹೋಗಿ ಹೊಗಿ ವಿಷಯ ಕೂಪದಲ್ಬೀಳ್ವವನಾ ಅ.ಪ.

ದಾಸನು ಎಂದೆನಿಸಿ ಮೆರೆವೆ
ಮನದೀ ಲೇಶಾ ಭಕುತಿಯನಾನೊಂದರಿಯೇ
ವೇಷಹಾಕಿದೆ ಧನಕೆ ಬರಿದೇ
ಆಶೆ ಇಟ್ಟು ಭವದಿ ವಂಚಕನೆನಿಸಿದವನಾ ೧

ಮಂದಿ ಜನರ ಮುಂದೆ ವೈರಾಗ್ಯನಟನೆ
ಮಂದಿರದೊಳು ಬಹು ಕಾಮದ ಭಜನೆ
ಬಂಧು ಬಳಗ ಕೂಡೆ ಬಹಳ ಭಕ್ತಿ
ಇಂದಿರೇಶನ ಧ್ಯಾನ ದೋಳ್ವಿರಕ್ತಿ ೨

ಗುರುಹಿರಿಯರ ಜರಿವೊದೆ ಜಪವು
ದುರುಳರ ಸಂಗ ದೋಳ್ಮೆರೆವೋದೆ ವ್ರತವು
ಪರಿಸರನ ಶಾಸ್ತ್ರದೋಳ್ಮೌನ
ನರನಾರಿ ಸ್ತವ ದೋಳ್ಧ್ಯಾನ ೩

ವೇದ ಓದಿದೆ ನಾನು ಆದರೇನು
ಮೋದತೀರ್ಥರ ಮರ್ಮ ಸಿಗಲಿಲ್ಲವು ಇನ್ನು
ವಾದಕ್ಕನುಕೂಲ ವಾಯ್ತದು ಅಷ್ಟೆ
ಖೇದ ತೊಲಗದೆ ಮನದಿ ಬಹುಕಷ್ಟಪಟ್ಟೇ ೪

ಭುಕ್ತಿ ಪಡೆಯೆ ಕಾಲಕಳೆದೆನಲ್ಲಾ
ಯುಕ್ತಿಯಿಂದಲಿ ನೀನು ಒಲಿವೋನು ಅಲ್ಲಾ
ಭಕ್ತ ಜನರ ಸಂಗ ನಾ ಪಿಡಿಯಲಿಲ್ಲ
ಮುಕ್ತಿಗಾಗುವ ಭಾಗ್ಯ ಎನ್ನಲಿಲ್ಲವಲ್ಲಾ ೫

ಸ್ವೋತ್ತುಮರ ನೋಡೆ ಮಾತ್ಸರ್ಯ ಎನಗೇ
ವಾತ್ಸಲ್ಯ ತೋರೆನು ಸ್ಥಾವರ ಜನಕೇ
ಕುತ್ಸಿತ ಪಾವಡ ಬೀರುವೆ ಜಗಕೆ
ತಾತ್ಸಾರ ತೋರುವೆ ಭಕ್ತರ ಗುಣದೀ ೬

ಈಷಣ ತ್ರಯಗಳ ಬಿಡಲಿಲ್ಲ ಲೇಶಾ
ಭಾಷಣದಿ ತೋರ್ಪೆಜ್ಞಾನ ಪ್ರಕಾಶ
ಈಶ ನೀನೊಬ್ಬನೆ ಸರಿಯೆಂಬೆ ಹರಿಯೆ
ದಾಸನಾಗಿ ಬಾಳ್ವೆ ಬಹು ನೀಚ ಜನಕೆ ೭

ನಾನು ನಾನೆಂಬುದು ತುಂಬಿದೆ ಮನದಿ
ನೀನು ನಿನ್ನಾಧೀನ ವೆಂತ್ಹೇಳಿ ದೃಢದಿ
ಜ್ಞಾನವಿದ್ದರು ಇಲ್ಲ ಎನಚರ್ಯೆ ನೋಡೆ
ಮಾನಿನಿಯರ ಬೊಂಬೆ ಗುಣಗಣನೆ ಮಾಡೆ ೮

ಮೂರೊಂದು ಹರಿತ್ಯಾಗ ತೊರೆಯಲಿಲ್ಲ
ವೈರಿ ಆರರ ಬೇರು ನಾಕೀಳಲಿಲ್ಲ
ವೀರ ವೈಷ್ಣವನಾಗಿ ಬಾಳಲಿಲ್ಲಾವಲ್ಲ
ಗಾರು ಮನ್ನಿಸದಿರೆ ಗತಿಯೊಬ್ಬರಿಲ್ಲಾ ೯

ವ್ರತನೇಮ ಉಪವಾಸ ಸಾಧನೆಯಿಲ್ಲ
ರತಿಯಿಂದ ಸಲಹೆಂದು ನಾಕೂಗಲಿಲ್ಲ
ಮತಿ ಮತದಿ ಪುಟ್ಟಿದರು ಫಲವಾಗಲಿಲ್ಲ
ಗತಿ ನೀನೆ ಕೈ ಪಿಡಿಯೊ ಕೇಳುತ ಸೊಲ್ಲ ೧೦

ಡಂಭಕ ತನದಿಂದ ಬಹುಕಾಲ ಕಳೆದೇ
ತುಂಬಿ ಭಕ್ತಿಯ ಬೇಗ ನೀ ಕಾಯೋಮುಂದೆ
ಜಂಭಾರಿ ಜಯತೀರ್ಥ ವಾಯ್ವಾಂತರ್ಗತನಾದ
ಕಂಬುಕಂಧರಧಾರಿ "ಶ್ರೀ ಕೃಷ್ಣವಿಠಲ" ೧೧

## ಲೋಕನೀತಿ

## ೯೦

ಇರಬೇಕು ಇದ್ದರು ಇಲ್ಲದಿರಬೇಕು ಪ

ಹರಿಯಲ್ಲಿ ಮನವಿಟ್ಟು ತೊರೆದು ಮಮತೆ ಭವದಿ ಅ.ಪ.

ಪರದೈವ ಹರಿಯೆಂದು ದೃಢದಿಂದಲಿರಬೇಕು
ಗುರುವಾಯು ಸರಿಯೆಂದು ಗುರುಭಕ್ತಿಮಾಡಬೇಕು

ಹರಿಯ ಕರುಣ ವಿಲಾಸದಿಂದಲಿ
ತರಿದು ತನುಗತ ವೈರಿ ವೃಂದವ ಸ್ಮರಿಸಿ ಸ್ಮರಿಸುತ
ಕ್ರಮದಿ ಬಿಂಬನ ಪರಮ ಸುಖದಿಂ ಜ್ಞಾನ ಘಳಿಸುತ ೧

ತಿಳಿಯಬೇಕೊ ವಿದ್ಯೆ ತುಳಿಯಬೇಕಾವಿದ್ಯೆ
ಬೆಳಿಸಬೇಕು ಭಕ್ತಿ ಹಳಿಯಬೇಕು ಹಂಮದ
ನಳಿನ ನಯನನ ಆಳುವೆಂಬುದ ತಿಳಿದು ತವಕದಿ ದೊರೆಯ
ಮೆಚ್ಚಿಸೆ ಪುಳುಕಿತಾಂಗದಿ ಕ್ರಮವನಡೆಸುತ
ತೊಳಳಿಬಳಲಿದೆ ಬಹಳ ವುದರಕೆ ೨

ಹರಿಯಿತ್ತದುಣಬೇಕು ಸಮಚಿತ್ತವಿರಬೇಕು
ಹರಿಗಿತ್ತುಮಣಿಬೇಕು ಧೊರೆ ಚಿತ್ತವೆನಬೇಕು
ಪರರ ಬೇಡದೆ ಬಿಡುತ ಹರಿಯನು ಸಿರಿಗುಪ್ರೇರಕ ವಿಷ್ಣುವೆನ್ನುತ
ಅರಿತು ಕ್ರಮದಿಂ ತಾರತಮ್ಯವನೆರಗಿ
ಹಿರಿಯರಕರುಣ ಪಡೆಯುತ ೩

ಮಂತ್ರಸಿದ್ಧಿಯು ಬೇಕು ತಂತ್ರ ವೃಂದವು ಬೇಕು
ಯಂತ್ರವಾಹಕ ಹರಿಯ ಸ್ವಾತಂತ್ರವರಿಯಬೇಕು
ಶಾಸ್ತ್ರ ಚರ್ಚೆಯ ಮಾಡಿಮಾಡುತ
ಕಂತುಪಿತನೇಕಾಂತ ಭಕ್ತರ
ಮುಟ್ಟಿಭಜಿಸುತ ಪ್ರೇಮದಿಂ ಶ್ರೀಕಾಂತ ಭೃತ್ಯರ
ಭಾಗ್ಯ ಪಡೆಯುತ ೪

ತೀರ್ಥಯಾತ್ರೆಯು ಬೇಕು ಗಾತ್ರ ಶುದ್ಧಿಯುಬೇಕು
ಪಾತ್ರವರಿಯುತ ದಾನವಿತ್ತು ಪೂಜಿಸಬೇಕು ಪುತ್ರಮಿತ್ರ
ಕಳತ್ರ ಗತಹರಿ ತುತ್ತುವುಣ್ಣಿಸಿ ಜಗವ ಸಲಹುವ
ನೆಂತು ತಿಳಿಯುತ ರತಿಯಮಾಡುತ ಆತ್ಮಗತ
"ಶ್ರೀಕೃಷ್ಣವಿಠಲ"ನ ಕರುಣ ಪಡೆಯಲು ೫

## ಸುಳಾದಿ

### ೯೧

### ಧ್ರುವತಾಳ

ಏಸು ದಿನಗಳಾದರೆನೋ ನಿನಗೆ ಘಾಸಿ ಜೀವವೆ
ಲೇಶ ಜ್ಞಾನ ಭಕುತಿ ವೈರಾಗ್ಯ ಪುಟ್ಟಲಿಲ್ಲ
ಏಸು ಕಾಸಿಗೆ ಕ್ಲೇಶಪಡುತ ಆಶೆ ಮಾಡುವಿ ಮರುಳ
ರಸನೇಂದ್ರಿಯ ಬಾಪಲ್ಯ ಬಿಡದೆ ನಾಯಿಯಂತೆ
ಆಶೆ ಯಿಂದಲಿ ತಿರುಗುವಿ
ತನುವಿನಭಿಮಾನವ ತುಸ ತೊರೆಯಲೊಲ್ಲೆ
ನೂರೆಂಟುಕಾಲ ಬದುಕಲು ಪೋಷಿಸುವಿ
ಕಾಯದಂಡಿಸಲಂಜುವಿ
ಮರಳಿ ಮರಳಿದರೂ ಹೇಸಿಗೆ ಸಂಸಾರ
ಸ್ಥಿರವೆಂಬ ಭ್ರಾಂತಿ ಬಿಡದೈಯ್ಯ
ಏಸುಏಸು ಜನುಮಗಳಲ್ಲಿ ಅನುಭವಿಸಿದರೂ
ಹೊಸಹೊಸದಾಗಿ ತೋರುತಿರ್ಪುದು ತುದಿಮೊದಲಿಲ್ಲ
ಹಿಂಸೆ ಮಾಡಿ ಪರರ ದ್ರವ್ಯದಿ ಒಡಲ ತುಂಬುವಿ
ಹೊಸದೆಂದು ತಿಂದದ್ದೆ ತಿನ್ನುವಿ, ಮಾಡಿದ್ದೆ ಮಾಡುವಿ
ಹೇಸಿಕೆ ಮನವೆ ನಾಚಿಕೆ ಇಲ್ಲವೆ ನಿನಗೆ ಯೋಚಿಸು
ಈ ಶರೀರ ಧರಿಸಿದ್ದು ಊಟತಿಂಡಿ ಗಾಯಿತಲ್ಲೋ
ವಾಸುದೇವನ ಒಲಿಸುವ ಹಾದಿಕಾಣದೆ ಶ್ವಾನ
ಪಶುವಿನಂದದಿ ಪೊರೆವೆ ಹೊಟ್ಟೆ, ದಿನ ದಿನದಿ ಕ್ರೋಧ
ಆಶಾಲೊಭ ಮೋಸ ಅರಿಷಡ್ವರ್ಗಗಳ ಜಯಿಸಲಿಲ್ಲ
ಅಸುಗಳೋತ್ತಮನ ಮತಗ್ರಂಥಗಳೋದದೆ ದಂಡ
ಈ ಶರೀರವ ಬೆಳೆಸಿದೆ, ದಾನ ಧರ್ಮಕರ್ಮಗಳಿಲ್ಲ
ದಾಶರಥಿಯ ದಾಸನೆಂದು ಕುಣಿಯಲಂಜುವಿ
ಓಸು ಜನರು ಬಂಧುಗಳೆಲ್ಲ ನಿನ್ನ ಭಂಗಪಡಿಸೋರೆಲ್ಲ
ಶ್ರೀಶಕೃಷ್ಣನ ನಾಮ ಒಂದಲ್ಲದೆ ಬೇರೆ ತಾರಕವಿಲ್ಲ

ಕೇಶವನಪಾಡಿ ಪೊಗಳೋದೇ ಸಾಧನಕೇಳಯ್ಯಾ
ವಾಸುದೇವನ ಮನಮುಟ್ಟಿ ಪೂಜಿಸೋದೇ ಯಜ್ಞಜಪ
ಬ್ಯಾಸರದೆ ದಾಸನೆಂತೆಂದು ಚಿಂತಿಸಿ ಎರಗಿದರೆ ಬೇಗನೆ
ಸಂಸಾರ ಬಿಡಿಸಿ ಇಡುವನು, ತನ್ನ ಭಕ್ತರ ಜನರೊಡನೆ
ಮೋಸಹೋಗದೆ ಶ್ರೀಜಯತೀರ್ಥ ವಾಯ್ವಂತರ್ಗತ ಕೃಷ್ಣವಿಠಲನ
ನಿಸ್ಸಂಶಯದಿ ಮೊರೆ ಹೋಗಿ ಭವಪಾಶನೀಗೋ ಮರುಳೇ ೧

## ಮಟ್ಟತಾಳ

ಹಿಂದೆ ಮಾಡಿದ ಕರ್ಮ ಇಂದು ಅನುಭವಿಸುತ್ತಿರುವಿ
ಇಂದು ಮಾಡುವ ಕರ್ಮ ಮುಂದೆ ಉಣ್ಣಲಿಬೇಕೋ
ಬಂಧು ಗೋವಿಂದನ ಬಿಟ್ಟರೆ ಭವಣೆ ತಪ್ಪದೋ ಮೂಢ
ಎಂದಿಗಾದರು ಕೊನೆ ಬೇಡವೆ ಈ ನಡತೆಗೆ
ಹಿಂದೆ ನಿನಗೆಷ್ಟು ಮಡದಿ ಮಕ್ಕಳು ಅಗಿಹೋದರೋ
ಹಂದಿಯಂದದಿ ಬಯಸಿದ್ದೆ ಬಯಸುತ್ತ
ಚಂದದಿಂದಲಿ ಊಟತಿಂಡಿಗಳ ತಿನ್ನುತ್ತ
ಅಂದಣವನೇರಿ ಮೆರೆಯ ಬೇಕೆಂಬುವಿ
ಮುಂದಿನ ಭವಣೆಗೆ ದಾರಿಯನೋಡೋ ಮರುಳೆ ಆ-
ನಂದತೀರ್ಥರು ತೋರಿದ ಹಾದಿಯ ಹಿಡಿದು
ನಂದನಂದನ ಶ್ರೀ ಜಯತೀರ್ಥ ವಾಯ್ವಂತರ್ಗತ ಕೃಷ್ಣವಿಠಲ
ತಂದೆ ಎಂತೆಂದು ನೆನೆ ನೆನೆದು ಸುಖಿಯಾಗ ಬೇಕು ೨

## ರೂಪಕತಾಳ

ಸತಿಯೆಗತಿ ಎಂಬೆಯಾ ಮೂಢ ಒಡವೆ ತಂದರೆ
ಪತಿಯೆಂದು ವಂದಿಸಿ ಪ್ರೀತಿನಟಿಸುವಳು ಜವನ
ದೂತರು ಸೆಳೆವಾಗ ನಿನ್ನಹತ್ತಿರ ಬರಳು ಕಾಣೋ
ಗತಿ ತನಗೇನು ಮುಂದೆಂದು ರೋದಿಸುವಳು
ಸುತನು ಕಾಯ್ವನೇನೋ ನಿನ್ನ, ಧನ ಆಸ್ತಿಗಳಿಟ್ಟರೆ,
ಪಿತನೆಂದು ಅಕ್ಕರೆ ಮಾಡುವ ಇಲ್ಲದಿದ್ದರೆ

ಮತ್ತು ಅನ್ನವನಿಕ್ಕದೆ ಸತಿಯ ಅಧೀನದಲ್ಲಿಡುವ
ಎತ್ತ ನೋಡಿದರೂ ನಿಜ ಪ್ರೇಮ ಒಬ್ಬರಲ್ಲಿಲ್ಲ ಅನಿ-
ಮಿತ್ತ ಬಾಂಧವ ಶ್ರೀ ಕೇಶವನೆ ಕಾಣೈಯ್ಯಾ
ಹೊತ್ತು ಹೊತ್ತಿಗೆ ಉತ್ತಮೋತ್ತಮ ನಮ್ಮ ಹರಿಯನನೆ-
ಯುತ್ತ ಜಯತೀರ್ಥವಾಯ್ವಂತರ್ಗತ ಶ್ರೀ ಕೃಷ್ಣವಿಠಲನ್ನ
ಪ್ರೀತಿಯ ಪಡೆದು ಕೃತ ಕೃತ್ಯನಾಗೋನೀನು ೩

### ಝಂಪೆತಾಳ

ಗಾಣದೆತ್ತಿನಂತೆ ದಿನದಿನ ಧನವನಿತೆಗಾಗಿ
ದಣಿದು ದಣಿದರೆ ಫಲವೇನಯ್ಯ ನೆರೆಹೊರೆ
ಜನರೆಲ್ಲ ನಿನ್ನ ಹೊಗಳಿದರೆ ಬಂದ ಭಾಗ್ಯವೇನೋ
ದೀನನೆನಿಸಿ ಹೀನಜನ ಸೇವೆಯ ಮಾಡಿ ಬಲು ಹೇರು
ಧನಗಳಿಸಿ ಮಡದಿ ಮಕ್ಕಳ ಸಾಕಿದರೆ, ಮುಂದೆ
ನಿನ್ನ ಯಮದೂತರೆಳೆವಾಗ ಕಾಯಬಲ್ಲರೇನೋ
ದಾನವಾಂತಕನ ಮರೆತು ದೋಷಿಯಾಗಲು ಬೇಡ ಈ
ತನುವು ದೇವ ಕೊಟ್ಟದ್ದು ಮುಕುತಿ ಸಾಧನಕೆ ಕಾಣೋ
ಅನುದಿನವು ವನಿತೆಯರ ಕೂಡಿ ತಿಂದು ತೇಗುವುದಕ್ಕಲ್ಲ
ಜ್ಞಾನ ದೀಪವ ಹಚ್ಚಿ ಮನದಿ ನೋಡುತನು
ಮನ ಧನಗಳೆಲ್ಲ ಶ್ರೀ ಹರಿಗರ್ಪಿಸು ನರಹರಿ
ಜನಾರ್ದನ ಮುಕುಂದ ಮಾಧವನೆಂದು ಕೊಂಡಾಡು
ಏನೇನು ಮಾಡುವುದೆಲ್ಲ ಶ್ರೀ ಕೃಷ್ಣಸೇವೆಂದ್ಹೇಳು
ಕಾನನ ಊರು ಎಲ್ಲಿದ್ದರು ಸತತ ನಾರಾಯಣನ ನಾಮವ
ನೆನೆಯುತ್ತ ಸಂಸಾರದಲ್ಲಿದ್ದರೂ ಮಮತೆ ತೊರೆದು
ಮನದಿ ವಿರಕ್ತಿಯ ಧರಿಸಿ ದೇವ ಕೊಟ್ಟದರಲ್ಲಿ
ದಿನವೂ ತೃಪ್ತಿಪಡುತಲಿ ಅನಿಲನ ಮತಪಿಡಿದು
ಅಣುರೇಣು ತೃಣಕಾಷ್ಠ ಪರಿಪೂರ್ಣ ಜಯತೀರ್ಥ
ಅನಿಲಾಂತರ್ಗತ ಶ್ರೀ ಕೃಷ್ಣವಿಠಲನ ದಾಸನಾಗಿ
ಬಾಳೋ ಮುಂದೆ ೪

### ತ್ರಿವಿಡಿತಾಳ

ಆಳುದ್ದವ ಶರೀರವ ಗೇಣು ಮಾಡಿಕೊಂಡು ಪರರ
ಆಳಾಗಿ ಬಾಳಲು ವೀಸಕಾಸು ಕೊಡಲು ಕಷ್ಟ ವೈಯ್ಯ
ಶ್ರೀ ಲಕ್ಷ್ಮೀಕಾಂತ ಪೊರೆ ಎಂದು ಗಜರಾಜ ಒದರಲು ಅರಸಿಗೆ
ಹೇಳದೆ ಭರದಿ ಗರುಡನೇರಿ ಬಂದು ನಕ್ರನ ತರಿದ
ಚೇಲವಸ್ತ್ರದಿ ತಂದಿದ್ದ ದ್ವಿಜ ಪಿಡಿಯವಲಕ್ಕಿಯತಿಂದು ಕು-
ಚೇಲಗೆ ಕೆಡದ ಸಂಪದವಿತ್ತು ಸಲಹಿದ
ನಾರಿ ದ್ರೌಪದಿ ಗೋಳು ಕೇಳುತಲೆ ಅಕ್ಷಯವಸ್ತ್ರವ
ಅಲ್ಲಿಂದ ಪಾಲಿಸಿದ
ಗೊಲ್ಲಗೋಪಿಯರ ಸೊಲ್ಲು ಲಾಲಿಸಿ ಪ್ರೀತಿಗೊಲಿದ
ಮೆಲ್ಲನೆ ಕುಬುಜೆಯ ಡೊಂಕು ತಿದ್ದಿ ಅಂಗಸಂಗವನಿತ್ತ
ಕ್ಷುಲ್ಲ ಬೈಗಳಬೈದ ಶಿಶುಪಾಲನ ಸುಜೀವಗೆ ಗತಿ ಯನಿತ್ತ
ನಲ್ಲನೆಂದಡಿಗೆರಗಿದ ಪಾಂಡವರ ಬಂಡಿ ಭೋವನಾದ
ಮೆಲ್ಲನೆ ಅಪದ್ಬಾಂಧವ ಶ್ರೀ ಕೃಷ್ಣನೆಂದೊದರಿ ಒಂದು
ದಳ ತುಳಸಿ ದಳ ಅರ್ಪಿಸಲು ಒಡಲು ಕಾಯುತ ಲಕ್ಷ್ಮೀ-
ನಲ್ಲನ ಕರುಣಕ್ಕೆ ಎಣೆಯಿಲ್ಲ ಸಾರಿಸಾರಿ ಹೇಳುವೆ
ಕೇಳು ಮರಳು ಮನವೆ
ಕ್ಷುಲ್ಲ ಮಾನವರ ಸೇವಕನೆನಿಸಲು ನಾಚಿಕಿಲ್ಲವು
ಸಿರಿ ಪದ್ಮಜ ವಂದಿಪೆ
ನಾಲ್ಕು ಮೂರೆರೆಡು ಲೋಕಾಧೀಶ
ಅತುಳಮಹಿಮ ಜಯತೀರ್ಥ
ವಾಯ್ವಂತರ್ಗತ ಶ್ರೀ ಕೃಷ್ಣವಿಠಲನ್ನ
ಆಳಾಗಿ ಬಾಳಲು ನಾಚಿಕೆ ಯಾಕೋ ಹೀನ ಮನವೆ ೫

### ಅಟ್ಟತಾಳ

ಹೊಟ್ಟೆಗೇನೆಂದು ಯೊಚಿಸಿ ಕೆಡಬೇಡ ಈರೇಳು
ಸೃಷ್ಟಿಗೈದ ಸರ್ವೋತ್ಕೃಷ್ಟ ಶ್ರೀಕೃಷ್ಣಗೆ ಇದು ಕಷ್ಟವೆ
ಹುಟ್ಟಿಸಿದ ದೇವ ಹುಲ್ಲು ಮೇಯಿಸಲಾರನೇ

ಗಟ್ಟ್ಯಾಗಿ ಅಷ್ಟಕರ್ತ ಒಡೆಯನ ಚರಣವ ನೆರೆನಂಬಿ
ಬಿಟ್ಟು ಸಂಸಾರದ್ದಂಬಲದ ದಾಸನಾಗಿ ತಿರುಗೋ
ಹುಟ್ಟು ಸಾಯುವ ಕಟ್ಟು ಬಿಡಿಸಲು ಅನ್ಯ ಉಪಾಯವಿಲ್ಲ
ಎಷ್ಟು ದಿನಗಳಿದ್ದರೂ ಸಂಸಾರದಾಶೆಗೆ ಕೊನೆ ಇಲ್ಲ
ಕಷ್ಟಪಟ್ಟು ಬೆಟ್ಟಕೆ ಕಲ್ಲು ಹೊತ್ತಂತೆ ಕಾಣ್ಯೆಯ್ಯ
ನಿಷ್ಠೆಯಿಂದಲಿ ಶ್ರೀ ಜಯತೀರ್ಥ ವಾಯ್ವಂತರ್ಗತ ಕೃಷ್ಣವಿಠಲನ್ನ
ಇಟ್ಟು ಮನದಲಿ ಭಜಿಸೋ ಅರಿಷಡ್ವರ್ಗವೈರಿಗಳ
ಅಟ್ಟೋಭರದಿ ತುಂಟಜನರ ಸಂಗ ತ್ಯಜಿಸೋ ಬೇಗ
ಇಷ್ಟಾರ್ಥಪಾಲಿಸಿ ಕಾಯುವ ಕೃಷ್ಣ ಸಂದೇಹ ಬ್ಯಾಡಾ
ಸಂದೇಹ ಬ್ಯಾಡಾ ೬

**ಜೊತೆ**

ಎಂದಿಗಿದ್ದರು ಈ ಕೊಂಪೆ ಸ್ಥಿರವಲ್ಲ ಮನವೆ
ಇಂದೇಶ್ರೀ ಜಯತೀರ್ಥವಾಯ್ವಂತರ್ಗತ ಕೃಷ್ಣವಿಠಲನ
ಮೊರೆಹೊಗೋ ಮನವೇ ॥

## ೯೨

ಕಂಡವರ ತೊಂಡ ನೆನಿಸ ಬೇಡ ಹರಿಯೇ ಪ

ಪುಂಡರೀಕಾಕ್ಷನೆ ಕಾವ ತೊಂಡರ ತೊಂಡನೆನಿಸೋ ಅ.ಪ.

ಹೆಂಡತಿಯ ಬಿಡಬಹುದು-ಕಾಡಿಗ್ಹೋಗಲಿ ಬಹುದು
ಬಿಡದೆ ಜಪಿಸಲಿ ಬಹುದು-ಕಟುತಪವ ಮಾಡಲಿಬಹುದು
ಒಡೆಯ ಕೃಷ್ಣನೆ ನಿನ್ನ ಅಡಿಯ ಕಾಡಲಿಬಹುದು
ಕಂಡವರ ಊಳಿಗದಿ ಕೀರ್ತಿ ಪಡೆಯಲಾಗದೊ ದೇವ ೧

ಆಶೆಯ ತೊರೆದು ನಿಜ ದಾಸನಾಗಲಿಬಹುದು
ದೇಶ ದೇಶವ ತಿರುಗಿ ಕಾಸುಗಳಿಸಲಬಹುದು

ಕೇಸರಿಯ ಹಿಡಿತಂದು ಪಾಶದಲಿ ಕಟ್ಟಬಹುದು
ಶ್ರೀಶನಿನಗಲ್ಲದವರ ಸಂಗ ಏಸೇಸು ಜನ್ಮಕ್ಕು ಬ್ಯಾಡೋ ೨

ಹೀನ ಜನರಾ ಸಂಗ ಮಾನವಂತರಿಗಲ್ಲ
ದೀನಜನಮಂದಾರ ಕೊಡಬೇಡ ಇದು ಎನಗೇ
ಮಾನಾಭಿಮಾನವನು ನಿನಗೆ ಒಪ್ಪಿಸಿದೆನೋ
ಇನ್ನಾದರೂ ಸಲಹೋ ಶ್ರೀನಿವಾಸ ಕೃಷ್ಣವಿಠ್ಠಲನೆ ಜೀಯಾ ೩

## ೯೩

ಬನ್ನಿರೈಯ್ಯ ಬನ್ನಿರೈಯ್ಯ ಬನ್ನಿರೈಯ್ಯ ಬನ್ನಿರಿ ಪ

ಚಿನ್ನ ಕೃಷ್ಣನ ಚೆನ್ನಾಗಿ ನೆನೆದು ಪ್ರಸನ್ನ ಮಾಡಿರಿ ಅ.ಪ.

ಸತಿಯು ಸುತರು ಗತಿಯು ಎಂದು ಕೆಡಲು ಬೇಡಿರಿ
ಮಿತಿಯು ಇಲ್ಲ ಮೇರೆಯು ಇಲ್ಲ ಫಲವು ಇಲ್ಲ ಕೇಳಿರಿ
ಮತಿಯ ಹರಿಯ ಅಡಿಯಲ್ಲಿಟ್ಟು ಪ್ರೀತಿಮಾಡಿರಿ
ಗತಿಯನೀಡಿ ತ್ವರಿತದಿಂದ ಪೊರೆವ ನಿಮ್ಮ ನೊಡಿರಿ ೧

ಅಂದು ಇಂದು ಎಂದು ಹೇಳಿ ಕಾಲ ಕಳೆಯ ಬೇಡಿರಿ
ಇಂದು ನಿಮ್ಮನು ಇಂದೆ ಶುಭ ಇಂದೆ ನೆನೆಯಿರಿ
ಬಂದು ಯಮನ ಭಟರು ಕರೆದರೆ ಏನು ಮಾಡೋರಿ
ಮುಂದೆ ಇಂಥ ಜನ್ಮಬಹುದೆ ಬಂಧ ನೂಕಿರಿ ೨

ಆಶಪಾಶ ಮೋಸ ಬಲುಕ್ಲೇಶ ತಿಳಿಯಿರಿ
ಹೇಸಿಕೆ ಸಂಸಾರವನು ಘಾಸಿಕೆ ನೋಡಿರಿ
ವಾಸವೇಶ ಜಯಮುನೀಂದ್ರ ವಾಯುಸ್ಥ ಕೃಷ್ಣ ವಿಠಲನ
ದಾಸನಾಗಿ ಗೆಜ್ಜೆಕಟ್ಟಿ ನಿರಾಶೆಯಿಂದ ಭಜಿಸಿರಿ ೩

೯೪

ಬುದ್ಧಿಮಾತು ಹೇಳಿದರೆ ಕೇಳ ಬೇಕಮ್ಮ ಮಗಳೆ
ಮನ ಶುದ್ಧಳಾಗಿ ಗಂಡನೊಡನೆ ಬಾಳ ಬೇಕಮ್ಮ ಪ

ಮಾತು ಮಾತಿಗೆ ಮಾತ ಜೋಡಿಸಿ ಆಡಬೇಡಮ್ಮಮಗಳೆ
ಪ್ರೀತಿ ಪಡುವ ಗಂಡನೆಂದು ಹೆಮ್ಮೆ ಬೇಡಮ್ಮ
ನೀತಿ ತಪ್ಪಿ ನಡಿಯಬೇಡ ಯೆಂದಿಗಾದರೂ ಮಗಳೆ
ಸೋತು ನಡೆಯಲು ಲೇಸುಯೆಂದು ತಿಳಿಯ ಬೇಕಮ್ಮ ೧

ಅತ್ತೆ ಮಾವ ಗಂಜಿ ಕೊಂಡು ನಡಿಯ ಬೇಕಮ್ಮ ಮಗಳೆ
ಮತ್ತೆ ಪತಿಯ ಮನವ ಮೆಚ್ಚಿಸಿ ಬಾಳ ಬೇಕಮ್ಮ
ವಿತ್ತ ವಿದ್ದರು ಭೃತ್ಯರಿದ್ದರು ತೊತ್ತಿನಂತೆ
ದುಡಿಯ ಬೇಕಮ್ಮ ಮಗಳೆ
ಚಿತ್ತದಲ್ಲಿ ಹರಿಯ ಭಕ್ತಿ ಬಿತ್ತಬೇಕಮ್ಮ ೨

ನೋಟ ಆಟದಲ್ಲಿ ಮಮತೆ ಬಹಳ ಬೇಡಮ್ಮ ಮಗಳೆ
ಕೊಟ್ಟು ಕ್ರಯವ ತಿಂಡಿ ತಿಂಬೊ ನಡತೆ ಬೇಡಮ್ಮ
ಕೂಟ ಜನರ ಮಾತು ಕೇಳೆ ಕೇಡು ಕೇಳಮ್ಮ ಮಗಳೆ
ಸಾಟಿ ನಾನು ಗಂಡಗೆಂದು ಹಠವು ಬೇಡಮ್ಮ ೩

ಕಂಡು ಕಂಡುದೆಲ್ಲ ಬಯಸೆ ಕ್ಲೇಶ ಕೇಳಮ್ಮ ಮಗಳೆ
ಗಂಡ ತಂದುದೆ ದೊಡ್ಡದೆಂದು ಉಂಡು ಬಾಳಮ್ಮ
ಗಂಡೀ ನಂತೆ ಮೆರೆಯ ಬಾರ್ದು ತಗ್ಗಿ ನಡೆಯಮ್ಮ ಮಗಳೆ
ತೊಂಡಳಾಗಿ ಹರಿಗೆ ಬಾಳೆ ಸುಖವು ನಿನಗಮ್ಮ ೪

ಹರಿಯು ಕೊಟ್ಟರೂಪವೆ ಛಂದ ಲಜ್ಜೆ ಬೇಡಮ್ಮ ಮಗಳೆ
ಬರಿಯ ವೇಷ ನಾಟಕದಂತೆ ಮೋಸ ಕಾಣಮ್ಮ
ಜರಿಯ ಬೇಡ ಹಿರಿಯರ ಮಾತು ಹಾನಿ ಹೌದಮ್ಮ ಮಗಳೆ
ಮರಿಯೆ ಹರಿಯ ಭವವು ತಪ್ಪದು ಜೋಕೆ ನೋಡಮ್ಮ ೫

ಇಲ್ಲದ ಸಲ್ಲದ ಡಂಭ ಬೇಡ ಸೊಲ್ಲು ಕೇಳಮ್ಮ ಮಗಳೆ
ನಲ್ಲನ ಒಲುಮೆಗೆ ಒಳ್ಳೆ ಗುಣವೆ ಮುಖ್ಯ ತಿಳಿಯಮ್ಮ ಮಗಳೆ
ಒಳ್ಳೆ ಮಾತನಾಡಿ ಸರ್ವರ ಹಿತವ ಕೋರಮ್ಮ ೬

ಏನೇ ಬಂದರು ಜರಿದು ಪತಿಯ ನುಡಿಯ ಬೇಡಮ್ಮಮಗಳೆ
ನಿನ್ನದೆಂದು ಪುಟ್ಟಿದ ಮನೆಯ ತಿಳಿಯ ಬೇಡಮ್ಮ
ಮಾನವೆ ಮುಖ್ಯ ಮಾನಿನೀಗೆ ತಿಳಿದು ಬಾಳಮ್ಮಾ ಮಗಳೆ
ಮಾನವು ನೀಡೆ ಮಾನವು ಬಾಹೋದು ಮರ್ಮ ತಿಳಿಯಮ್ಮ ೭

ನಾನು ನಾನು ನಾನೆಂಬೋದೆ ಹೀನ ಕೇಳಮ್ಮಾ ಮಗಳೆ
ಸಾನುರಾಗದ ನುಡಿಯೆ ಸಕ್ಕರೆ ಕೀರ್ತಿ ಉಳಿಸಮ್ಮ
ಸ್ನಾನ ಪಾನದಲ್ಲೇ ಮುಳುಗದೆ ಹರಿಯ ಸೆನೆಯಮ್ಮ ಮಗಳೆ
ಶ್ರೀನಿವಾಸನ ಭಕ್ತರ ಪೂಜೆ ಯತ್ನದಿ ಮಾಡಮ್ಮಾ ೮

ಪರರ ಸಿರಿಯ ನೋಡಿ ಮನದಿ ಕೊರಗ ಬೇಡಮ್ಮ ಮಗಳೆ
ಹರಿಯು ನೀಡಿಹ ಸಿರಿಯೆ ಸಾಕುಯೆಂದು ಸುಖಿಸಮ್ಮ
ಯರವಿನಿಂದ ಒಡವೆ ವಸ್ತ್ರ ಧರಿಸ ಬೇಡಮ್ಮ ಮಗಳೆ
ಅರಿತು ಹರಿಯ ಗುಣಗಳ ಮನದಿ ನೆನೆದು ನೆನೆಯಮ್ಮ ೯

ಸತತ ನಗೆ ಮೊಗಳಾಗಿ ಬಾಳು ಗಂಟು ಬೇಡಮ್ಮ ಮಗಳೆ
ಸತತ ಕಾಯುವ ಹರಿಯೇಯೆಂದು ದೃಢದಿ ಭಜಿಸಮ್ಮ
ವಿತತ ವಿಷ್ಣುವು ದ್ರೌಪತಿಯಂತೆ ಸಲಹುವನೆಂಬೆ
ಕೇಳಮ್ಮಾ ಮಗಳೆ
ಜತನ ಮಾಡಿ ನೀತಿಯ ಮರ್ಮ ನಿತ್ಯ ಸುಖಿಸಮ್ಮ ೧೦

ಪತಿಯ ಭಕ್ತಿಯೆ ತಾರಕ ನಿನಗೆ ಧೋರಣೆ ಬೇಡಮ್ಮ ಮಗಳೆ
ಪತಿಯ ಜರಿಯುತ ವ್ರತಗಳ ಮಾಡೆ ಫಲವೇ ಇಲ್ಲಮ್ಮ
ರತಿಯಿಂ ನುಡಿದಿಹೆ ಶೃತಿಗಳಸಾರ ಯುಕ್ತಿಗಳಮ್ಮ ಮಗಳೆ
ಸತತ ಜಯಮುನಿ ವಾಯ್ವಂತರ್ಗತ ಶ್ರೀಕೃಷ್ಣವಿಠಲನ
ಮೊರೆಯ ಹೋಗಮ್ಮ ೧೧

## ೯೫

ದಂಭಕ–ಭಕುತಿಯ–ಮಾಡಬೇಡ ಬರಿ
ಡಿಂಭವ ಪೋಷಿಸೆ–ಪಾಡಬೇಡ ಪ

ಅಂಬುಜನಾಭವ ಬಿಡಬೇಡ ಒಣ
ಜಂಭವ–ಮಾಡುತ–ಕೆಡಬೇಡ ಅ.ಪ.

ಕಾಸಿಗೆ ದಾಸನು ಆಗಬೇಡ–ಹರಿದಾಸನು ಆದರೆ ಆಶೆಬೇಡ
ಮೋಸದ ವೇಷವ ತೋರಬೇಡ–ಸುಖ ಲೇಶವು
ದೊರಕದು ತಿಳಿಗಾಢ ೧

ಕಂಡಕಂಡೆಡೆ ತಿರಿಬೇಡ–ಯಮದಂಡಕೆ ಬೆದರದೆ ನಡಿಬೇಡ
ಪುಂಡರ ಸಂಗವ ಸೇರಬೇಡ–ಹರಿತೊಂಡರ
ಕೆಣಕುತ ಕೆಡಬೇಡ ೨

ಕೆಂಡದ ಕೋಪವ ಮಾಡಬೇಡ–ಅದು ಗಂಡವು
ಮುಂಬರೆ ತಿಳಿಮೂಢ
ದಂಡದಿ ಕಾಲವ ಕಳಿಬೇಡ ಪರ ಹೆಂಡಿರು ವಿತ್ತವ ನೋಡಬೇಡ ೩

ತುಚ್ಛರ ಸೇವೆಯ ಮಾಡಬೇಡ ಮನಸ್ವಚ್ಛತೆ ಪೊಂದದೆ ಇರಬೇಡ
ಕೆಚ್ಚೆದೆ ಕಷ್ಟದಿ ಬಿಡಬೇಡದೈವೇಚ್ಛೆಯೆ ಸಕಲಕು ಮರಿಬೇಡ ೪

ಆತ್ಮಸ್ತುತಿಯನು ಮಾಡಬೇಡ ಪರಮಾತ್ಮನ ಗುಣಗಳ ಕದಿಬೇಡ
ಗಾತ್ರವು ಅಸ್ಥಿರ–ತಿಳಿ–ಬೇಗ–ಜೀವೋತ್ತಮ ನಂಘ್ರಿಯ ಬಿಡಬೇಡ ೫

ಕರ್ಮವ ಮಾಡದೆ ಬಿಡಬೇಡ–ಶೃತಿ ಮರ್ಮವ
ತಿಳಿಯದೆ ಇರಬೇಡ
ಹಮ್ಮಿನಮಾತನು ಆಡಬೇಡ ಪರಧರ್ಮಕೆ
ಮನವನು ಸೋಲಬೇಡ ೬

ನೋಡದ ವಿಷಯವ ನುಡಿಬೇಡ ಗುಣ ನೋಡದೆ
ಸ್ನೇಹವ ಮಾಡಬೇಡ
ಪಾಡದೆ ದೇವನ ಇರಬೇಡ ಭವ ಕಾಡಿಗೆ ಕಿಚ್ಚಿದು ಸರಿ ಪ್ರೌಢ ೭

ನೆಂಟಗೆ ಸಾಲವ ಕೊಡಬೇಡ ಅದು ಗಂಟಿಗೆ ಮೋಸವೆ ತಿಳಿಬೇಗ
ಒಂಟಿಲಿ ಊಟವ ಮಾಡಬೇಡ ವೈಕುಂಠಕೆ ಸಾಧನೆ ಬಿಡಬೇಡ ೮

ಹಿರಿಯರ ಪಿತೃಗಳ ಜರಿಬೇಡ ಅದು ನರಕದ
ದಾರಿಯು ಮರಿಬೇಡ
ಪರಿಪರಿ ಚಪಲವ ಮಾಡಬೇಡ ನಿಜಗುರುವನು
ಒಲಿಸದೆ ಬಿಡಬೇಡ ೯

ಮಡಿ ಮಡಿ ಎನ್ನುತ ಹಾರಬೇಡ–ನಿಜ ಮಡಿ ಹರಿ
ಚಿಂತನೆ ತಿಳಿಬೇಗ
ಕಡು ಆಲಸ್ಯವ ಮಾಡಬೇಡ ಸಿರಿಬಿಡುವಳು ಆತನ ತಿಳಿಬೇಗ ೧೦

ಸಾಧು ಸುಸಂಗವ ಧೃಡಸೇರು ಅದು ಮಾಧವ
ನೊಲಿಮೆಗೆ ಹೆದ್ದಾರಿ
ಮೋದದ ತೀರ್ಥದಿ ಮಡಿಮಾಡು ಭವಖೇದವ
ಶೀಘ್ರದಿಮೊಗಾಡು ೧೧

ಸತ್ಯವ ಧರ್ಮವ ಬಿಡಬೇಡ ಈ ಉಕ್ತಿಗಳಾಚೆಗೆ ಹಾಕಬೇಡ
ಸತ್ಯವ ಪರಿಸದೆ ಬಿಡಬೇಡ–ಶ್ರೀ ಸತ್ಯನ ಮತವನು ಪಿಡಿಬೇಗ ೧೨

ತೃಷೆಯ ಬಹುವಿಧ ಮಾಡಬೇಡ ಸಂತುಷ್ಟಿಯೆ
ನಿಜಸುಖ ತಿಳಿಬೇಗ
ನಿಷ್ಠಿಯ ಗುರುವಡಿ ಬಿಡಬೇಡ "ಶ್ರೀ ಕೃಷ್ಣವಿಠಲ"ನ ತೊರಿಬೇಡ ೧೩

೯೬

ಧನವ ಗೆದ್ದವರುಂಟೆ ಜನರೊಳಗೆ ಶ್ರೀನಿವಾಸ ಪ

ಕನಸಿಲಾದರು ಬಿಡದು ಕನಕದಾಶೆಯು ಈಶ ಅ.ಪ.

ಹೆಂಡತಿಯ ಬಿಡಬಹುದು ಮಂಡೆಬೋಳಿಸಬಹುದು
ಕಂಡ ಕಂಡವರೀಗೆ ದಂಡ ಬೀಳಲಿ ಬಹುದು
ಪುಂಡರೀಕಾಕ್ಷನಿಗೆ ತೊಂಡನಾಗಲಿ ಬಹುದು
ದುಡ್ಡು ಕಾಸುಗಳನ್ನು ನೀಡಲಾಗದು ಮನಸು ೧

ನಾಮ ಹಾಕಲಿಬಹುದು ನೇಮಮಾಡಲಿಬಹುದು
ಹೋಮಮಾಡುತಲಿ ಬಹು ಕರ್ಮಿಷ್ಟನೆನಿಸಬಹುದು
ನಾಮ ಪಾಡಲಿಬಹುದು ಧರ್ಮಪೇಳಲಿ ಬಹುದು
ಹೇಮದಾಶೆಯು ಬಿಡದೂ ಶ್ರೀ ಮನೋಹರನೇ ೨

ಜಪಮಾಲೆಧರಿಸುತಲಿ ಉಪವಾಸ ಮಾಡಬಹುದು
ತಾಪಸನು ಎನಿಸುತಲಿ ಪುರಾಣಗಳ ಪೇಳಲಿಬಹುದು
ಶ್ರೀಪತಿಯ ಸೇವಿಸುತ ಜಪತಪವ ನಡೆಸಬಹುದು
ರೂಪಾಯಿ ಮಮತೆ ತಾ ಮುಪ್ಪಿನಲ್ಲು ತೊಲಗದೈಯ್ಯ ೩

ಯಾತ್ರೆಮಾಡಲಿಬಹುದು ಸ್ತೋತ್ರ ಘಟ್ಯಾಗಿ ಹೇಳಬಹುದು
ನೀತಿ ಪೇಳಲಿಬಹುದು ಪೂತನೆನಿಸಬಹುದು
ಮಾತು ಮಾತಿಗೆವೇದ ಎತ್ತಿ ಪೇಳಲಿಬಹುದು
ಪ್ರೀತಿ ತಪ್ಪದೂ ಯೆಂದೂ ಆಸ್ತಿ ಧನಕನಕದಲಿ ೪

ಲಜ್ಜೆಬಿಡುತಲಿ ಬೇಗ ಗೆಜ್ಜೆಕಟ್ಟಲಿ ಬಹುದು
ಸಜ್ಜನನುಯೆಂದೆನಿಸಿ ಮೂರ್ಜಗದಿ ಮೆರೆಯಬಹುದು
ಮಜ್ಜನಕ ಜಯತೀರ್ಥ ವಾಯು ಹೃದಯದಲಿರ್ಪಜ
ಗಜ್ಜನಕ "ಶ್ರೀಕೃಷ್ಣವಿಠಲ"ನೆ ನೀವಲಿವ ತನಕ ೫

## ೯೭

ನಡತೆ ನನ್ನದು ಕೇಳಿರಯ್ಯ ಪ

ಒಡೆಯ ವಲಿವ ಹ್ಯಾಗೆ ಪೇಳಿರಯ್ಯ ಅ.ಪ.

ಒಡವೆ ತರದಿಹನೆಂದು ಕೋಪ
ಮಡದಿನಟಿಸುತ ಹೆದರೀ
ಒಡನೆ ಸ್ನಾನವ ಮಾಡಿತಂದು
ಕೊಡುವ ಪ್ರಸನ್ನ ಗೈಯ್ಯುಲವಳಾ ಆಹಾ
ಒಡಿಯ ದೇವಗೆ ಹರಕೆ ನಡಿಸಬೇಕೆನ್ನಲು
ಕೊಡಲಿ ಹರಿಯು ಭೂರಿ ನೋಡುವೆನೆಂತೆಂಬೆ ೧

ಒರಿಸೆ ಸಾಲಿಗ್ರಾಮ ಗೃಹದಿ
ಅರಿವೆ ಹರಕು ಸಹ ಇಲ್ಲವೆನ್ನೇ
ತರುವೆನೆನುತ ತಿಂಗಳಾರು
ಅರಿತು ತಳ್ಳುವೆ ಕಾಲ ಬರಿದೇ ಆಹಾ
ತರಲು ಸೂಳೆಗೆ ಸೀರೆ ಭರದಿ ಕೂಡಿಯೆ ಅವಳ
ಪುರವ ಪೇಟೆಪೇಟೆಗಳೆಲ್ಲ ತಿರುಗಿ ತಿರುಗುವೆ ಮುದದೀ ೨

ಹರಿಗೆ ದೀಪವ ಹಚ್ಚೆ ತೈಲ
ಇರದು ತಾರೆನೆ ಹಡೆದ ತಾಯಿ
ಬರಲಿ ಸಂಬಳ ತರುವೆ ಕೊಡುವಿ
ಉರಿವ ಕಾಟವನೆಂದು ನುಡಿವೆ ಆಹಾ
ಪರಮ ಸಂಭ್ರಮದಿಮದ ತಿಂಡಿ ಅಂಗಡಿಯಲಿ
ಪರಕು ಜಿಹ್ವೆಯ ಚಪಲ ಪೂರ್ಣಮಾಡುವೆ ನಿರುತ ೩

ವೃತ್ತಪತ್ರಿಕೆಯಲ್ಲಿ ಹೆಸರು
ಎತ್ತಿಹಾಕುವರೆನೆ ಒಡನೆ
ವಿತ್ತದಾನವಗೈವೆ ಬರಿ ಉ-
ನ್ಮತ್ತಕಾರ್ಯಕಾದರು ಸರಿಯೇ ಆಹಾ
ಉತ್ತಮಭಕ್ತರು ಅರಸುತ್ತ ಬರ್ಪುದ ಕಂಡು
ವತ್ತಿ ಬಾಗಿಲು ಕೊಂಡಿ ಸ್ವಸ್ಥವಿಲ್ಲೆಂಬೆ ೪

ಉಂಡು ತೇಗುವ ಧನಿಕ ಜನರ
ಕಂಡು ಕರೆಯುತ ಭಾರಿ ಊಟ
ತೊಂಡನಂದದಿ ನೀಡಿ ಮನದಿ
ಉಂಡು ಹರುಷವ ನೆನೆವೆ ಧನ್ಯ\ ಆಹಾ
ಕೆಂಡ ಬಿಸಿಲಲಿ ಬಡವ ಕಂಡು ಮಹಡಿಯ ಬರಲು
ಪಿಂಡ ಪಿಡಿಯನು ಹಾಕೆ ತಂಡುಲವಿಲ್ಲೆಂಬೆ ೫

ದಾನಗೈದರು ಒಮ್ಮೊಂದೊಮ್ಮೆ
ಮಾನಪಡೆಯಲು ಊರ ಒಳಗೆ
ನಾನೆಂಬ ಹಂಕಾರ ಬಿಡದೆ
ಶ್ರೀನಿಧಿ ಸ್ವಾಮಿತ್ವ ನೆನೆಯೆ ಆಹಾ
ಸ್ವಾನುಭವ ಕಾಣದೆಲೆ ಜ್ಞಾನ ಭಾಸ್ಕರನಂತೆ ಪು-
ರಾಣಪೇಳುತ ನನ್ನ ಸಮಾನ ವಿಲ್ಲಂತೆಂಬೆ ೬

ನೂರಿತ್ತು ಸಂಬಳ ಹಿಂದೆ ಮನದಿ
ಊರಿತ್ತು ಹರಿಭಕ್ತಿ ಎಲ್ಲಿ ಈಗ
ನೂರ್ಹತ್ತು ಕೊಟ್ಟರು ದೇವ ಬೆ-
ನ್ಹತ್ತಿದೆ ತಾಪತ್ರಯ ಬಹಳ ಆಹಾ
ಭಾರತ ಮಿಗಿಲಿದೆ ಚರಿತೆ ಸಂಶಯವಿಲ್ಲ ಬೀರದಿರೆ
ಸಿರಿ ಕೃಷ್ಣವಿಠಲನೆ ದೃಷ್ಟಿ
ವಾರುಗಾಣೆನು ಕಾಣೆನು ಸತ್ಯ ಪೊರೆಯೋ ಶರಣೆಂತೆಂಬೆ ೭

## ೯೮

ಪತಿವ್ರತೆ ಹ್ಯಾಂಗಿರಬೇಕು ನಿಜವಾಗಿ ಪ

ರತಿಪತಿಪಿತನನ್ನು ಪತಿಯಲ್ಲಿ ನೆನೆಯುತ್ತ ಅ.ಪ.

ಹೊತ್ತಾರೆ ಏಳಬೇಕು ಪತಿಗೆ ವಂದಿಸಬೇಕು
ನಿತ್ಯತುಳಸಿಗೆರಗಿಕೃತ್ಯಮಾಡಲಿಬೇಕು
ಅತ್ತೆಮೆಚ್ಚಿಸಬೇಕು ತೊತ್ತಿನಂತಿರಬೇಕು
ರತಿಯ ನೀಡುತ ಪತಿಗೆ ಹಿತದಿಂದ ಬಾಳಬೇಕು ೧

ಮಿತಮಾತು ಇರಬೇಕು ಸುತರ ಪಾಲಿಸಬೇಕು
ಮತಿಮತದಿ ನಡಿಬೇಕು ಅತಿಥಿ ಪೂಜಿಸಬೇಕು
ವ್ರತನೇಮ ವಿರಬೇಕು ಗತಿ ಹರಿಯೆ ತಿಳಿಬೇಕು
ಮಾತ್ಸರ್ಯಬಿಡಬೇಕು ತೃಪ್ತಿಯಿರಲಿಬೇಕು ೨

ನೆರೆಹೊರೆ ಗಂಜಬೇಕು ತಿರುಗೋದು ಬಿಡಬೇಕು
ತಿರಿ ತಿಂಡಿ ಬಿಡಬೇಕು ಹರಟೆಗಳ ಬಿಡಬೇಕು
ಹರಿಕಥೆ ಕೇಳಬೇಕು ಹರಿದಿನ ಮಾಡಬೇಕು
ಹರಿಯ ಪಾಡಲಿಬೇಕು ೩

ನೆಟ್ಟಕುಂಕುಮ ಬೇಕು ಕೆಟ್ಟವರ ಬಿಡಬೇಕು
ಕಟ್ಟಿ ಆಶೆಯ ಬಿಟ್ಟು ತೃಪ್ತಿಯಿಂದಿರಬೇಕು
ಕಷ್ಟಬಂದರು ಬಹು ಗುಟ್ಟಿನಿಂದಿರಬೇಕು
ನೆಂಟರೊಡನೆ ಕಠಿಣ ನಿಷ್ಠೂರ ಬಿಡಬೇಕು ೪

ಚುಚ್ಚಬಾರದು ಚಾಡಿ ಬಿಚ್ಚಬಾರದು ಗಾಡಿ
ಹಚ್ಚಬಾರದು ವಿಷಯ ಕೊಚ್ಚಬಾರದು ಜಂಭ
ಮುಚ್ಚಬಾರದು ನಿಜವ ಹೆಚ್ಚಬಾರದು ಷೋಕು
ಹುಚ್ಚಳಂತಿರದ್ಹಾಂಗೆ ಸ್ವಚ್ಚನಡತೆಯು ಬೇಕು ೫

ಪಾಪವ ತೊರಿಬೇಕು ಲೇಪನವ ಬಿಡಬೇಕು
ಕೋಪವ ಬಿಡಬೇಕು ಕಪಟತ್ವ ಬಿಡಬೇಕು
ರೂಪ ಮದವ ಬಿಟ್ಟು ಚಪಲತ್ವ ತೊರಿಬೇಕು
ವಿಪರಿತ ಮಡಿಬಿಟ್ಟು ಶ್ರೀ ಪತಿಯ ನೆನಿಬೇಕು ೬

ಅಂಗ ಶುಧ್ಧಿಯು ಬೇಕು ಶೃಂಗಾರ ರಸಬೇಕು
ನಗೆಮೊಗವಿರಬೆಕು ಸವಿಮಾತು ಗುಣಬೇಕು
ಭಂಗಾರ ವಿಡಬೇಕು ರಂಗಗೆನ್ನಲಿ ಬೇಕು
ಮಂಗಳಾಂಗ ನಮ್ಮ "ಶ್ರಿ ಕೃಷ್ಣವಿಠಲ" ನ್ನ
ಹಿಂಗದೆ ನೆನೆಬೇಕು ಅಂಗಿನೀಗಲಿ ಬೇಕು ೭

## ೯೯

ಯಾತರ ಸುಖವಯ್ಯಾ ಇದು ಇನ್ಯಾತರ ಸುಖವಯ್ಯಾ ಪ

ಶ್ರೀ ತರುಣೀಶನ ಮರೆತು ಸಂಸಾರದಿ ಬಾಳುವುದೆಂತೆನೆ ಅ.ಪ.

ಹಣ ಉಳ್ಳ ಮನುಜಂಗೆ ಗುಣವುಳ್ಳ ಸತಿಯಿಲ್ಲ
ಗುಣವುಳ್ಳ ಸತಿಯಿರೆ ಗುಣಡೊಂಕುಪತಿಯು
ಅನುಕೂಲವಿರೆಎರಡು ತನಯರೊಬ್ಬರು ಇರರು
ಗುಣಿಸಿ ನೋಡಲು ಎಲ್ಲು ನ್ಯೂನತೆ ಸರಿಯೈ ೧

ವಿತ್ತವಿದ್ದರೆ ಹಿತರು ಬಂಧು ಬಳಗವೆಲ್ಲ
ವಿತ್ತವಿಲ್ಲಾದಿರಲು ನಿಂದಿಸಿ ನಗುತಿಹರು
ಬತ್ತಲೆ ಬಂದುದು ಬತ್ತಲೆ ಪೋಪುದು
ಮತ್ತೆ ಮಮತೆ ಯಾಕೊ ಮಧ್ಯೆ ಮತ್ತಿದ್ದುದಕೆ ೨

ಸಂತೆಯತೆರಸರಿ ಸತಿಸುತ ಪರಿಜನ
ನಿಂತು ಪೋಪರು ತಮ್ಮಯ ಋಣತೀರೆ
ಅಂತ್ಯವಿಲ್ಲ ಸಂಸಾರದ ಶರಧಿಗೆ
ಸಂತಸಪ್ರದವೆಂಬ ಭ್ರಾಂತಿಯ ನೀಗಯ್ಯ ೩

ಜನನ ಮರಣವೆಂಬ ದುಃಖವೆ ತಾಕಿರೆ
ದಿನದಿನ ಪ್ರತಿದಿನ ರೋಗದ ಕಾಟಗಳು
ಗುಣಿಸಿ ನೋಡಲು ಮತ್ತೆ ಮನಕೆ ನೆಮ್ಮದಿ ಇಲ್ಲ
ಅನಿಲ ಮಂದಿರ ನೊಲಿಸಿ ಗುಣದೂರನಾಗಯ್ಯ ೪

ಕಾಲನೆಡೆಗೆ ಜನ ಬೀಳ್ವುದು ನೋಡಿಯು
ಬಾಳು ಸ್ಥಿರವೆಂದು ಕೇಳಿಲಿ ಮುಳುಗುವುದೇ
ಬಾಲ ಯೌವ್ವನ ಮತ್ತೆ ಮುಪ್ಪಿಲಿ ಬೀಳುವ
ಸ್ಥೂಲ ಶರೀರವೆ ಗೋಳಿನ ಸೆರೆಮನೆಯ್ಯೆ ೫

ಊಟ ತಿಂಡಿಗೆ ಮೇಲ್ನೋಟದ ಕೀಟಗೆ
ಪಾಟು ಪಡುತ ಕರ್ಮ ಮೂಟೆಯ ಘಳಿಸುವರೇ
ಏಟು ತಿನ್ನದೆ ಭವ ಕಾಟಕ ದಾಟಲು
ಘೋಟಕಾಸ್ಯನ ಪದವಾರಿಜ ಪಿಡಿಯ್ಯೆಯ್ಯ ೬

ಮಂದನಾಗದೆ ಬಹು ಮುಂದಿನ ಗತಿ ನೋಡು
ವಂದಿಸಿ ಜಯತೀರ್ಥ ವಾಯ್ವಾಂತರ್ಗತ
ಇಂದಿರೆ ಪತಿ ಕೃಷ್ಣವಿಠಲನ ಭಜಿಸಲು
ಕುಂದುಗಳಿಲ್ಲದೆ ಶಾಶ್ವತಾನಂದವು ಕೇಳಯ್ಯ ೭

## ೧೦೦

ಲಘುವಾವುದೆಂಬುದನು ನಿಜವಾಗಿ ನುಡಿಯುವೆನು
ಸುಗುಣವಂತರು ಕೇಳಿ ವಿನಯದಲಿ ಬೇಡುವೆನು ಪ

ಲಘುತೃಣವು ತಾನಲ್ಲದಿಟವೆ ಸರಿ ಈ ಮಾತು
ಲಘುತೃಣವ ತಾವುಂಡು ಪಾಲ್ಕೊಡವೆ ಗೋವುಗಳು ಅ.ಪ.

ನಾರಿಯನು ಸಾಕುವೆಡೆ ಕೈಲಾಗದ ಲಘುವು
ಭಾರಿಸಿರಿಯನು ಪತಿಗೆ ತಾರದಾ ಸೊಸೆ ಲಘುವು

ನಾರಿಯರ ಕೈಗೊಂಬೆಯಾಗಿರುವ ನರ ಲಘುವು
ಸಿರಿವಂತ ನೆಂಟರಲಿ ಬಡವ ಸೇರಲು ಲಘುವು ೧

ವಿತ್ತವಿಲ್ಲದ ಪಿತನು ಪುತ್ರನಿಲ್ಲಿರೆ ಲಘುವು
ಪುತ್ರವತಿಯರ ನಡುವೆ ಸವತಿ ಬಂಜೆಯು ಲಘುವು
ಅತ್ತಿಗೆಗೆ ಬಹು ಲಘುವು ರಿತ್ತ ಮೈದುನ ಮಂದಿ
ಭರ್ತೃತಾನತಿ ಲಘುವು ಶ್ರೀಮಂತ ಕನ್ನಿಕೆಗೆ ೨

ಆಧುನಿಕ ಮಂಡಲಿಗೆ ಪೌರಾಣಗಳು ಲಘುವು
ಮೋದತೀರ್ಥರ ಮತಕೆ ಮಿಕ್ಕುದೆಲ್ಲವು ಲಘುವು
ವೇದನುತ "ಶ್ರೀಕೃಷ್ಣವಿಠಲ"ನ ನೆನೆಯದವ ಶುದ್ಧಲಘು
ತಮನ್ಯೆಯ ವೃದ್ಧ ಸಮ್ಮತ ಹೌದು ೩

## ೧೦೧

ಲೌಕಿಕ ಏತಕ್ಕೆ ನಮಗೆ ಪ

ಲೋಕೇಶ ಕೃಷ್ಣನ್ನ ಮರಿಸಿ ಕೆಡಿಸುವಂಥ ಅ.ಪ.

ಸುಳ್ಳು ಹೇಳಲಿಬೇಕು ಕಳ್ಳನಾಗಲಿಬೇಕು
ಮೆಲ್ಲನೆ ಸವಿಮಾತು ಆಡಿನಟಿಸಬೇಕು
ಫುಲ್ಲನಾಭನ ಬಿಟ್ಟು ಹುಲ್ಲುಮಾನವನನ್ನು
ನಲ್ಲ ನೆಂದೆರಗುತ ಕಾಲ ಕಳಿಸುವಂಥ ೧

ಗಡ್ಡ ಬೋಳಿಸಬೇಕು ದುಡ್ಡುಗಳಿಸಬೇಕು
ಬಡ್ಡಿಗೆ ಕೊಡಬೇಕು ದೊಡ್ಡ ಮನೆಯ ಕಟ್ಟಿ
ಅಡ್ಡಿಯಿಲ್ಲದೆ ಮೆರೆದು ದೊಡ್ಡವನಾಗಬೇಕು
ಹೆಡ್ಡಮಂದಿಯಲಿರಿಸಿ ಗೊಡ್ಡು ದೇಹವ ಮಾಳ್ಪ ೨

ಸತಿಸುತ ಧನಗಳನೆ ಗತಿ ದೈವನೆನಬೇಕು
ಹಿತದಿಂದ ದುಡಿಯುತ ಸತಿಯರಿಗಿಡಬೇಕು
ಗತಿದಾಯಕ ನಮ್ಮ "ಶ್ರೀ ಕೃಷ್ಣವಿಠಲ"ನ್ನ
ಶಾಸ್ತ್ರನೇತ್ರದಿ ನೋಡೆ ಪುರಸೊತ್ತು ಕೊಡದಂಥ ೩

## ೧೦೨

ವ್ಯಾಸಕೂಟ ದಾಸಕೂಟ ಎನ್ನದಿರೊ ಹೀನಮಾನವ ಪ

ಈಶ ಹೊರತು ಮಿಕ್ಕ ಜನರು ದಾಸರೇ ಸರಿ ಅ.ಪ.

ವೇದವ್ಯಾಸದೇವ ದೇವ ಸರ್ವರಿಗೆ ಈಶ ಕಾಣಿರೋ
ಮೋದಮುನಿಯು ಆತನಿಗೆ ಮುಖ್ಯದಾಸ ಶಾಸ್ತ್ರಸಿದ್ಧವೋ
ಎಂದಮೇಲೆ ನೀನು ಯಾರು ಸಾಕ್ಷಿಕೇಳಿ ಬೇಗ ನುಡಿಯಲೋ
ಛಂದ ಭಜಿಸಿ ಜ್ಞಾನ ಘಳಿಸಿ ದಾಸನೆಂದು ಹರಿಯ ಭಜಿಸೆಲೋ ೧

ಧರ್ಮಶಾಸ್ತ್ರ ಮರ್ಮಬಿಟ್ಟು ಓದಿ ಓದಿ ಏನು ಫಲವೊ
ನಿರ್ಮಲಾತ್ಮ ನಿತ್ಯ ತೃಪ್ತ ನಿರ್ಜರೇಶ ನೊಲಿಮೆ ಮುಖ್ಯವೋ
ಕಮಲೆಯರಸ ಕಲ್ಪವೃಕ್ಷ ಹೃಸ್ಥದೊರೆಯ ಕಾಣಬೇಕೆಲೋ
ಕರ್ಮಬಿಡದೆ ಆಶೆತೊರೆದು ಕರ್ಮಪತಿಯ ಶರಣು ಪೊಗೆಲೋ ೨

ವೇದಶಾಸ್ತ್ರ ಸ್ಮೃತಿಗಳಲ್ಲಿ ಪೇಳಿರುವ ತತ್ವಗಳನ್ನು
ಮೋದಮುನಿಯ ಮತವ ಬಿಡದೆ
ನಡತೆಯಿಂದ ನಡಿಸಿ ನಡಿಸುತ
ಇಂದಿರೇಶನ ದಾಸಜನರು ಪದಗಳಿಂದ ಪಾಡಿ ಪಾಡುವ
ಖೇದವಳಿದು ಸಾಧು ಜನಕೆ ನಂದ ಸೂರೆಗೈದು ನಲಿವರೋ ೩

ವೇಷದಿಂದ ಭಾಷೆಯಿಂದ ಶ್ರೀಶನೊಲಿಮೆ ಕಾಣಲಾಗದೋ
ದಾಸನೆಂದು ದೈನ್ಯದಿಂದ ದ್ವೇಷ ತ್ಯಜಿಸಿ ಕೂಗಬೇಕೆಲೋ

ವಿಷಯವಳಿದು ಮಮತೆ ಬಿಟ್ಟು ಗೆಜ್ಜೆಕಟ್ಟಿ
ಕುಣಿದು ಕುಣಿಯಲೊ ೪

ಶಕ್ತಿಜರಿದ್ವಿರಕ್ತಿಬೇಡಿ ಭಕ್ತಿಯಿಂದ ಭಜಿಸಿ ಭಜಿಸೆಲೊ
ಶಕ್ತ ವಿಜಯಸೂತ ಶ್ರೀ ವಾಯುಹೃಸ್ಥ "ಕೃಷ್ಣವಿಠಲ"
ಯುಕ್ತಿಯಿಂದ ಬಂಧಬಿಡಸಿ ನಿತ್ಯಸುಖವ ನಿತ್ತು ಕಾಯ್ವನೊ
ಭಕ್ತಿಯಿಂದ ಶಕ್ಯನಾದ ಜ್ಞಾನ ಘಳಿಸಿ ಕೊಲ್ಲು ಸಂಶಯ ೫

## ೧೦೩

ಸಜ್ಜನರ ಸಂತಾಪ-ಕುಲಕೆ ಮೃತ್ಯುವುಕಂಡ್ಯ-ಮನವೇ ಪ

ನಿರ್ಜರೇಶಗು ಹಾನಿ-ತಪ್ಪದೈ ಇದರಿಂದ ಅ.ಪ.

ಅಂದು ದುರ್ಯೋಧನನು ಸಂದ ಸಭೆಯೊಳು ಪಾಂಡು
ನಂದನರ ಸತಿಮಾನ ಕಂದಿಸಲೆತ್ನಗೈಯೆ
ಇಂದುವದನೆಯ ತಾಪ ಬಂದು ಬಡಿಯಲು ಖಳಗೆ
ಬಂಧು ಬಳಗವುಸಹಿತ ಪೊಂದಿದನೆ ಯಮಸದನ ೧

ತ್ರೇತೆಯಲಿ ರಾವಣನು ನೀತಿಮರೆತವನಾಗಿ
ಖ್ಯಾತ ನಂದಿಯ ನೋಡಿ ಕೋತಿ ಚೇಷ್ಟೆಯನಡಿಸೆ
ಸೀತೆ ದ್ರೋಹದಿ ಹಾಗೆ ವ್ರಾತ್ಯ ಕುಲಸಹಿತ
ತಾ ನಾಥ ರಾಮನ ಶರಕೆ ತುತ್ತಾಗಿ ಪೋದ ಖರೆ ೨

ಇಂದ್ರ ನೆನಿಸಿದ ನಹುಷ ಪೊಂದಿದನು ಸರ್ಪತ್ವ
ಕುಂದದಾ ಯಾದವರು ಪೊಂದಿದರು ಕುಲನಾಶ
ಚಂದ್ರಮೌಳಿಯ ಅಂಶ ಚಂಡಮುನಿ ದೂರ್ವಾಸ
ನೊಂದು ಧಾವಿಸಿ ಜಗದಿ ಬಂದು ನಿಂತುದನರಿಯ ೩

ಗರವ ಕುಡಿಯಲಿಬಹುದು ಶರಧಿ ಧುಮುಕಲಿಬಹುದು
ಉರಿಯ ನುಂಗಲಿ ಬಹುದು ಉರಗವನು ಪಿಡಿಯಬಹುದು
ಹರಿಯ ಶರಣರ ದ್ರೋಹ ತಿರುಗಿದರು ಮುಲ್ಲೋಕ
ಪರಿಸಲಾಗದು ಅವರೆ ಕರುಣಗೈಯದೆ ಮತ್ತೆ ೪

ಭಕ್ತವತ್ಸಲ ಹರಿಯು ಭಕ್ತತಾಪವ ಸಹಿಸ
ಶಕ್ತಿಸಾಹಸ ಜರಿದು ಉಕ್ತಿಲಾಲಿಸಿ ಬೇಗ
ಕರ್ತೃ ಹರಿಯೆಂದರಿತು ಭಕ್ತರನು ಸೇವಿಸುತ
ನಿತ್ಯದೊರೆ "ಶ್ರೀಕೃಷ್ಣವಿಠಲ" ಕರುಣವ ಫಳಿಸು ೫

## ೧೦೪

ಸುಖವೇ ನೆಂಬುದನು ಇಂದು ಕಂಡೇ ಪ

ವಿಖನಸಾರ್ಚಿತ ಪಾದ ಭಜನೆ ಮಾಡುವದೊಂದೆ ಅ.ಪ.

ಪುಟ್ಟಿದಾರಾಭ್ಯ ಬಹುದಿಟ್ಟನಾಗಿಯೆ ಬಾಳು
ಅಟ್ಟಿಮೆರೆಯುವ ಬಯಕೆ ವಿಟ್ಟು ಮನದಲಿ ಬಹಳ
ಕಷ್ಟಪಟ್ಟೆನು ಫಳಿಸೆ ವಿತ್ತರಾಶಿಯ ವಿಪ್ರ
ಶ್ರೇಷ್ಟಧರ್ಮವ ಬಿಟ್ಟು ವ್ಯರ್ಥ ವಿದ್ಯೆಯ ನೋದಿನೋದಿ
ಅಷ್ಟಕರ್ತನು ಬಯಕೆ ಬಟ್ಟಬಯಲನು ಗೈದು
ಕೊಟ್ಟು ಜ್ಞಾನದ ಕಣ್ಣು ನೆಟ್ಟನೆ ನೊಡೆನಲು
ಬಟ್ಟು ಸುಖವನೆ ಮೆಲ್ವ ಜಟ್ಟಿ ಜಗದಲಿ ಕಾಣೆ
ಬೆಟ್ಟ ಸಮ ಕಷ್ಟವಿದೆ ಎಳ್ಳಷ್ಟು ಭವ ಸುಖಕೆ ೧

ಹೆಂಡತಿಯ ಸುಖವೆಂದೆ ಕೆಂಡಬಡತನ ಸೋಕೆ
ಗಂಡು ಬಯಕೆಗಳೆಲ್ಲ ಉಂಡುದಣಿಯಲಿಲ್ಲ
ಭಂಡ ಬಾಳಿದು ಎಂದು ಮಂಡೆ ಚಚ್ಚುತ ನಿತ್ಯ
ತುಂಡು ಆದಳು ಅವಳು ಬೆಂಡು ಆದೆನುನಾನು
ಹಿಂಡು ಬಳಗಗಳೆಲ್ಲ ಉಂಡು ದಣಿದರು ನಗೆಯ

ಹಿಂಡಿ ಪರಜನ ಪ್ರಾಣ ಉಂಡು ಬದುಕಿಹೆ ಸ್ವಾಮಿ
ಮುಂಡೆ ಗಿಂತಲು ಹೀನ ಷಂಡನಾಗಿಹೆ ಸ್ವಾಮಿ
ಪಾಂಡುರಂಗನೆ ನಿನ್ನ ತೊಂಡನಾದರೆ ಧನ್ಯ ೨

ನೆಂಟರೆಲ್ಲರು ವಿತ್ತ ಅಂಟಿರಲು ಅಂಟುವರು
ಗಂಟು ಇಲ್ಲದಮೇಲೆ ಗಂಟುಮೋರೆಯ ನೇಮ
ಒಂಟಿಗನೆ ಜೀವನಿಹ ನೆಂಟ ಬಿಂಬನೆ ಒಬ್ಬ
ಭಂಟನೆಂದರೆ ಪಿಡಿವ ಶುಂಠ ಬಿಟ್ಟವ ಸತ್ಯ
ಕಂಟಕವು ವಿಷಯತತಿ ಕಜ್ಜಿತಿನಸಿನ ತೆರದಿ
ಎಷ್ಟು ಸೇವಿಸಲಷ್ಟು ತಂಟೆನೀಡುವವೇನೆ
ಕುಂತವಾದರು ಕರುಣ ಅಂಟಿಮನಸಿಗೆ ಭಾಧೆ
ಉಂಟುಮಾಡುವವು ವೈಕುಂಠ ನಾಯಕಕಾಯೊ ೩

ಬಾಡಿಗೆಯ ಮನೆಯಂತೆ ಗಾತ್ರವಿದು ಜೀವನಿಗೆ
ಹೂಡಿಹನು ಭವಯಾತ್ರೆ ಓಡಿಹೊಪುದು ತಾನೆ
ಆಗಿ ಮುಗಿಯಲು ಆಟ ಪ್ರೌಢ ಹರಿಪುರ ದಾರಿ
ನೋಡಿಕೊಂಡವ ಜಾಣ ಕೇಡು ಮತ್ತಗೆ ಸಿದ್ಧ
ಮಾಡುತಲಿ ವಿಧಿಗಳನು ದೂಡುತಲಿನಿಜೀವ
ಕೂಡುತಲಿ ಸಜ್ಜನರ ಹಾಡುತಲಿ ಹರಿಗಾನ
ಜೋಡಿಸುತ ಹರಿಭಕ್ತಿ ಬೇಡದಲೆ ಏನೊಂದು
ಬಾಡದಿರೆ ದುಃಖ ಬರೆ ನೋಡುವನು ನಿಜ ಸುಖವ ೪

ಹೆಂಡತಿಯು ಸುಗುಣಿ ಇರೆ ಗಂಡನಿಹ ದುರ್ಮಾರ್ಗ
ಗಂಡ ಮೃದು ತರವೆನ್ನೆ ಹೆಂಡತಿಯು ಕರ್ಕಸಿಯು
ಕುಂಡಲಿಯ ಸಿರಿಯೆನ್ನೆ ಮಂಡೆಯಲಿ ಮೆದುಳಿಲ್ಲ
ಹೆಂಡ ಕುಡುಕರು ಸುತರು ಉಂಡುಸುಖಿಸೆ ರೋಗ
ಮುಂಡೆಯರ ಚಲುವಿಕೆಯು ಶಂಡಸಹ ಸಂಸಾರ
ಭಂಡ ಮಕ್ಕಳ ಬಾಳು ಪುಂಡಜನ ಸಹವಾಸ
ಕಂಡು ಸಹಿಸದ ನೆಂಟ ಉಂಡು ದೂರುವ ಬಳಗ
ದಂಡವಲ್ಲವೆ ಮತ್ತೆ ಕೊಂಡು ಮಾಡುವದೇನು ೫

ಹೇಸಿ ಭವ ನಿಜಗುಣವೆ ಕ್ಲೇಶದಾಯಕ ವಿರಲು
ಲೇಸು ದೊರಕುವದುಂಟೇ ಏಸು ಕಾಲವು ಕಳಿಯೆ
ಏಸು ಕಡಿಯಲು ನೀರ ಸೂಸುವುದೆ ನವನೀತ
ಹೇಸಿಗೆಯ ದುರ್ಗಂಧ ನಾಶವಾಗುವುದುಂಟೇ
ಆಶೆ ವಿಷಯದಿ ಬಿಡದೆ ಕ್ಲೇಶ ತೊಲಗದು ಎಂದು
ದಾಶರಥಿಯ ಮನಮುಟ್ಟಿ ದಾಸ ನಾಗದ ತನಕ
ಭಾಸವಾಗದು ಜ್ಞಾನ ಶ್ರೀಶ ಕಾಣಿಸ ತನ್ನ
ದೋಷಿಯಾಗದೆ ಹರಿಗೆ ಮೀಸಲೆನ್ನಿರಿ ಎಲ್ಲ ೬

ನಂಬಿ ಮತಿಮತ ತತ್ವ ವಿಷಯ ಹಂಬಲವಳಿದು
ಡಿಂಬಗತ ಹರಿ ಬಿಂಬ ಧ್ಯಾನ ಮಾರ್ಗವ ಕಂಡು
ಅಂಬುಜಾಕ್ಷ ನಮ್ಮ "ಶ್ರೀ ಕೃಷ್ಣವಿಠಲ"ನ್ನ
ತುಂಬಿ ಹೃದಯದದಿ ಸತತ ಪರಮ ಸಂಭ್ರಮದಿಂದ
ತಂಬೂರಿ ಮೀಟುತ್ತ ಗೆಜ್ಜೆ ಸಹ ಕುಣಿಕುಣಿದು
ಅಂಬಕದಿ ಸುಖ ಬಾಷ್ಪ ಸುರಿಸುತ್ತಹರಿನೆನೆದು
ಅಂಬುಜಾಸನ ಸುರಕದಂಬ ಕರುಣವ ಗಳಿಸಿ
ಅಂಬೆ ಸಿರಿಪತಿ ಚರಣದಿಂಬು ಬೇಡುವದೊಂದೇ ೭

## ಏಕನಾದ

## ೧೦೫

ಹರಿಗುರುಗಳ ಬಿಟ್ಟು ನರಸ್ತುತಿಗಳನು ಮಾಡಬಾರ್ದು ಪ

ಸಿರಿವುರಿಯಲಿ ಸಿಕ್ಕಿ ನರಹರಿ ಚರಣವ ಬಿಡಬಾರ್ದು ಅ.ಪ.

ಒಂಟಿಲಿ ಸತಿಯನು ಪತಿವ್ರತೆ ಎನ್ನುತ ಬಿಡಬಾರ್ದು
ನೆಂಟೆಗೆ ಮಿತ್ರಗೆ ಸೂಳೆಗೆ ಸಾಲವ ಕೊಡಬಾರ್ದು
ತುಂಟರ ಕುಡುಕರ ಜಾರರ ನೆರೆಹೊರೆ ಇರಬಾರ್ದು
ಒಂಟಿಯ ಊಟವ ಪಯಣವ ಕಲಹವ ಬೆಳೆಸಬಾರ್ದು ೧

ಮಾವನ ಮನೆಯಲಿ ದುಡಿಯದ ಅಳಿಯನು ನಿಲ್ಲಬಾರ್ದು
ಕೋವಿದರಡಿಗಳ ಸುಜನರ ಸಂಗವ ಬಿಡಬಾರ್ದು
ಜೀವರು ಹರಿ ಸಮ ಮಾಯವೆ ಜಗಸರಿ ಎನಬಾರ್ದು
ದೇವನ ದೂಡುತ ವಿಷಯವ ಹರಿಸುತ ಕೆಡಬಾರ್ದು ೨

ಮನೆಕದ ಮುಂದಿಲಿ ಪತಿವ್ರತೆ ತಾನು ನಿಲಬಾರ್ದು
ತನುವನು ತೋರುತ ಸೆರೆಗನು ಬೀರುತ ನಡಿ ಬಾರ್ದು
ವನಿತೆಯ ಸಂಗಡ ಗುಟ್ಟಿನ ವಿಷಯವ ನುಡಿಬಾರ್ದು
ಮಣಿಯದೆಲೆಂದಿಗು ಹಿರಿಯರ ಚರಣಕೆ ನಡಿಬಾರ್ದು ೩

ನುಡಿಯುವ ತೆರೆದಲಿ ನಡೆಯದ ಮನುಜನ ನಂಬಬಾರ್ದು
ತಡೆಯದೆ ಕೋಪವ ದುಡುಕುವ ನೆಡೆಯಲಿ ನಿಲ್ಲಬಾರ್ದು
ಬೆಡಗನು ತೋರುವ ನಾರಿಯ ಕಡೆಯಲಿ ನೋಡಬಾರ್ದು
ದುಡುಕುತ ಲೊಡನೆಯೆ ಯಾವುದು ನಿಶ್ಚಯ ಮಾಡಬಾರ್ದು ೪

ಕೆಟ್ಟರೆ ನೆಂಟರನೆಂದಿಗು ಮಾನಿಯು ಸೇರಬಾರ್ದು
ಕಷ್ಟವು ಬಂದೆಡೆ ಧೈರ್ಯವನೆಂದಿಗು ಬಿಡಬಾರ್ದು
ಗುಟ್ಟಿನ ಮಂತ್ರವು ಘಟ್ಟಿಲಿ ಜಪಿಸುತ ಕೂಗಬಾರ್ದು
ಶಿಷ್ಯರಿಗಲ್ಲದೆ ದುಷ್ಟಗೆ ಶಾಸ್ತ್ರವ ನುಡಿಬಾರ್ದು ೫

ತಿಂಡಿಯ ಚಪಲವ ನರಹರಿ ತೊಂಡನು ಮಾಡಬಾರ್ದು
ಹೆಂಡರ ಭಜಕನ ಜಾರನ ನುಡಿಗಳ ನಂಬಬಾರ್ದು
ಗಂಡನಿಗಂಜದ ಸತಿ ಸಹ ಸರಸವ ಮಾಡಬಾರ್ದು
ಮಂಡೆಲಿ ಚರಣದಿ ಬರಿತೆರ ವೆಂದಿಗು ಹೋಗಬಾರ್ದು ೬

ಹುಡುಗರ ಶಾಲೆಗೆ ಕಲಿಯಲು ಹುಡುಗಿಯ ಕಳಿಸಬಾರ್ದು
ಮಡದಿಗೆ ಭಂಟಗೆ ಒಡನೆಯೆ ಸದರವ ನೀಡಬಾರ್ದು
ಹುಡುಗಿಯ ಕಾಣದ ಜನರಿಗೆ ದೇಶಕೆ ಕೊಡಬಾರ್ದು
ನಡೆನುಡಿ ನೋಟ ವಿಶೇಷದಿ ನೇಮವನಿಡದಲೆ ಇರಬಾರ್ದು ೭

ಯಾಚಕ ಸವಿನುಡಿ ವಿನಯ ವಿವೇಕವ ಮರಿಬಾರ್ದು
ಯೋಚನೆ ಗೈಯದೆ ನೆರೆಹೊರೆ ಹಗೆತನ ಗಳಿಸಬಾರ್ದು
ಆಚೆಗೆ ಸತಿಪತಿ ಒಗೆತನ ಹುಳುಕನು ಹಾಕಬಾರ್ದು
ಮೋಚಕ ನಿಜ ಸಖ ಹರಿತಾನೆಂಬುದ ಮರಿಬಾರ್ದು ೮

ದೊಡ್ಡವರೆಡೆಯಲಿ ಹುಡುಗರು ಸರಸವ ಮಾಡಬಾರ್ದು
ದುಡ್ಡಿನ ಜನಗಳನೆದುರಿಸಿ ಬಡವನು ನಿಲ್ಲಬಾರ್ದು
ಸಡ್ಡೆಯ ಮಾಡದೆ ಅಡ್ಡಿಗಳೆಲ್ಲವ ಸರ್ವರಿಂ
ದೊಡ್ಡವ ಶ್ರೀ ಕೃಷ್ಣವಿಠಲನ ಭಜನೆಯ ಬಿಡಬಾರ್ದು ೯

## ೧೦೬

ಹರಿ ವಲಿಯಾ ನಮ್ಮ ಹರಿವಲಿಯಾ ಪ

ಮರುತನ ಪೊಂದದ ಅಸುರರಿಗೆಂದಿಗು ಅ.ಪ.

ಹರಿಕಥೆ ಕೇಳದೆ ಹರಟೆಗಳಾಡುತ
ಸಿರಿಮದ ವಿಷಯದಿ ಮೆರೆಯುವ ನರರಿಗೆ ೧

ಮಾನಿನಿ ಮನೆಯಭಿಮಾನವ ತೊರೆಯದೆ
ಜ್ಞಾನವ ಘಳಿಸದ ಶ್ವಾನನಿಗೆಂದಿಗು ೨

ತಾನುಡಿ ವಂದದಿ ತಾನೇ ನಡೆಯದ
ಜ್ಞಾನಿಯ ತೆರದಿಹ ಹೀನನಿ ಗೆಂದಿಗು ೩

ನಾನೇ ಕರ್ತನು ನಾನೇ ಭೋಕ್ತನು
ನಾನೇ ಯೆಂಬೀ ದನುಜರಿಗೆಂದಿಗು ೪

ದೋಷವಿವರ್ಜಿತ ಶ್ರೀಶನೆದೊರೆ ಸರಿ
ದಾಸನು ನಾನಿಹೆ ಪೋಷಿಸುಯೆನ್ನದೆ ೫

ಗುರುಗಳ ಪಿಡಿಯದೆ ಹರಿಯಡಿ ಬೀಳದೆ
ತರಿಯದವಿದ್ಯೆಯ ಅರಿಯದೆ ವಿದ್ಯೆಯ ೬

ವಿಧಿಯ ನಿಷೇಧವ ಮುದದಿಂ ನಡೆಸದೆ
ವೇದವ ನೋಡದೆ ಸಾಧುಗಳ್ಪಡಿಯದೆ ೭




ನನ್ನದು ನಿನ್ನದು ನಿನ್ನದೆ ಸಕಲವು
ನೀನೇ ಧನಗತಿ ನನಗೈಯನ್ನದೆ ೮

ಸಿರಿಕೃಷ್ಣವಿಠಲನೆ ವರಪುರುಷೋತ್ತಮ
ಉರುತರ ಭಕ್ತಿಲಿ ಪೊರೆಯನ್ನದೆ ೯

## ೧೦೭

### ತಾತ್ವಿಕವಿವೇಚನೆ

ಏರಿಸಿ ಏರಿಸಿ ಮಾರುತ ಮ್ವತಧ್ವಜ
ಸಾರ ಸುಖಂಗಳ ನಿತ್ಯದಲುಂಬುವ
ಯೋಗ್ಯತೆ ಯುಳ್ಳವರೂ ಪ

ಈರನ ಮತವೇ ಸಾರವು ಶ್ರುತಿಗಳ
ಶೌರಿಯ ಮತವೇ ಈರನ ಮತ ಖರೆ
ದೂಡಿರಿ ಸಂದೇಹ ಅ.ಪ

ಇಲ್ಲವು ಜಗವಿದು ಭ್ರಾಂತಿಯ ಕಲ್ಪನೆ
ಸುಳ್ಳೇ ಎಲ್ಲವು ಬ್ರಹ್ಮನ ಬಿಟ್ಟರೆ ಬ್ರಹ್ಮನೆ ಸತ್ಯವೆನೆ
ಅಲ್ಲವು ನುಡಿಯಿದು ಬ್ರಹ್ಮನು ಕಾರಣ
ಸುಳ್ಳಾಯಿತು ನುಡಿ ಅಲ್ಲವೆ ಯೋಚಿಸಿ ಕೊಡದು ಈ ಮನವು ೧

ಉಂಬುದು ಉಡುವುದು ಕಾಂತೆಯ ಸಂಗವು
ನಂಬಲು ಬೇಡಿರಿ ಸುಳ್ಳೆಯೆಂತೆಂನೆ ಸಾಕ್ಷಿಯು ಒಪ್ಪುವುದೇ
ನಂಬಲನರ್ಹವೆ ಕಾರ್ಯಸುಕಾರಿಯ
ಹಂಬಲ ದುಃಖವು ಸುಖಗಳು ಎಲ್ಲಾ ಅನುಭವ ಸಿದ್ಧ ಖರೆ ೨

ಒಂದೇ ತೆರವಿಹ ವಸ್ತು ದ್ವಯವಿರೆ
ಒಂದನು ಮತ್ತೊಂದೆಂಬುವ ಭ್ರಾಂತಿಯು ಕೊಡುವದೂ
ಎಂದೀ ಒಂಟೀ ಬ್ರಹ್ಮನು ಭ್ರಾಂತಿಯ
ಪೊಂದಿಹ ಹೇಗೆನೆ ಉತ್ತರ ಸಿಕ್ಕದು ಯೋಚಿಸಿ ಕೋವಿದರೆ ೩

ಭ್ರಾಂತಿಯ ಪೆಣ್ಣನು ಕೊಡುತ ತಾಸ್ವಾ
ತಂತ್ರ ವಿಹೀನನು ಆಗುತ ಮಿಡುಕುವ ದೇವನು ಎನಿಸುವನೆ
ಮಂತ್ರಿಸೆ ಬ್ರಹ್ಮನ ನಾನಿಹೆ ನೆಂಬುದ
ಭ್ರಾಂತಿಯ ತೊಲಗುತ ಬ್ರಹ್ಮನು ಆಹನೆ ಮನವ ವಿಚಾರಿಸಿರಿ ೪

ನಾನೇ ಬ್ರಹ್ಮನು ಎಂಬೀ ಜ್ಞಾನವು
ತಾನೇ ಬಾರದು ಸಹಜ ವಿದಲವು ಅನುಭವ ವಿರುದ್ಧಾ
ತಾನೇ ಬ್ರಹ್ಮನು ಆಗಿರೆ ಭವದೊಳು
ನಾನಾ ದುಃಖವ ನುಣ್ಣಲು ಬಂದರೆ ಹುಚ್ಚನೆ ಅವಸರಿಯು ೫

ಬ್ರಹ್ಮ ದ್ವಯವಿದೆ ಸತ್ಯ ದ್ವಯವಿದೆ
ಬ್ರಹ್ಮನು ಆಹುದು ಕೊನೆ ಮಾತೆಂದರೆ ಬ್ರಹ್ಮನು ಶೂನ್ಯನಿಹ
ಬ್ರಹ್ಮನು ನಿರ್ಗುಣ ನಂದವಿಹೀನನು
ಬ್ರಹ್ಮನ ಗತಿಯೆನೆ ಸರ್ವವಿನಾಶವೆ ಯಾರಿದ ಬಯಸುವರೂ ೬

ವ್ಯಕ್ತಿತ್ವವು ತಾನಾಶವು ಆಹುದೆ
ಮುಕ್ತಿಯು ಯೆಂತೆನೆ ಸರ್ವವಿನಾಶಕೆ ಸಾಧನೆಯೇ ಬತವು
ಮುಕ್ತಿಯು ದುಃಖವಿವರ್ಜಿತ ಬರಿಸುಖ
ರಿಕ್ತವು ಬರಿಯೆನೆ ಭವವಿದು ವರವೈ ಬೇಡವು ಆ ಮುಕ್ತಿ ೭

ಸತ್ಯವ ನುಡಿವುದು ವೇದವು ಒಂದೆಡೆ
ಮಿಥ್ಯವ ನುಡಿವುದು ಮತ್ತೊಂದೆಡೆಯೆನೆ ಯಾವುದು ಸಿದ್ಧಾಂತ
ಮೊತ್ತವ ನೂಕುತ ಕಿಚ್ಚಡಿ ವೇದಕೆ
ಮೊತ್ತವ ಕೊಳ್ಳುತ ಒಂದೇ ಅರ್ಥವ ಜೋಡಿಸಿ ಇದು ನೀತಿ ೮

ಬೌದ್ಧರು ಒಪ್ಪನು ಶ್ರುತಿಗಳ ದೇವನ
ವೇದವ ಒಪ್ಪುವ ಮಾಯಾವಾದಿಯ ಬ್ರಹ್ಮನು ಸೊನ್ನೆಯಿಹ
ವೈದಿಕ ವೇಷದ ಬೌದ್ಧನ ವಾದವೆ
ಶೋಧಿಸಿ ನೋಡಲು ಮತ್ತೇನಿಲ್ಲವು ಚಿಂತಿಸೆ ಸರಿಯಿಷ್ಟೆ ೯

ತರತಮ ಬಹುವಿಧ ಭೋಗವ ಮುಕ್ತಿಲಿ
ಇರುವುದು ಸಿದ್ಧವು ಶೃತಿಗಳ ನಂಬಲು ಜೀವರ ಭಿನ್ನತೆಯು
ಸ್ಥಿರವೇ ಆಯಿತು ಇದರಿಂ ಮುಕ್ತಲಿ
ಪರಿ ಪರಿ ಬಗೆತಾ ವಿದಿತವೆ ಜಗದಲಿ ಭೇದವೆ ಸರ್ವತ್ರ ೧೦

ನಾಸ್ತಿಕ ವಾದವ ತಳ್ಳಿರಿ ಆಚೆಗೆ
ನಾಸ್ತಿಕ ಬಂದನೆ ತಂದೆಯು ಇಲ್ಲದೆ ಕಾರ್ಯವು ಜಗವಿರಲು
ನಾಥನು ಓರ್ವನು ಇರಬೇಕಲ್ಲವೆ
ಆತನು ನೊಡಿಹ ಜ್ಞಾನಿಗಳಿಲ್ಲವೆ ಪೊಗಳವೆ ಗೋತತಿಯು ೧೧

ಪ್ರಕೃತಿ ವಿಕಾರದ ಜಗವಿದು ವಿದಿತವೆ
ವಿಕಲ ವಿಶೇಷದ ಜೀವನು ಹಾಗೆಯೆ ಉಭಯರ ಆಳುವನು
ವಿಕಲ ವಿವರ್ಜಿತ ಸಕಲ ಗುಣಾರ್ಣವ
ಸಕಲ ನಿಯಾಮಕ ಸರ್ವ ಸಮರ್ಥನು ಇರಲೇ ಬೇಕಷ್ಟೆ ೧೨

ನಿತ್ಯವು ಈತ್ರಯ ಸಿದ್ಧವು ಆದರೆ
ನಿತ್ಯ ಪರಸ್ಪರ ಸಂಬಂಧ ತ್ರಯ ಜ್ಞಾನವೆ ಪುರುಷಾರ್ಥ
ಉತ್ತಮ ನೊಬ್ಬನು ಅಧಮರು ಇಬ್ಬರು
ಮತ್ತಿವರಲಿ ಹಾಗಧಮನು ಜೀವನು ಚೇತನ ಪ್ರಕೃತಿ ವರ ೧೩

ಸರ್ವ ಸ್ವತಂತನು ಒಬ್ಬನೆ ಇರದಿರೆ
ಸರ್ವಾ ಭಾಸವೆ ಜಗವಿದು ಆಹುದು ಪ್ರಭು ದ್ವಯ ಕೂಡುವುದೆ
ಸರ್ವಗ ಶಾಶ್ವತ ಪೂರ್ಣಾ ನಂದನು
ಸರ್ವ ವಿಚಿತ್ರನು ಮುಕ್ತಿದನಿರದಿರೆ ಪ್ರಭು ಅವನೆಂತಾಹ ೧೪

ಶುರುಕೊನೆ ಮಧ್ಯವು ಇದ್ದ ದೇವಗೆ
ಬರುವನೆ ಹೊಸ ಹೊಸ ದೇವನು ಪ್ರತಿಪ್ರತಿ ಕಲ್ಪದಿ ಯೋಚಿಸಿರಿ
ಇರದಿರೆ ಸಕಲೈಶ್ವರ್ಯವು ಆತಗೆ
ತರುವನು ನಂದದ ಸೃಷ್ಠಿಯ ಹೇಗವ ವರಸಮರಿಲ್ಲವಗೆ ೧೫

ಸುಳ್ಳಿರೆ ಜಗವಿದು ಪಾಲಿಪ ದೊರೆಯದ
ಕಳ್ಳನೆ ಅಲ್ಲವೆ ಅಷ್ಟಕರ್ತುತ್ವವು ಕೂಡುವ ದ್ವೇಗಿನ್ನು
ಎಲ್ಲಾ ಜಗವಿದು ನಿತ್ಯಾ ನಿತ್ಯವು
ಎಲ್ಲಾ ಸತ್ಯವೆ ಶ್ರುತಿಗಳ ನುಡಿಗಳು ಭೃತ್ಯರು ಜೀವಗಣ ೧೬

ನಿತ್ಯವು ಪ್ರಕೃತಿಯು ಜೀವರು ಈಶನು
ಸತ್ಯವು ಇದುಯೆನೆ ಪಂಚಸುಭೇದವು ನಿತ್ಯವೆ ಎಲ್ಲೆಲ್ಲು
ನಿತ್ಯ ಸುಖಂಗಳ ಬಯಸುವ ನಮಗವು
ಹತ್ತವು ಕಾರಣ ಸರ್ವಸ್ವತಂತ್ರನು ದೇವನೆ ಸತ್ಯವಿದು ೧೭

ಚೇತನ ಪ್ರಕೃತಿಯೆ ಲಕ್ಷ್ಮಿಯು ತಿಳಿವುದು
ಆತನ ರಾಣಿಯು ನಿತ್ಯಸುಮುಕ್ತಳು ನಿತ್ಯಾವಿಯೋಗಿನಿಯು
ಚೇತನ ನಿಚಯದ ಚೇತನ ಹರಿ ಇಹ
ಆತನೆ ದೊರೆ ಜಗ ಜಂಗಮ ಸ್ಥಾವರ ಸತ್ತಾದಾಯಕನು ೧೮

ದೋಷ ವಿದೂರ ಅಶೇಷ ಗುಣಾರ್ಣವ
ದಾಸ ಪೋಷನಿಜ ಮುಕ್ತಿದ ನಿರದಿರೆ ಭಜಿಸುವದೇಕವನ
ಶ್ರೀಶನು ಬಿಡೆ ಜಡ ಚೇತನ ಚೇಷ್ಟೆಯು
ಲೇಶವು ಸಾಗದು ಸ್ವಾಮಿಯೆಂದು
ನಿಹ ಉಲ್ಲಾಸದಿ ಭಜಿಸುವುದು ೧೯

ಪರಿಮಿತ ಶಕ್ತನು ದೇವನು ಇದ್ದರೆ
ಪರಿಮಿತ ಜೀವರ ತೆರವೇ ಆಹನು ಕಾರಣ ನಿಸ್ಸೀಮ
ಹರಿಗುಣವಗಣಿತ ಸಿಗ ಸಾಕಲ್ಯದಿ
ನಿರುಪಮ ಸುಖಜ್ಞಾನಾತ್ಮಕ ವಿಭುವರ ಅನಾದಿ ಸಿದ್ಧವಿದು ೨೦

ಪ್ರಾಕೃತ ಗುಣಗಣ ವರ್ಜಿತ ದೇವನ
ಪಾಕೃತ ಕರಣವು ನೋಡುವ ದಾಗದು
ಜ್ಞಾನ ಸುದೃಷ್ಟಿಗೆ ಗೋಚರನು
ಸ್ವೀಕೃತ ನಾದರೆ ಜೀವನು ಹರಿಯಿಂ
ತಾಕಿಸಿ ದೃಷ್ಟಿಗೆ ತನ್ನನೆ ತೋರುವ ಭಕ್ತರ ಬಾಂಧವನು ೨೧

ತರತಮ ಜ್ಞಾನದಿ ಗುಣ ಉತ್ಕರ್ಷವು
ಬರುವುದು ಕಾರಣ ತಿಳಿಯುತ ಹರಿಪರ ಮೋಚ್ಛನು ಹೌದೆನ್ನಿ
ಅರಿವುದು ಅತಿಪರಿ ಪಕ್ವದ ಭಕ್ತಿಯ
ತರುವುದು ಕ್ರಮದಲಿ ಸಿದ್ಧಿಸೆ ಭಕ್ತಿಯು ಮಾಧವ ಮೆಚ್ಚುವನು ೨೨

ವೇದಗಳಿಂದಲೆ ದೇವನು ವ್ಯಕ್ತನು
ವೇದಗಳಿಂದಲೆ ಧರ್ಮಾಧರ್ಮವಿ ವೇಕವು ಸರಿಯಷ್ಟೆ
ವೇದ ನಿಜಾರ್ಥವೆ ಸಚ್ಛಾಸ್ತ್ರಂಗಳು
ಮೋದವೆ ದೊರಕದು ಬಿಟ್ಟರೆ ಇವುಗಳ ಸಾದರ ಭಜಿಸುವುದು ೨೩

ಬಿಂಬನು ಹರಿ ಪ್ರತಿ ಬಿಂಬನು ಜೀವನು
ಬಿಂಬಾಧೀನವು ಪ್ರತಿ ಬಿಂಬನ ಚೇಷ್ಠೆಗಳೆಂತರಿತು
ಉಂಬುತ ಮುದದಿಂ ಸುಖದುಃಖಂಗಳ
ಬಿಂಬಕ್ರಿಯೆಯೆನುಸಂಧಾನವ ಗುರುವಿಂದರಿತು ಸಮರ್ಪಿಸಿ ೨೪

ಮೆಚ್ಚುಲು ಮಾಧವದಾವುದಸಾಧ್ಯವು
ಅಚ್ಚುತನೊಲಿಮೆಗೆ ಹೆಚ್ಚಿದುದೇನಿದೆ ಕೊಚ್ಚುತಕಲಿ ಸೊಂಕು
ತಚ್ಛಭಿಮಾನ ಫಲೇಚ್ಛೆಯ ತ್ಯಜಿಸುತ
ಕಚ್ಛಪ ನೊಲಿಮೆಗೆ ವಿಧಿಯ ನಿಷೇಧವ ಮರೆಯದೆ ಗೈಯುತಲಿ ೨೫

ಹರಿ ಪರ ಮೋಚ್ಚನು ವರಸಮರಿಲ್ಲವು
ಸಿರಿ ವರ ವಿಧಿಪಿತ ಸೃಷ್ಟ್ಯಾದ್ಯಷ್ಟಸು ಕರ್ತನು ವಿಭುವೆಂದು
ನಿರುಪಮ ನಿಖಿಳಾಗಮ ಪ್ರತಿ ಪಾದ್ಯನು
ಸ್ವರತ ಸ್ವತಂತ್ರನು ಪೂರ್ಣಾನಂದನು ಎನ್ನುತ ಸಾರುತಲಿ ೨೬

ಸಾಮನು ಸರ್ವರ ಬಿಂಬನು ಸರ್ವಸು
ನಾಮನು ಸರ್ವಾಧಾರನು ಜಡಜಂಗಮ ವಿಲಕ್ಷಣನು
ಭೂಮನು ಭಕ್ತ ಪ್ರೇಮಿಯು ಸದ್ಗುಣ
ಧಾಮನು ಪೂರ್ಣನು ನಿಜ ಸುಖ ಮುಕ್ತಿದನೆನ್ನುತ ಸಾರುತಲಿ ೨೭

ಸಿರಿ ವಿಧಿ ಪರಿಸರ ವಿಪಶಿವ ಪ್ರಮುಖರು
ಪರಿವಾರವು ನಿರವದ್ಯನು ಮುಕ್ತಾ ಮುಕ್ತರ ನಾಯಕನು
ಉರುಗಾಯನ ಜಗದೊಳ ಹೊರವ್ಯಾಪ್ತನು
ಪರಿಮರ ಸ್ವಗತ ಭೇದ ವಿವರ್ಜಿತನೆಂಬುದ ಸಾರುತಲಿ ೨೮

ತರತಮ ಪಂಚಸುಭೇದವು ನಿತ್ಯವು
ನಿರುತದಲುಂಬುವ ಸಾರವೆ ದುಃಖ ನಿರ್ಲೇಪನು ಅದ್ಭುತನು
ಅರಿಯರು ಯಾರೂ ಇವನೇ ವಲಿಯದೆ
ಪುರುಷೋತ್ತುಮ ಸಾಕಲ್ಯದವಾಚ್ಯನು
ಎಂದು ಡಂಗುರ ಹೊಡೆಯುತ ೨೯

ಗುರುವಿನ ದ್ವಾರವೆ ಹರಿತಾ ವಲಿಯುವ
ಗುರುವೆನೆ ಮುಖ್ಯದಿ ಮುಖ್ಯ ಪ್ರಾಣನೆ ಸರಿಸಿರಿ ಯೆಂತೆಂದು
ಗುರುಗಳು ಹಿರಿಯರು ಎಲ್ಲಾ ಕ್ರಮದಲಿ
ಮೂರೋಂದು ತ್ಯಾಗವ ಫಳಿಸದೆಲೆಂದಿಗು
ಮಧ್ವರಿಗೊಂದಿಸಿ ಮುದದಿ ೩೦

ಅನುಭವವಿಲ್ಲದ ಜ್ಞಾನವು ವಣವಣ
ಮನದೊಳು ಗುಣಿಸಿರಿ ತಿಳಿವಿನ ತಿರುಳನು
ಸಾಧನೆ ಇದು ಖರೆಯ

ಚಿನುಮಯ ನೊಲಿಸಲ್ ಮನೆಧನ ಬೇಡವು
ತನುಮನೆ ವಿಷಯಗಳಿಂದಲೆ ಪೂಜಿಪ ಕ್ರಮದಿಂಯಜಿಸುತ ೩೧

ಕಲಿಯುಗವಿದು ವರ ಸುಲಭದಿ ಸಾಧನೆ
ವಲಿಯುವ ಬೇಗನೆ ನಾಮ ಸ್ಮರಣೆಗೆ ಭಜಿಸಿರಿ ಹರಿನಾಮ
ವಳದಾರಿಯು ಸರಿ ಕ್ರಮದಿಂ ಪಾಡಲು
ಮುಳುಗುತ ಭಕ್ತಿಯ ಕಡಲೊಳ್ ನಿಜಹರಿ ದಾಸರು ದೀಕ್ಷೆಯಲಿ ೩೨

ಕವಿಗುರು ರಾಜರ ಚರಣದಿ ಬಾಗುತ
ಪವನ ಮತಾಂಬುಧಿ ಸೋಮನು ಜಯಮುನಿ
ಹೃದಯಗ ವಾಯುವಲಿ
ಅವಿರತ ನಲಿಯುವ ಶ್ರೀ ಕೃಷ್ಣವಿಠಲನು
ತವಕದಿ ವಲಿಯುವ ಗ್ರಹಿಸಲ್ ಈ ಪದ ಜಯ ಜಯವೆನ್ನುತ ೩೩

## ಶ್ರೀ ಶ್ರೀನಿವಾಸ ಕಲ್ಯಾಣ

## ೧೦೮

### ಲಾವಣಿ

ಮದುವೆಯ ಮಾಡಿಕೊಂಡ ಮುದದಿಂ ಮಾಧವ ಪ

ಮುದಮೋದ ಘನ ಸುಖ ಭಕ್ತರಿಗೀಯಲು ಅ.ಪ.

ದೇವ ದೇವೇಶನು ಯಾರೆಂತೆಂದು
ಕೋವಿದ ಭೃಗುಮುನಿ ಹುಡುಕುತ ಬಂದು
ಪಾರ್ವತಿ ಪತಿಹರ ವಿಧಿಗಳ ಜರಿದು
ಧಾವಿಸಿ ಹರಿಯೆಡೆ ಬರ್ಪುದ ಕಂಡು
ಭಾವಜ ಪಿತರತಿ ಸೋಗನು ಹಾಕೆ
ದೇವನ ಮಾಯೆಯು ಮುಸುಕಲು ಮುನಿಗೆ
ಈ ವಿಧ ಸಲ್ಲದು ಹರಿಗೆಂತೆಂದು
ಪಾವನ ನೆದೆಯನು ವದ್ದನು ದುಡುಕಿ ೧

ಭರದಿಂ ಮಾಧವ ಚರಣವ ತೊಳೆದು
ಹರಿಸುತ ದುಗುಡವ ಭಕ್ತನಿಗಂದು
ಕರದಿಂ ದೊತ್ತುತ ಚರಣದ ಕಣ್ಣು
ತರಿಯಲು ಹೆಚ್ಚಿನ ಸಾಧನೆ ಮುನಿಗೆ
ಹರುಷದಿ ತೆರಳಿದ ಋಷಿವರ ತಾನು
ಅರಿಯುತ ಕಾಂತನ ಮನವಂ ಸಿರಿಯು
ಸರಸರ ಕೋಪವ ನಟಿಸುತ ತಾನು
ಬಿರುಸಿನ ನುಡಿಗಳ ಆಡಿದಳಂದು ೨

ಏನಿದು ಮುನಿ ವಿಪರೀತವು ಥರವೆ
ನಾನಿಹ ಸ್ಥಳವನು ವದೆಯುವದೆಂದು
ಮಾನಿನಿ ಗೌರವ ಕಾಯದೆ ಕ್ಷಮಿಸಿಹೆ
ನಾನಿಹೆ ಬರಿಸತಿ ಭಕ್ತರೆ ಹೆಚ್ಚು
ಕಾನನ ಸೇರುವೆ ನನಗೇಕೀ ಮನೆ
ಮಾನವು ಹೋಯಿತು ಯನ್ನಲು ಸತಿಯು
ಮೌನವ ಧರಿಸಲು ಗಂಡನು ನಗುತ
ದೀನರ ಪೊರೆಯಲು ಬಂದಳು ಭುವಿಗೆ ೩

ಗಂಡನ ಬಿಡುವಳೆ ಲಕ್ಷ್ಮೀದೇವಿ
ಪುಂಡರ ಮಾತಿದು ನಂಬಿಲುಬೇಡಿ
ಗಂಡನ ಮನತೆರ ನಟಿಸಿದಳಷ್ಟೆ
ಗಂಡನು ಹಾಗೆಯೆ ತೊರೆಯುತ ಧಾಮ
ಕುಂಡಿಲಿ ಗಿಳಿಯುತ ಅಲೆಯುತ ಹೊರಟ
ಕಂಡಲ ಗಿರಿಯೆಡೆ ನಡೆತಾತಂದ
ಕಂಡನು ಹುತ್ತವ ಒಂದೆಡೆ ತಾನು
ಕುಂಡಲಿಗೊಡೆಯನು ನೆಲಸಿದನಲ್ಲಿ ೪

ಪಾವನ ಗಿರಿಯದು ಕೇಳಿರಿ ಎಲ್ಲ
ದೇವನ ಖಗಮೃಗ ಬಳ್ಳಿಗಳಾಗಿ
ದೇವ ಸಮೂಹವು ಸೇವಿಪರಲ್ಲಿ

ಕೋವಿದ ಋಷಿಗಳು ಧ್ಯಾನಿಪರ್ರೈಯ
ಭಾವಸು ಭಕ್ತಿಲಿ ನೋಡಲು ಗಿರಿಯ
ಜೀವರ ಪಾಪಗಲೆಲ್ಲಾ ನಾಶ
ನೋವನು ಕಾಣರು ಹರಿಕೃಪೆ ಮುಂದೆ
ದೇವನು ಇರೆ ಇದೆ ಭೂವೈಕುಂಠ ೫

ಕೃತಯುಗದಲ್ಲಿದು ವೃಷಭಾಚಲವು
ಗತಿಸಿದ ರಕ್ಕಸ ಹರಿಯಿಂತೆಂದು
ಸುತನಂ ಪಡೆಯಲು ಅಂಜಿಲಿದೇವಿ
ಅತಿ ತಪಗೈದಳು ತ್ರೇತೆಯಲೆಂದು
ಮತಿಯುತಳಾಕೆಯ ನಾಮವೆ ಆಯ್ತು
ಉತ್ತಮ ನೆಂಬುವ ಗರ್ವವ ನೀಗಿ
ಸ್ತುತಿಸಿದ ಶ್ವಾಸನ ಶೇಷನು ಎಂದು
ಇತ್ತರು ಮೂರಲಿ ಶೇಷನ ನಾಮ ೬

ವೆಂಕಟ ಗಿರಿಯಿದು ಕಲಿಯುಗದಲ್ಲಿ
ಸಂಕಟ ನೀಗಿದ ಮಾಧವನಿಲ್ಲಿ
ಸಂಕಟ ನೀಡುವ ಪಾಪಗಳನ್ನು
ಶಂಕರ ಹರಿತಾ ಕಡಿಯುವನೆಂದು
ವೆಂಕಟ ನೆನಿಸುತ ಮೆರೆಯುವ ನಿಲ್ಲಿ
ಶಂಕೆಯ ಮಾಡದೆ ಶರಣೆಂದಲ್ಲಿ
ಪಂಕಜ ನೇತ್ರನು ಪೊರೆಯುವನಿಲ್ಲಿ
ಮಂಕುಗಳಾಗದೆ ಭಜಿಸಿರಿ ಬೇಗ ೭

ಎದೆಂದಗಲದ ಇಂದಿರೆ ಕೆರಳೆ
ತಂದೆಯು ತೊರೆದನೆ ನಿಜ ವೈಕುಂಠ
ಪೊಂದಿಹ ಹುತ್ತವ ಏನಿದು ಛಂದ
ಕಂದನು ನಾನಿಹೆವೆನ್ನುತ ಬೊಮ್ಮ
ತಂದೆಗೆ ಕ್ಷೀರವ ಕರೆಯಲುನಿತ್ಯ

ಭಂದದ ಗೋತನು ಧರಿಸುತ ಶಿವನ
ಕಂದನ ಗೈಯುತ ಮಾತೆಯ ಸಹಿತ
ಬಂದನು ಚೋಳನ ಅರಮನೆಯೆಡೆಗೆ ೮

ಕೊಳ್ಳಲು ರಾಣಿಯು ಸೇರುತ ಗೋಷ್ಠಿ
ನಲ್ಲಗೆ ಪ್ರತಿದಿನ ಕ್ಷೀರವ ಸುರಿಸೆ
ಇಲ್ಲವೆ ಆಗಲು ರಾಣಿಗೆ ಹಾಲು
ಗೊಲ್ಲನ ಶಿಕ್ಷಿಸಿ ಬೈಯಲು ಬಹಳ
ಗೊಲ್ಲನು ಪತ್ತೆಯ ಹಚ್ಚುತ ಚರ್ಯೆ
ಕೊಲ್ಲಲು ಗೋವನು ಕೊಡಲಿಯನೆತ್ತೆ
ಬಲ್ಲಿದ ತಡೆಯಲು ಶಿರವನು ಒಡ್ಡೆ
ನಿಲ್ಲದೆ ಗಗನದಿ ಚಿಮ್ಮಿತು ರಕ್ತ ೯

ನೋಡುತ ಮಡಿಯಲು ಗೊಲ್ಲನು ಅಲ್ಲೆ
ಓಡುತ ಗೋಗಣ ಹಟ್ಟಿಯ ಸೇರೆ
ಜಾಡನು ಪಿಡಿಯುತ ಚೋಳನು ಬರಲು
ಕೇಡಿಗ ನೃಪನೆ ಪಿಚಾಚಿಯು ಆಗೆನೆ
ಬಾಡಿದ ಮೋಗದಿಂ ರಾಜನು ನಮಿಸಿ
ಬೇಡಲು ಕ್ಷಮೆಯನು ಬಹುಪರಿಹರಿಯ
ನೀಡಿವಿಶಾಪವ ವೆಂಕಟ ಕರುಣಿ
ಆಡಲು ತೊಡಗಿದ ಈ ವಿಧ ಮುಂದೆ ೧೦

ಆದುದು ಆಯಿತು ಚೋಳನೆ ಕೇಳು
ಸಾದರದಿಂದಲಿ ಭುಂಜಿಸು ಕರ್ಮ
ಪದ್ಮಾವತಿ ಯೆಂಬಾಕೆಯ ಮುಂದೆ
ಮೋದದಿ ಮುದುವೆಯ ನಾಗುವೆ ಆಗ
ಭೂಧವ ಮಾವನು ನೀಡುತ ಮಕುಟ
ನಾಧರಿಸುವೆನದ ಪ್ರತಿ ಕವಿ ವಾರ
ನಾಧರಿಸುವಾಗಿಲ್ಲದೆ ಬಾಧೆ
ಪೊಂದುವಿ ಕಲಿಕೊನೆ ಪೂರ್ವಾವಸ್ಥೆ ೧೧

ಪೇಳತ ಲೀಪರಿ ಚೋಳಗೆ ದೇವ
ಲೀಲೆಯ ತೋರಲು ಘಾಯವ ಪಿಡಿದು
ಕೇಳಲು ಔಷಧ ಗುರುವನು ಸ್ಮರಿಸಿ
ಆಲಸ್ಯಗೈಯದೆ ಬಂದವ ನುಡಿಯೆ
ಮೂಲಿಕೆ ಹುಡುಕುತ ಗಿರಿಯಲಿ ಅಲೆಯೆ
ಶೈಲದ ಸ್ವಾಮಿ ವರಾಹನು ಸಿಗುತ
ಕೇಳಲು ವೆಂಕಟ ಕಥೆ ವಿಸ್ತಾರ
ಪೇಳಲು ತಬ್ಬಿದ ಕ್ರೋಡನ ಚತುರ ೧೨

ಏನಿದು ಬಹು ವಿಪರೀತವು ಪೇಳಿ
ಶ್ರೀನಿಧಿ ಸತಿ ಬಿಟ್ಟಲೆಯುವುದೆಂತು
ಪೂರ್ಣಾನಂದಗೆ ಗೊಲ್ಲನ ಪೆಟ್ಟೆ
ಚಿನ್ಮಯ ನೆತ್ತರು ಚಿಮ್ಮುವದುಂಟೆ
ಅನ್ನವೆ ಕ್ಷುಧೆ ತೃಷೆ ದೂರಗೆ ಹಾಲು
ಅನ್ಯರು ವೈದ್ಯರೆ ಧನ್ವಂತ್ರೀಗೆ
ಕಾಣನೆ ಔಷಧಿ ಪೂರ್ಣಪ್ರಜ್ಞ
ತಾನಿರೆ ವೆಂಕಟ ತಿಳಿಯನೆ ಕ್ರೋಡ ೧೩

ಲೀಲೆ ಇದೆಲ್ಲವು ಕೊಡುವದವಗೆ
ಬೀಳಿಸಿ ಮೋಹದಿ ಕುಜನರ ತರಿವ
ಪಾಲಿಪ ಸುಜನರ ಬೀರುತ ಜ್ಞಾನ
ಲೀಲಾಮಯನವ ಸರಿಯೆಂತೆನ್ನಿ
ಕೇಳಲು ಕ್ರೋಡನ ವಾಸಿಸೆ ಜಾಗ
ಕೇಳುವರಾರ್ಯೆ ನೀನಿರೆ ಯನ್ನ
ಬೀಳುವರೆಲ್ಲರು ನಿನ್ನಡಿಭರದಿ
ಧಾಳಿಯೆ ನನ್ನಯ ಪ್ರಭುತನವೆಂದ ೧೪

ಮುಂದೆಯೆ ನೀನಿರು ನಾಹಿಂದಿರುವೆ
ಬಂದವರೆಲ್ಲರು ನಿನಗೊಂದಿಸುತ
ವಂದಿಸಲೆನ್ನದು ವಲಿಯುವೆನಾಗ

ಮುಂದಿಹ ನಿನಗೇ ಮೊದಲಲಿ ಪೂಜೆ
ಛಂದದಿ ಶಾಸನ ಹೀಗೇ ಬರದು
ಮಂದಿರ ಕೆಡೆ ಕೊಡು ಎನ್ನಲು ನಗುತ
ನಂದದಿ ನೀಡುತ ಹಾಗೆಯೆ ಎಲ್ಲ
ಕಂದನ ಸೇವಿಸೆ ಬಕುಳೆಯ ಕೊಟ್ಟ ೧೫

ತಗ್ಗಿರೆ ಸಾಧನ ವೆಗ್ಗಳಗೈವ
ವೆಗ್ಗಳ ಸಾಧನೆ ತಗ್ಗಿಪ ದೈವ
ಹಗ್ಗವು ಸರಿಇವ ನಿಚ್ಚೆಯು ಕೇಳಿ
ಅಗ್ಗದ ಪ್ರಭುವರ ಇವತಾನಲ್ಲ
ತಗ್ಗಿಸಿ ವಿಷಯ ಬಗ್ಗಿಸಿ ಮನವನು
ಹಿಗ್ಗುತ ಭಜಿಸಲು ಚರಣ ಸರೋಜವ
ತಗ್ಗದ ಸೌಖ್ಯವ ನೀಡುತ ಕಾವ
ಮುಗ್ಗದೆ ಭವದಲಿ ಭಜಿಸಿರಿ ಬೇಗ ೧೬

ಬಕುಳೆ ಯಶೋದೆಯು ಪೂರ್ವದಿ ಕೇಳಿ
ರುಕ್ಮಿಣಿ ಮದುವೆಯ ನೋಡದಲಾಕೆ
ಉಕ್ಕಿದ ಮೋಹದಿ ಬಯಸಲು ನೋಡೆ
ಭಕ್ತಳ ಬಯಕೆಯ ಸಿದ್ಧಿಸೆ ದೇವ
ಬಕುಳೆಯ ಜನ್ಮದಿ ನಿಂದಿಹಳೆಂದು
ಅಕ್ಕರೆಯಿಂದಲಿ ತಾ ಕರತಂದು
ಚೊಕ್ಕಸುಕಂದನ ತೆರದಲಿ ನಿಂದ
ಭಕ್ತಿಲಿ ಸೇವೆಯ ಗೈದಳು ಬಕುಳೆ ೧೭

ನಾರಾಯಣ ಪುರ ನಾಮದ ನಗರಕೆ
ದೊರೆಯೆನಿಸಿದ್ದನು ಆಕಾಶರಾಯ
ಕೊರಗುತ ಬಹುದಿನ ಸುತರಿಲ್ಲೆಂದು
ಧರಣಿಯ ಶೋಧಿಸೆ ಯಾಗಕ್ಕೆಂದು
ದೊರಕಲು ಕಮಲವು ದೊಡ್ಡದು ಒಂದು

ತೆರೆಯುತ ನೋಡಲು ಶಿಶು ತಾನೊಂದು
ಬೀರುತ ಕಾಂತಿಯ ಕಾಣಿಸಲಂದು
ದೊರಕಿತು ಕನ್ಯಾಮಣಿಯೆಂತೆಂದು ೧೮

ಅರಮನೆ ಗಾ ಶಿಶು ಹರುಷದಿ ತಂದು
ಸರಸಿಜಮುಖಿ ಪದ್ಮಾವತಿಯೆಂದು
ಕರೆಯುತ ರಾಣಿಯು ಸಾಕುತ ಬಂದು
ವರುಷಗಳುರುಳಲು ಕಾಲದಿ ಕನ್ಯೆ
ಸಿರಿತೆರ ಲಕ್ಷಣ ಗಣದಿಂ ಬೆಳೆಯೆ
ವರಿಸಲು ಈಕೆಯ ನರರಿಂದಾಗದು
ಹರಿಯೇ ಸರಿವರವೆನ್ನುತ ಮನದಿ
ಅರಸುತ ವರನಂ ಬಳಲಿದ ಧೊರೆಯು ೧೯

ವೇದವತೀ ಈಕೆಯು ತ್ರೇತೆಯಲೆನ್ನಿ
ಮಾಧವ ಮನತೆರ ತೆರಳುವ ಸೀತೆ
ಮೋದದಿ ಸೇರಲ್ ಗಿರಿ ಕೈಲಾಸ
ಖೇದಗಳುಣ್ಣುತ ಲಂಕೆಯಲಿದ್ದು
ಸಾಧಿಸಿ ಖಳರವಿನಾಶವನಲ್ಲಿ
ಮೇದಿನಿ ಸುತೆಯಳ ಸೇವಿಸಿ ಬಹಳ
ಶ್ರೀಧರನನ್ನೇ ವರಿಸಲು ಬಯಸೆ
ಮೋದದಲಾಗಲಿಯಂದಳು ಸೀತೆ ೨೦

ಶಕ್ರನು ಶಿಖಿಸಹ ಇದ್ದಹಾಗೆ
ಲೋಕಕೆ ತೋರಲು ಸೀತೆಯ ರಾಮ
ಚೊಕ್ಕ ಪರೀಕ್ಷೆಯ ನಡಿಸಲು ಶಿಖಿಯಲಿ
ತಕ್ಕಣ ಬಂದರು ಸೀತೆಯರಿಬ್ಬರು
ಅಕ್ಕರೆಯಿಂದಲಿ ನುಡಿಯುತ ಕಥೆಯು
ಸಕ್ಕದಿ ನಿಂತಿಹ ಈಕೆಯ ನೀನು
ಈಕ್ಷಿಸಿ ಪಿಡಿಕೈಯೆನ್ನಲು ಸೀತೆ
ರಕ್ಕಸ ವೈರಿಯು ಮಡದಿಗೆ ನುಡಿದ ೨೧

ಒಂದೇ ಬಾಣವು ಒಂದೇ ವಚನವು
ಒಂದೇ ನಡತೆಯು ಒಬ್ಬಳುಮಡದಿ
ಇಂದೆನಗೆಂಬುದು ತಿಳಿಯದೆ ನಿನಗೆ
ಛಂದದಿ ಕಲಿಯಲಿ ನಡಿಸುವೆ ಬಯಕೆ
ಇಂದ್ರನು ಅಗ್ನಿಯ ಪುಟ್ಟಲಿ ವಡಲಲಿ
ಇಂದಿನ ಯುಗದಲಿಯನ್ನಲು ರಾಮ
ವಂದಿಸಿ ನಡೆದರು ಎಲ್ಲರು ಆಗ
ಹಿಂದಿನ ವರತೆರ ಬಂದಿಹಳೀಗ ೨೨

ಭೂಸುರ ಪೊಟ್ಟಲಿ ಪುಟ್ಟುತ ಹಿಂದೆ
ಶ್ರೀಶನ ಮಡದಿಯ ತಪದಿಂ ಮೆಚ್ಚಿಸಿ
ಭಾಷೆಯ ಪಡದಿರೆ ಸವತಿಯ ಪಟ್ಟಕೆ
ಘಾಸಿಯ ನೀಡುತ ರಾವಣ ಬಂದು
ಆಶಿಸಿ ಸಂಗವ ದುಡುಕುತ ನುಡಿಯೆ
ರೋಷದಿ ಶಾಪವ ನೀಡಿದಳೀಕೆ
ನಾಶಕೆ ಕಾರಣಳಾಗುವೆ ನಾನೆ
ಭ್ರಷ್ಟನೆಯೆನ್ನುತ ಶಿಖಿ ಸೇರಿದಳು ೨೩

ಲಕ್ಷ್ಮೀ ವಿಭೂತಿಯೆ ಇವಳೆಂತೆನ್ನಿ
ಲಕ್ಷಣ ನಿಭಿಡಿತಳಾಗಿಹ ಕನ್ಯೆ
ಕುಕ್ಷಿಯು ತೆಳ್ಳಗೆ ಸಿಂಹಸುಮಧ್ಯಮೆ
ಪಂಕಜ ನೇತ್ರೆಯು ಪಂಕಜವದನೆಯು
ಪಂಕಜ ಗಂಧಿ ಭುಜಂಗ ಸುವೇಣಿ
ಶಂಕರ ನಗೆನುಡಿ ಗುರುಲಾವಣ್ಯ
ಶಂಖ ಸುಪದ್ಮಾರೇಖೆಗಳಿಂದ
ಲಂಕೃತ ಅಂಗೈ ಪಾದಗಳ್ವಾಗೆ ೨೪

ಕಾಮನ ಬಿಲ್ಲನು ಹಳಿಯುವ ಹುಬ್ಬು
ಸೋಮನ ಮೀರಿಪ ಯುಗಯುಗ ಕಾಂತಿ
ಸಾಮಜಗಮನೆ ರಂಭೋರುಗಳು

ಕೋಮಲ ಚಂಪಕ ನಾಶಿಕ ತುಟಿಗಳು
ಕಾಮದ ಪೀವರ ಕುಚಯುಗಹಾಗೆ ಸು
ನೇಮದಿ ಬೆಳದಿಹ ಪಲ್ಗಳ ರಾಜಿ
ವಾಮನಿತಂಬಜಘನದ್ವಯವ
ಭಾಮೆ ಸಫಾಲದಿ ಮೆರೆದಳು ತಾನು ೨೫

ಈಕೆಯು ಕಮಲೆಯ ತೆರೆದಿಂ ಬೆಳೆದು
ಸಾಕಲು ಕರೆದಳು ಕನಕಸುವೃಷ್ಟಿ
ಕಾಕನು ಕಾಣದೆ ರಾಜನು ಮೆರೆದ
ನಾಕವೆ ಎನಿಸಿತು ರಾಜನಮನೆಯು
ಜೋಕೆಯಲೊಂದಿನ ಸಖಿಯರ ಕೂಡಿ
ಈಕ್ಷಿಸೆ ಪುರವುದ್ಯಾನವ ಕುವರಿ
ಸೌಖ್ಯದಿ ತೆರಳುತೆಯಿರುತಿರುವಲ್ಲಿ
ನಾಕದ ನಾರದ ವದಗಿದನಲ್ಲಿ ೨೬

ಹರಿಕಾರ್ಯಾಂಗನು ಬಂದನು ಎನ್ನುತ
ಗುರು ಸತ್ಕಾರಂಗಳಗೈದು–ಆ
ತುರ ತೋರಲು ತಿಳಿಯೆ ಭವಿಷ್ಯ
ಕರಗಳ ನೋಡುತ ತೂಗುತ ತಲೆಯು
ಸಿರಿತೆರ ಲಕ್ಷಣ ಕಾಣುವೆನಮ್ಮ
ಹರಿಯೇ ಸರಿ ವರಿಸಲ್ ನಿನ್ನ
ಅರಸುತ ಬರುವನು ತಾನೆ ನಿನ್ನ
ಬರಿ ಮಾತಲ್ಲವು ನೋಡೆಂತೆಂದ ೨೭

ಪೇಳುತ ಲೀ ಪರಿ ಹೊರಡಲ್ ಮುನಿಯು
ಲಾಲಿಸಿ ಮನದಲಿ ಹಿಗ್ಗುತ ಕಮಲೆ
ಪೇಳಿಹನೀತನು ಮನದಿಹ ಬಯಕೆ
ಆಳುವ ಹರಿಯೇ ಎನ್ನನು ಸತ್ಯ
ಕಾಲವು ಕಲಿಯಿದು ಯೋಚಿಸೆ ಹೀಗೆ

ಪಾಲಿಪ ನೆನ್ನನು ಧೊರೆ ತಾ ಬಂದು
ಬೀಳುವ ಕಣ್ಣಿಗೆ ಹೇಗೆಂತೆಂಬೆ
ಲೀಲೆಯ ಕಾಯುತಲಿದ್ದಳು ನೆನೆದು ೨೮

ಹಸಿವೆಯ ಕಾಣದ ವಿಷ್ಣುವುನಂಬಿ
ಹಸಿದಿಹೆನೆನ್ನುತ ಬಕುಳೆಯ ಪಾಕ
ಕುಸಿಯದ ಚಿನ್ಮಯ ಗಾತ್ರಕೆ ಪುಷ್ಟಿ
ಎಸಗುವ ಕೇಳುತ ಮಾತೆಯ ಮಾತ
ಬಸುರಲಿ ಜಗವಂ ಪೊತ್ತಿಹ ದೇವ
ಬಸುರಲಿ ಬಂದಿಹ ಸುತನಂತಾಡುವ
ಹೊಸ ಹೊಸ ವೇಷದ ವೆಂಕಟನಾಯಕ
ವಶದೊಳ್ ಮೆರೆಯುತ ತೋಷವ ಕೊಡುವ ೨೯

ಕಾಲವು ವದಗಲ್ ಕಾಮಿನಿ ಪುಡುಕೆ
ಜಾಲವು ಮಾಡದೆ ಸಿರಿ ಹಯವೇರಿ
ಕೇಳಿಲಿ ವಿಪಿನದಿ ಬೇಟೆಯ ನಡಿಸಿ
ಧಾಳಿಯ ನಡೆಸುತ ಮದಗಜವೊಂದ
ಲಾಲಿಸಿ ಮೊರೆಯುನು ಬಿಡುತಲಿಗಜವ
ಪಾಲಿಸೆ ಸತಿಯನು ಪುರವನ ವೈದಿ
ತಾಳಿದ ಮೋಹವ ಕನ್ಯೆಯ ನೋಡಿ
ಕೇಳಿದ ಕುವರಿಯ ಮನವನು ಜಾಲ ೩೦

ತಿಳಿದರು ತಿಳಿಯದ ತೆರದಲಿ ಚದುರೆ
ಬಳುಕುತ ಮನದಲಿ ತುಂಬುತ ಮೋಹ
ತಳಮಳಗೊಳ್ಳುತ ಸಖಿಯರ ಕೂಡಿ
ಶಿಲೆಗಳ ನೆಸೆಯುತ ಕೊಲ್ಲುತ ಹಯವ
ಅಳುಕದ ಬೈಗಳ ಸುರಿಸುತ ಮೇಲೆ
ಒಳಗಡೆ ರಮಣನ ರೂಪವ ತುಂಬಿ
ಅಳೆಯುತ ಗುಣಗಣ ರಾಶಿಯ ಹಾಗೆ
ಅಳುಕುವ ಮನದಿಂ ನಡೆದಳು ಮನೆಗೆ ೩೧

ಸ್ವರತನು ಕರಗುತ ಭಕ್ತಳ ಬಿಡೆಗೆ
ಸ್ಮರಿಸುತ ಕನ್ಯೆಯ ವಾರೆಸುನೋಟ
ಪರಿಪರಿ ಮೋಹದಿ ಬಿದ್ದವನಂತೆ
ಜರಿಯುತ ಜರಿಯುತ ಕುಗ್ಗಿಸಿ ಕಾಯ
ತೊರೆಯುತ ಭೋಜನ ಭೋಗವನೆಲ್ಲ
ಉರುತರ ಮನ್ಮಥ ತಾಪದಿ ಬೆಂದು
ಉರುಳುತ ಪವಳಿಸೆಗೃಹದೊಳ್ ಬಕುಳೆ
ಸ್ಮರಿಸುತ ಪ್ರೇಮವ ಮಿಡುಕಿದಳಂದು ೩೨

ಏನಿದು ಕಾರಣ ನುಡಿನುಡಿ ಕಂದ
ನಾನಿಹೆ ಸೇವಿಸೆ ನಿನ್ನನು ಚೆನ್ನ
ಕಾನನದೊಳಗಡೆ ನಡೆದುದು ಏನು
ಮೌನವ ಬಿಡು ಬಿಡು ನಾಚಿಕೆಬೇಡೋ
ಹೀನವು ಏನೊಂದಿಲ್ಲವು ನಿನಗೆ
ಮಾನದ ಭೂಷಣವೆಲ್ಲವು ದಿಟವೂ
ಶ್ರೀನಿಧಿ ಮನ್ಮನ ಭೂತಿಯೆ ನುಡಿಯ್ಯೆ
ಏನಿದೆ ಮನದೊಳ್‌ಯೆಂದಳು ಮಾತೆ ೩೩

ನಾಟಕವಾಡುತ ಬೂಟಕ ಗುರುವು
ಏಟನು ತಿಂದೆನು ಅಡವಿಲಿ ಅಮ್ಮ
ನೋಟವ ಬೀರುತ ರಾಜನ ಮಗಳು
ನಾಟುತ ಹೃದಯದಿ ನಿಂತಳುಕಾಣೆ
ಸಾಟಿಯು ಇಲ್ಲವೆ ಅವಳಿಗೆ ಸತ್ಯ
ಮೀರಿದ ಹೃದಯ ಗ್ರಂಥಿಯ ಮದನ
ಕಾಟವ ಕೊಡುತಿಹ ಮಾಡುವುದೇನೆ
ಹಾಟಕ ಜ್ಯೋತಿಯು ಮರುಗಿದನಿಂತು ೩೪

ತೋಷದಲಪ್ಪುತ ಮಗನಂ ತಾಯಿ
ಮೀಸಲು ನಿನಗೇ ಅವಳೆಂತೆಂಬೆ
ಶ್ವಾಸವು ಬಿಡುವುದು ಏಕೋ ಕಂದ

ಘಾಸಿಯು ಬಿಡು ಬಿಡು ರಾಜನ ಪುಣ್ಯ
ಏಸಿದೆ ಕಾಣೆನು ಪಡೆಯಲ್ ನಿನ್ನ
ಶ್ರೀಶನೆ ಅಳಿಯನು ಯೆಂತೆನೆ ಮುಂದೆ
ವಾಸವ ಪದವಿಯ ಬಯಸುವನೇನು
ದಾಸನ ಭಾಗ್ಯವ ನೀಡುವೆ ಕರುಣಿ ೩೫

ಸುಂದರ ನೀನಿಹೆ ನಿನಗಿಂತಧಿಕ
ಸುಂದರಿ ಯಾರೂ ಇಲ್ಲವೆ ಸತ್ಯ
ವಂದಿಸಿ ಚರಣದಿ ನೀಡುವ ಕನ್ಯೆ
ತಂದೆಯ ಬಳಿಯಲಿ ಯಾಚಿಪೆ ನಾನು
ಮುಂದಿನ ಕೆಲಸವ ನಡೆಸಲು ನನಗೆ
ಇಂದೇ ನೀಡೈ ಸಲಹೆಗಳನ್ನು
ಎಂದಿಗು ಕೆಡದೈ ನಿನ್ನಯ ಕಾರ್ಯ
ತಂದುಕೊ ಧೈರ್ಯವ ನೆಂದಳು ಬಕುಳೆ ೩೬

ಉಬ್ಬಿದ ತೆರದಲಿ ಜಗ್ಗನೆ ಎದ್ದು
ತಬ್ಬುತ ತಾಯಿಯ ಧೊರೆಯೆಡೆ ಕಳಿಸಿ
ಒಬ್ಬರಿಗಿಬ್ಬರು ಲೇಸೆಂತೆಂದು
ಹಬ್ಬಿಸಿ ಪುಲ್ಕಿಸಿ ವೇಶವ ಮೈಗೆ
ಗುಬ್ಬಿಯ ತೆರದಿಂತಾಗಿಹ ಸತಿಗೆ
ಸರ್ಬರದಿಂದಲಿ ಕೈಯನು ಪಿಡಿದು
ಹಬ್ಬವಗೈಸುವೆ ಮದುವೆಗೆ ಮುಂಚೆ
ಎಬ್ಬಿಸಿ ಸಂಶಯ ವೆನ್ನುತ ಹೊರಟ ೩೭

ವೇಷ್ಠಿಯಗೈದನು ಮೊಮ್ಮಗನನ್ನು
ಬುಟ್ಟಿಯ ಮಾಡಿದ ನಿಡಿ ಜಗವನ್ನು
ತೊಟ್ಟಿಲಮಗು ಪರಮೇಷ್ಠಿಯು ಆದ
ಬುಟ್ಟಿಲಿ ಧಾನ್ಯವೆ ಜೀವರು ಎನ್ನಿ
ಕಟ್ಟಿಹ ಬಹುವಿಧ ಸರಗಳೆ ಸುರರು

ಬಟ್ಟೆಗಳೆಲ್ಲವು ಛಂದೋ ರಾಶಿ
ಮೆಟ್ಟುತ ಕಲಿಗಣಮೆಟ್ಟು ಭೂಪ
ಕಟ್ಟಲು ಕಂಕಣ ಹೊರಟನು ಧೀರ ೩೮

ಜೋಲುವ ಹುಬ್ಬನು ಕುಣಿಸುವನೊಮ್ಮೆ
ವಾಲಿಪ ದೃಷ್ಟಿಯ ನೆಡಬಲಕೊಮ್ಮೆ
ಮೇಲಕೆ ಕೆಳಗಡೆ ನೋಡುವನೊಮ್ಮೆ
ಕೇಳುವ ಜನಗಳ ಭಿಡೆಗಳನೊಮ್ಮೆ
ಹೇಳುವ ಕಣಿಗಳ ಭಕ್ತರಿಗೊಮ್ಮೆ
ಕೇಳಿಲಿ ಅಳಿಸುವ ಶಿಶುವನು ಒಮ್ಮೆ
ಹೇಳುವ ಬಡಬಡ ಮಂತ್ರಗಳೊಮ್ಮೆ
ಹೇಳದೆ ಕೇಳದೆ ನಡೆಯುವ ನೊಮ್ಮೆ ೩೯

ಹರಿವಶ ಹರವಶ ವಿಧಿವಶ ನನಗೆ
ಸುರಗಣ ಪರಿಗಣ ನನಗೇ ನಿನ್ನು
ಅರುಹುವೆ ಕಣಿಗಳ ಭಜಿಪರಿಗೆಲ್ಲ
ಎರಗಿದ ಜನರಿಗೆ ಮೋದವು ಸಿದ್ಧ
ಹರಿಸುವೆ ಗ್ರಹಗಳ ಬಾಧೆಯ ಸತ್ಯ
ನರಧನ ಬಯಕೆಯೆ ನನಗೇನಿಲ್ಲ
ಮರುಗುತ ಬಂದಿಹೆ ಭಕ್ತರಿಗಾಗಿ
ಚರಣವ ಪಿಡಿಯಿರಿ ಇದ್ದರೆ ಪುಣ್ಯ ೪೦

ಆಡಿದ ನುಡಿಗಳು ತಪ್ಪುವದಿಲ್ಲ
ಹೂಡಿದ ಚಟಗಳ ವಿಜಯವು ಸಿದ್ಧ
ನೀಡಲು ವರಗಳ ಬಂದಿಹೆಕೇಳಿ
ನೀಡಲು ಶಾಪವ ಮೃತ್ಯುವೆ ಸಿದ್ಧ
ಕೇಡುಗಳಿಲ್ಲವು ನನಗೆಂದೆಂದು
ಪ್ರೌಢನು ಈ ಪರಿ ನುಡಿಯುತ ನಡಿಯೆ
ಓಡಿತು ಸುದ್ದಿಯು ರಾಣಿಗೆ ವಡನೆ
ನೋಡುತ ಸುರಗಣ ಬಾಗಿದರಂದು ೪೧

ಬಂದಿತು ಅರಸಿಯ ಮಂದಿರ ಕರೆಯು
ವಂದನು ಕೊಳ್ಳದೆ ರಾಜಕುಮಾರಿ
ಸುಂದರ ಕಂಗಳ ಮುಚ್ಚಿಹಳಮ್ಮ
ಬೆಂದಿದೆ ಮೈಜ್ವರ ತಾಪದಿ ಬಹಳ
ಮಂದಿರವೆಲ್ಲವು ಕಾಣದು ದಿಕ್ಕು
ಮುಂದಿನ ಗತಿ ನೀ ದಯದಿಂದ್ಹೇಳೆ
ವಂದಿಸಿ ಕರೆವೆವು ಬಾಬಾರೆಂದು
ಎಂದರು ಸಖಿಯರು ಕರಗಳ ಮುಗಿದು ೪೨

ಅರಮನೆ ಗೊಡವೆಯು ನಮಗೇಕಮ್ಮ
ಸಿರಿಮದ ಮಂದಿಗೆ ನಮ್ಮಲಸಡ್ಡೆ
ತಿರಿಯುವ ಬಡವರೆ ವಾಸಿಯು ಕೇಳಿ
ಅರಸುತ ಬರುವರು ಧನ ನಾವಲ್ಲ
ಸಿರಿಯೇ ಹೃದಯದಿ ನಿಂತಿಹಳಮ್ಮ
ಅರಸಿಗೆ ನಂಬಿಕೆ ಇದ್ದರೆ ತಾನೆ
ಬರುತಲಿ ಕರೆದರೆ ನೋಡವೆನೆಂದು
ಸಿರಿವರ ಪೇಳಿದ ಕರುಣಾಮಯನು ೪೩

ವಡತಿಯು ಕಾತರ ಪಡುತಲಿ ಬಂದು
ಅಡಿಗಳ ಪಿಡಿಯುತ ತಾ ಕರ ತಂದು
ಮಡಿಲಲಿ ಹಾಕಲು ಮುತ್ತುಗಳನ್ನು
ಕೊಡವುತ ಬೇಡಿದ ಭಕ್ತಿಯ ಪಾಲು
ಕುಡಿಸುತ ಕಂದಗೆ ಜ್ಞಾನಾಮೃತವ
ಸಡಗರದಿಂದಲಿ ಪಿಟಿ ಪಿಟಿಯೆಂದು
ಗಡಗಡ ಜಪಿಸುತ ಮಂತ್ರಗಳನ್ನು
ಹುಡುಗಿಯ ತನ್ನಿರಿಯೆಂದನು ಜಾಣ ೪೪

ಕರಗಳ ಪಿಡಿದನು ನೋಡಿ ಮುಹೂರ್ತ
ಸರಸರ ನೋಡಿದ ರೇಖೆಗಳನ್ನು
ಸರಸಿಜ ಮುಖಿ ತಾ ಕಂಗಳ ತೆರೆಯೆ

ಬೆರೆಯಲ್ಲು ಭಯರ ನೋಟಗಳಾಗ
ಹರಿಯಿತು ಹೃದಯದಿ ಚಂದ್ರನ ಕಾಂತಿ
ಸರಸರ ಇಳಿಯಿತು ಹೃದಯದ ಕಾಂತಿ
ಭರದಿಂ ಕಂಗಳ ಮುಚ್ಚುತ ಜಾಣೆ
ಸ್ಮರಿಸುತ ಧ್ಯಾನವಗೈದಳು ವರನ ೪೫

ಧರಣಿ ದೇವಿಯೆ ಗಮನಿಸಿ ಕೇಳೆ
ಜ್ವರವಿದು ಕ್ರೂರವು ಬಡಿದಿಹುದಮ್ಮ
ಧರಣಿಯ ವೈದ್ಯರು ಹರಿಸಲಸಾಧ್ಯ
ನರಹರಿ ವೆಂಕಟ ಒಬ್ಬನೆ ವೈದ್ಯ
ಇರುವನು ಹತ್ತಿರ ಗಿರಿಯಲಿ ಆತ
ಉರುತರ ಮನ್ಮಥನವನಿಹ ಕೇಳೆ
ಇರುತಿರೆ ವನದಲಿ ಕುವರಿಯು ಒಮ್ಮೆ
ಬರುತಲಿ ತಾನೇ ಕಾಣಿಸಿಕೊಂಡ ೪೬

ಹುಡುಗಿಯು ನೋಡುತ ಪರವಶಳಾಗಿ
ಬಡಬಡ ಹೃದಯದಿ ತುಂಬಿದಳವನ
ವಡನೆಯೆ ಲಜ್ಜೆಯು ವದಗಿತು ಭಾಮೆ
ನುಡಿಗಳ ನುಡಿಯದೆ ಸಖಿಯರ ಕೂಡಿ
ದುಡುಕುತ ಕಲ್ಗಳ ನೆಸೆಯಲ್ ಕುದುರೆ
ಮಡಿಯಿತು ಘಾಯದಿ ವೆಂಕಟನಾಥ
ನಡೆದನು ಮನೆಯೆಡೆ ಕ್ಷಮಿಸುತ ಕರುಣಿ
ನಡೆದುದಕಿಲ್ಲವು ಪ್ರಾಯಃಶ್ಚಿತ್ತ ೪೭

ದಾನವು ಮಾಡಲ್ ಹುಡುಗಿಯನವಗೆ
ಪ್ರಾಣವು ನಿಲ್ಲುವದೀಕೆಗೆ ಸತ್ಯ
ಹಾನಿಯು ಸಿದ್ಧವು ಚಿಂತಿಸೆ ಬೇರೆ
ಕಾಣವೆ ಮಾಡುವದೆಂತನ ಬೇಡಿ
ಜ್ಞಾನವೃದ್ಧಳು ಬರುವಳು ಸತ್ಯ

ಸಾನಯ ಕನ್ಯೆಯ ಯಾಚಿಪಳಾಕೆ
ಏನನು ನೋಡದೆ ನೀಡಿರಿ ಇವಳ
ಎನ್ನುತ ಬಿಟ್ಟಳು ಪುಲ್ಕಿಸಿ ಸ್ಥಾನ ೪೮

ಸೇರುತ ಕಪಿಲ ಸುತೀರ್ಥವ ಬಕುಳೆ
ಪಾರ್ವತಿ ಪತಿಯಂ ವಂದಿಸಿ ಬೇಗ
ಊರಿಗೆ ದಾರಿಯ ಕೇಳುತಲಿರಲು
ಸೇರಿರೆ ರಾಣಿಯ ದಾಸಿಯರಲ್ಲಿ
ಪೋರಿಯ ಖಾಯಿಲೆ ಅರಮನೆ ಸುದ್ಧಿ
ಸಾರುತ ಪುಲ್ಕಿಸಿ ಬಂದ ವಿಚಾರ
ಸಾರವ ಗ್ರಹಿಸುತ ಕೂಡುತಲವರ
ನೇರವೆ ಬಂದಳು ರಾಜ್ಞಿಯ ಬಳಿಗೆ ೪೯

ವಂದಿಸಿ ಕುಳಿತಿರಲುಚಿತಾಸನದಿ
ಬಂದ ವಿಶೇಷವ ಕೇಳಲ್ ರಾಣಿ
ಬಂದಿಹೆ ತೋರಲ್ ಅಳಿಯನ ನಿಮಗೆ
ಸುಂದರ ತನುಮನ ಯೌವನ ಭರಿತ
ವಂದೇ ತೆರದೊಳ್ ಮೆರೆಯುವ ನವ್ವ
ಎಂದೆಂದಿಲ್ಲವು ಕುಂದುಗಳಮ್ಮ
ನಂದ ಸುಪೂರ್ಣನು ಗುಣಗಣಸಿಂಧು
ನಂದದ ಸಿರಿಗಾನಂದದ ಕೇಳೆ ೫೦

ಸರಿಮಿಗಿಲಿಲ್ಲವು ಜಗ ಒಳಹೊರಗೆ
ಅರಿಯಲಸಾಧ್ಯವು ಸರಿ ಸಾಕಲ್ಯ
ಅರಿವರು ಜೀವರು ತಿಳಿಸಿದರವನು
ಮೆರೆಯುವ ಹತ್ತಿರ ಗಿರಿಬಳಿಯಲ್ಲಿ
ಕರೆದೆಡೆ ಬರುವನು ಭಕ್ತರ ಭಿಡೆಗೆ
ಶರುಕೊನೆ ಮಧ್ಯವ ಕಾಣದ ವೆಂಕಟ
ವರನಿಹ ತಕ್ಕವ ನಿನ್ನಯ ಸುತೆಗೆ
ಕರೆಯುವ ನನ್ನನು ತಾಯಿಯೆಂದು ೫೧

ವಲಿಯುತ ಮೆಚ್ಚಿಹ ಪದ್ಮಾವತಿಯ
ಸಲಹುವ ಸತಿಯಳ ಗೈಯುತಲವಳ
ಚಲುವೆಯು ಒಪ್ಪಿಹಳೆಂಬಸುವಾರ್ತೆ
ತಿಳಿಯಿತು ಪ್ರಜೆಗಳ ಗುಜುಗಜುವಿಂದ
ಬಲಸಿರಿ ವಯಕುಲವೆಲ್ಲವು ಕೂಡಿಹ
ವಳಿತಿನವರ ಮತ್ತೊಬ್ಬನು ಇಲ್ಲ
ಲಲನೆಯ ಹಾಗೂ ಪತಿಯನು ಕೇಳಿ
ತಿಳಿಸೈ ಸಮ್ಮತ ವೆಂದಳು ಜಾಣೆ ೫೨

ಪೂಜ್ಯ ಸುಭಾವದಿ ಕುಳಿಸುತ ಲವಳ
ರಾಜ್ಞಿಯು ಜನ ಮಂದಾರವ ಸೇರಿ
ಮಾಜದೆ ನಡಿದುದ ಪೇಳುತಲೆಲ್ಲ
ಮೂರ್ಜಗದಲ್ಲಿಯು ಸಿಗನಿಂಥ್ಥಾವ
ಸೋಜಿಗ ಹುಡುಕದೆ ಒದಗಿಹ ಪೂ
ರ್ವಾರ್ಜಿತ ಪುಣ್ಯವೆ ವದಗಿದೆ ಏನೊ
ಪೂಜ್ಯಳು ಪುಲ್ಕಿಸಿ ನುಡಿದುದು ಸತ್ಯ
ಮಾಜದೆ ನುಡಿಯಿರಿ ಮನವೇನೆಂದು ೫೩

ನಮ್ಮದು ಏನಿದೆ ನಿಮ್ಮದೆ ಎಲ್ಲ
ನೆಮ್ಮದಿ ನಿಮಗಿರೆ ನೆಮ್ಮದಿ ನಮ್ಗೆ
ಸಮ್ಮತಿ ಪೂರ್ಣವು ಕಂದಳಿಗಿಹುದು
ಕಮ್ಮಿಯು ಏನು ಅಲ್ಲವು ಕುವರಿ
ಹಮ್ಮಿನ ಸಿರಿಸಮ ಚಲುವೆಯು ಜಾಣೆ
ಸುಮ್ಮನೆ ನೀಡಲ್ ಸಾಧ್ಯವು ಹೇಗೆ
ಅಮ್ಮನ ನೀವೂ ಕೇಳಿರಿ ನೋಡುವ
ನಮ್ಮನೆ ಭಾಗ್ಯವು ನೋಡುತ ನೀಡಿರೆ ೫೪

ಯಾರೂ ಕಾಣದ ಜಾಣನು ಅಂತೆ
ಮೆರೆಯೆ ಇಲ್ಲದ ಸಿರಿಗುಣವಂತೆ
ಭಾರೀದೇವನ ಸಮನವನಂತೆ

ಶೂರನು ಧೀರನು ಮಾರನು ಇದ್ದು
ಯಾರೂ ಕನ್ಯೆಯ ಕೊಡೆ ಬಂದಿಲ್ಲ
ಚೂರಿದೆ ಸಂಶಯ ಮತ್ತೇನಿಲ್ಲ
ಮೀರಲ ಸಾಧ್ಯವು ಪುಲ್ಕಸಿ ನುಡಿ ವಿ
ಚಾರಿಸಿ ಸಕಲವ ಮಾಡಿರಿ ಸೂಕ್ತ ೫೫

ಮಡದಿಯ ಮಾತನು ಕೇಳುತ ವಡೆಯ
ಸಡಗರ ಕೂಡುತಲೆಲ್ಲರ ಬಂದು
ನುಡಿದನು ಯುಕ್ತಿಲಿ ಮುಂದಿನ ಮಾತು
ಧೃಡಮನವಿದೆ ಸರಿ ಬೆಳಸಲ್ ಮದುವೆ
ಕೊಡದಿಹರೇತಕೆ ಕನ್ಯೆಯ ಜನರು
ಮಡದಿಯ ಬಯಸದೆ ಇದ್ದುದು ಏಕೆ
ಬಡವನು ನಾನಿಹೆ ನೋಡಲು ನಿಮ್ಮ
ನುಡಿಯುವಿ ಹರಿಸಮ ನವನೆಂತೆಂದು ೫೬

ಕೂಡುವದೇನಿದು ಸರಿ ಭಾಂದವ್ಯ
ಪ್ರೌಢನ ಸಂಗಡ ತೂಗುವದೆಂತು
ನಾಡಿನ ಧೊರೆ ಜಗದೀಶಗೆ ಇನ್ನು
ವಾಡಿಕೆ ಕೊಡುವುದು ಬಿಡುವುದು ಎಲ್ಲ
ಜೋಡಿಲಿ ನಡಿಸಲ್ ಸಾಧ್ಯವೆ ನೋಡಿ
ನೋಡುತ ನಗೆಗೀಡಾಗಲೆ ನಾನು
ಕಾಡುತಲಿರುವುದು ಸಂಶಯ ಹೀಗೆ
ಬೇಡುವೆ ಬಕುಳೆಯೆ ಸಂಶಯ ಹರಿಸೆ ೫೭

ತುದಿಕೊನೆಯಿಲ್ಲವು ಸಂಶಯಕೆಂಬೆ
ಮುದುವೆಯು ಮೊದಲಿಲ್ ಆಗಿದೆ ರಾಜ
ಮದುವೆಯು ಮತ್ತೆನೆ ಸಂತತಿಗಾಗಿ
ಮೊದಲಿನ ಸತಿಗಿದೆ ಸವತಿಯ ನಿಯಮ
ಇದು ಸರಿ ಕುವರಿಯ ಪೂರ್ಣಸುಪುಣ್ಯ

ಮುದಮಯ ಮದನ ಸುಮೋಹನವರಗೆ
ವದಗಿಸೆ ಕಷ್ಟವೆ ಕನ್ಯಾರಾಶಿ
ಬದಿಗಿಡು ನಿನ್ನಯ ಮಾತುಗಳೆಲ್ಲ ೫೮

ಮಂದಿಯ ಕನ್ಯೆಯ ಬೇಡುವನೇನವ
ಇಂದಿರೆ ಸಹ ಬೇಕಿಲ್ಲವು ಕೇಳೊ
ವಂದಿಸಿ ನಿಂದವಳೆನ್ನುತ ಸಿರಿಯ
ನಂದವ ನೀಡಲ್ ಪಿಡಿದಿಹ ಕೈಯ
ಎಂದಿಗು ಸ್ವರತನು ಪೂರ್ಣಾನಂದ
ಕಂದಿಯ ಬಯಕೆಯ ನಡಿಸುವೆನೆಂದು
ಬಂದನು ಗಿರಿಯೆಡೆ ಬಿಡುತಲಿ ಧಾಮ
ನಂದವು ಶಾಶ್ವತ ನಿನಗಿದೆ ಮುಂದೆ ೫೯



ಮಾನವ ನೀನರೆ ದೇವನಿಗೇನೂ
ದಾನವ ಕೊಳಲ್‌ಹೀನವು ಕಾಣೆ
ಹೀನರನಂತಗೆ ಸಿರಿಜಗಮೊತ್ತ
ಭಾನುಗದೇವ ಸಮಾನರು ಯಾರು
ನ್ಯೂನರ ಕೂಡಿಯೆ ಆಳಲಿ ಬೇಕು
ಕಾನನ ಸಂಚರ ಕರಡಿಯ ತಂದ
ದಾನವನೆನ್ನದೆ ಬಲಿಯನೆಕಾಯ್ದ
ಶ್ರೀನಿಧಿಹರಿಗೆ ಕುಚೇಲನು ಸಖನೆ ೬೦

ಕೊಡುವುದು ಬಿಡುವುದು ಮಾತುಗಳೇಕೊ
ಹುಡುಗಿಯ ಬೇಡಿದೆನಲ್ಲದೆ ಮತ್ತೆ
ಕೊಡುಕೊಡು ಎಂದೆನೆ ಬೇರೇನೊಂದು
ಬಡತನ ಸಿರಿತನ ಬೇಕಿಲ್ಲವಗೆ
ಧೃಡತಮ ಭಕ್ತಿಯೆದಕ್ಷಿಣೆಯವಗೆ
ಒಡೆಯನು ಅವನಿರೆ ವಿಶ್ವಕೆ ಬೇರೆ
ಕೊಡುವನದಾವನು ಚಿಂತಿಸಿ ನೋಡೊ
ಬಿಡು ಬಿಡು ಮದವಿದು ಸಲ್ಲದು ಕಾಣೊ ೬೧

ಇರುವುದು ನೀಡಿದರಾಯಿತು ನಮಿಸಿ
ದೊರೆಯವೆನೆಂದರೆ ಪೊಂದುವ ತೃಪ್ತಿ
ಸಿರಿಇರೆ ಕನ್ಯೆಯು ಬಡವನೆ ನೀನು
ಹರಿ ಹರಿ ಭೂಪನೆ ಚಿಂತೆಯು ಬೇಡ
ಶರಣರ ಬಿಡನವ ನೆಂದಿಗು ಸತ್ಯ
ಜರುಗುವದೆಲ್ಲವು ಸಾಂಗೋಪಾಂಗ
ಭರವಸೆ ಇಡುತಲಿ ಭಾಷೆಯ ನೀಡು
ಕರೆಕರೆ ಬೇಡವು ಎಂದಳು ಮುದುಕಿ ೬೨

ಏನೋ ಆಡಿದೆ ಕ್ಷಮಿಸಮ್ಮಮ್ಮ
ದೀನರ ಪೊರೆವುದೆ ನಿಮ್ಮಸ್ವಭಾವ
ಸಾನಯ ನೆನೆಯುವೆ ನಿಮ್ಮುಪಕಾರ
ಏನನು ಕೊಟ್ಟರು ತೀರದು ಸತ್ಯ
ಮಾನವ ಚಪಲವು ಬಿಡದೆನಗಮ್ಮ
ಮಾನ್ಯಕವೀಶರ ಕರೆಸುವೆ ನೀಗ
ಕನ್ಯಾವರಘಟಿತಾರ್ಥವ ನೋಡಿ
ಲಗ್ನವ ನಿಡಿಸುವೆ ನೆಂದನು ಭೂಪ ೬೩

ಕವಿವರ ಶುಕಮನಿ ಬಂದುದ ನೋಡಿ
ಅವನಿಪ ಮಾಡುತ ಯೋಗ್ಯುಪಚಾರ
ತವಕದಿ ನೀಡುತ ಜಾತಕವೆರಡು
ವಿವರಿಸೆ ಬೇಡಿದ ಗ್ರಹಬಲವೆಲ್ಲ
ಸ್ತವನವ ಗೈಯುತ ಜೋಡಿಯನವರು
ಇವಳಿಗೆ ಅವನೇ ಪತಿಯಿಹ ನಲ್ಲ
ಅವನಿಗೆ ಇವಳೇ ಸತಿಯಿಹಳಲ್ಲ
ಲವಸಹ ವಿಷಮವು ಕಾಣದು ನನಗೆ ೬೪

ಕೂಟಗಳೆಲ್ಲವ ಕೂಡಿಪ ವರನು
ಕೂಟಸ್ಥಳ ಕನ್ಯಾಮಣಿ ವಧುವು
ಕೂಟಗಳೆಲ್ಲವು ಕೂಡವೆ ಇನ್ನು

ಹಾಟಕಮಯ ಶ್ರೀವೆಂಕಟನಾಥ
ನೋಟಸುಯೋಗವು ನಮಗಿದೆ ಸತ್ಯ
ಭೇಟಿಯ ನೀಡುವೆ ಎನ್ನುತಮನದಿ
ಸಾಟಿಯು ಕಾಣೆನು ಇಂಥಾವರಗೆ
ದಾಟುವೆ ಭವಕುಲ ಕೋಟಿಯ ಕೂಡಿ ೬೫

ಈಗಲೆ ಲಗ್ನವನಿಡಿಸುತ ಪತ್ರ
ಈಗಲೆ ಕಳಿಸೈ ಹೋಗುವೆ ನಾನೆ
ತೂಗುತ ತಲೆ ಸಂತೋಷದಿ ಶುಕರು
ಆಗಸರಾಜಗೆ ನುಡಿಯಲ್ ಹೀಗೆ
ಬೇಗನೆ ಮುಗಿಸುತ ಕಾರ್ಯವನೆಲ್ಲ
ಬಾಗುತ ಬೀಳ್ಕೊಡೆ ಬಕುಳೆಯನೃಪನು
ಬೇಗನೆ ಬಳುಕುತ ಹರ್ಷದಲಾಕೆ
ಸಾಗುತ ಬಂದಳು ಕಂದನ ಬಳಿಗೆ ೬೬

ಕಾರ್ಯವು ಹಣ್ಣೋ ಕಾಯೋ ಎಂತ
ಹೇಯನು ಕೇಳಲು ಕೌತುಕತೋರಿ
ಕಾರ್ಯವು ನಿನ್ನದು ಹಣ್ಣೇ ನಿತ್ಯ
ಜೀಯನೆ ಏನೆಂದ್ಹೇಳಲಿ ಚಿತ್ರ
ಮಾಯಾ ಪುಲ್ಕಿಸಿ ಒಬ್ಬಳು ಬಂದು
ಈಯಲು ಹುಡುಗಿಯ ಹೇಳಿದಳಂತೆ
ಕಾರ್ಯವು ಸುಲಭದಿ ಜರಿಗಿತು ನನಗೆ
ರಾಯನ ಪತ್ರವ ಶುಕಮುನಿ ತರುವ ೬೭

ಬಕುಳೆಯು ನುಡಿಯುತಲೀಪರಿ ಇರಲು
ಶುಕುಮುನಿ ವದಗುತ ಪತ್ರವ ಕೊಡುತ
ಅಕುಟಿಲ ಪ್ರೇಮದಿ ಸ್ತುತಿಸಲ್ ಹರಿಯ
ಭಕುತನ ತಬ್ಬುತ ವಂದಿಸಿ ಕಳಿಸಿ
ವಿಕಲಿತ ಮನವಂ ನಟಿಸುತ ನುಡಿದ

ಯುಕುತಿಲಿ ಏರ್ಪಾಡಾಯಿತು ಮದುವೆ
ಯುಕುತಿಯು ನಡೆಯದು ಮುಂದೇನಿನ್ನು
ನಿಕಟದಿರೊಕ್ಕವ ನೀಡುವರಾರು ೬೮

ನೆಂಟರು ಇಷ್ಟರು ಯಾರಿಹರೆನಗೆ
ಭಂಟರು ಬೇಡವೆ ಮದುವೇಮನೆಗೆ
ಒಂಟಿಗ ನಾನಿಹೆ ಸಿರಿ ಇಲ್ಲಿಲ್ಲ
ಅಂಟಿದೆ ಬಡತನ ಬೇರೆನಗೀಗ
ಗಂಟಿರದಿಹವರ ಹಾಸ್ಯಾಸ್ಪದನೆ
ತಂಟೆಯ ತಂದನೆ ರಾಜನು ಬೀಗ
ಕಂಟಕ ಬಹುವಿದೆಮದುವೆಯು ಮುಗಿಯೆ
ಎಂಟು ದಿನಂಗಳ ಖರ್ಚಿಗೆ ಹೇಗೆ ೬೯

ಈ ತೆರ ಹರಿಯುದ್ಗಾರವ ಕಂಡು
ಮಾತೆಯು ನುಡಿದಳ್ ಏನಿದು ಛಂದ
ಗೀತೆಯ ಪಾಡಲ್ ಬರುವುದೆ ಧನವು
ಏತಕೆ ಬರಿ ಈ ಮೋಹಕದಾಟ
ಆತ್ಮಾನೀನಿಹೆ ವಿಶ್ವವಿಧಾತ
ತಾತನುಬೊಮ್ಮಗೆ ಅಜ್ಜನು ಹರಗೆ
ಖ್ಯಾತ ಮಹೇಂದ್ರನು ಮರಿಮಗನಲ್ಲೆ
ದೂತರು ಸರ್ವರು ಸುರ ಪರಿವಾರ ೭೦

ಜಗವನು ನೂಕುತ ಅಗಣಿತ ಮಹಿಮ
ಮುಗಿಸಲು ಮದುವೆಯ ಆಗದೆ ನಿನಗೆ
ನಗೆಮೊಗ ತಾಳುತ ಗರುಡನ ಸ್ಮರಿಸು
ಬಗೆಬಗೆ ವಿಧಿ ಶಿವರೆಲ್ಲರ ಕರಿಸು
ಸುಗಮವೆ ಸರಿ ನಿನಗೆಲ್ಲವು ಬಲ್ಲೆ
ನಗರವೆ ಕಟ್ಟುವ ದಿವಿಜರ ಬಡಗಿ
ಮುಗಿಸುವೆ ಬಿಟ್ಟಿಯೆ ಕೆಲಸಗಳೆಲ್ಲ
ಮುಗಿಯುತ ಕೈಧನ ಧನಪನೆಕೊಡುವ ೭೧

ಸರಿಸರಿಯೆಂದನು ವೆಂಕಟನಾಗ
ಗರುಡನು ಶೇಷನು ವಾಯುವು ಬಂದ
ಕರೆದರು ಬಂದರು ವಿಧಿಶಿವರಾಗ
ಅರುಹಿದ ವೆಂಕಟ ಮದುವೆಯ ವಿಷಯ
ಹರುಷದಿ ಕುಣಿದರು ಸುರಗಣವೆಲ್ಲ
ಬರೆದರು ಪತ್ರವ ಲೋಕಕ್ಕೆಲ್ಲ
ನೆರೆಯಿತು ಇಡಿ ಬ್ರಹ್ಮಾಂಡವು ಅಲ್ಲಿ
ಪರಿಸರ ನಿಮಿಷದಿ ಬೀರಿದ ಸುದ್ದಿ ೭೨

ಮಾಡುವೆ ನಡಿಗೆಯ ನೆಂದನು ಅಗ್ನಿ
ಗುಡಿಸುವೆ ಸುತ್ತುವೆ ನೆಂದನು ಪ್ರವಹ
ಬಡಪರಿಚಾರರಕನೆಂದನು ವರುಣ
ಬಡಿಸುವೆನೆಂದರು ಮರುತರು ತಾವು
ನಡಿಸುವೆನೆಂದವಿಚಾರಣೆ ಯಮನು
ಕೊಡುವೆನು ದಕ್ಷಿಣೆಯೆಂದ ಕುಬೇರ
ನುಡಿದೆ ಪರಾಕನು ನಾರದನೆಂದ
ನಡಿಸುವೆನೆಲ್ಲವ ನೆಂದನು ವಾಯು ೭೩

ಸುರಗಣವೆಲ್ಲಾನಾತಾಯೆಂದು
ಅರಸುತ ಬರುತಿರೆ ಕೆಲಸವ ಮಾಡೆ
ಇರದಂತಾಯಿತು ಕೆಲಸಗಳಲ್ಲಿ
ದೊರಕದೆ ಸೇವಿಪ ಭಾಗ್ಯವು ಮಂದಿ
ಮರುಗುತ ಲಿರುತಿರೆ ಹರಿತಾ ಕಂಡು
ನೆರೆಯುತ ನೋಡುತ ಸುಖಿಸುವುದೆಲ್ಲ
ಉರುತರ ಸೇವೆಯು ನನಗೆಂತೆನ್ನಿ
ಹರುಷವೆ ಭಕ್ತರ ಸಂದಣಿಯೆಂದ ೭೪

ಸಿಕ್ಕರು ಕೆಲಸಕೆ ಬಂಟರು ಬಿಟ್ಟಿ
ರೊಕ್ಕವು ಬೇಡವೆ ಪರಿಕರಕೊಳ್ಳೆ
ಮಿಕ್ಕುದು ಹೇಗೋ ನಡೆವುದು ಸತ್ಯ

ದಕ್ಕುವ ಚಿಂತೆಯ ವೆಂಕಟ ನಟಿಸೆ
ಪಕ್ಕದಿ ಮೊಮ್ಮಗ ಶಿವನಿಹನಲ್ಲ
ಸಕ್ಕರೆ ಸಖಗಿಹ ಧನಪತಿಯವಗೆ
ಅಕ್ಕರೆಯಿಂದಲಿ ಕೊಡಿಸನೆ ಸಾಲ
ಪುಕ್ಕಟೆ ಆಹುದೆ ಎಂದಳು ಬಕುಳೆ ೭೫

ಧನಪನು ನುಡಿದನು ಕೇಳಲ್ ಸಾಲ
ಎನಗಿದೆ ಬಡ್ಡಿಯ ನೇಮವು ಹಾಗೆ
ಘನತರ ಜಂಟಿಯು ಇಲ್ಲವೆ ಒಡವೆ
ಮನಸಿಗೆ ಒಪ್ಪುವ ತೆರದೊಳ್ ಕೊಡಲು
ಧನವಂ ನೀಡಲ್ ಅಡ್ಡಿಯ ಕಾಣೆ
ಧನಪತಿ ನಿಜದಿಂ ದೇವನೆ ಆದರು
ನನಗದು ಧರ್ಮವೆ ಕಸುಬಿನ ಗುಟ್ಟು
ಧನತಾ ನಿಲ್ಲದು ಬಿಟ್ಟರೆ ನೇಮ ೭೬

ಹರತಾ ಕೇಳುತ ನುಡಿಗಳ ಬೇಗ
ಬರಿಸುತ ಪತ್ರವ ಹಾಕಿದ ಜಂಟಿ
ಸರಸರ ವದಗಿತು ನಾಣ್ಯದ ರಾಶಿ
ಜರುಗಿಸಿ ಮುಂದಿನ ಕಾರ್ಯಗಳೆನ್ನೆ
ವರಸತಿ ಲಕ್ಷ್ಮಿಯು ಬರದಿರೆ ನಾನು
ಬರುವುದೆ ಹಾಸಗೆ ನೀವೆ ಹೇಳಿ
ಅರಸಿಯ ನರಸುತ ಪರಿಪರಿ ಹೀಗೆ
ಕರಸುತ ರವಿಯನು ನುಡಿದನು ಚತುರ ೭೭

ಸಿರಿಯಂ ಕರತರೆ ನೀನೇ ಶಕ್ತ
ಭರದಿಂ ಕೊಲ್ಹಾಪುರದೆಡೆ ತೆರಳು
ಉರುತರ ಖಾಯಿಲೆ ಹರಿಗೆಂದ್ಹೇಳು
ಖರೆಯಿದು ತರಹವೆ ನಟಿಸಲ್ ಬೇಕು
ಬರುವಳು ಕಳವಳಗೊಳ್ಳುತ ಲಾಗ

ಸರಸರ ನಡಿಸಿದ ಭಂಟನು ಹಾಗೆ
ಬರುತಿರೆ ಮಡದಿಯು ವೆಂಕಟನಾಥ
ನರಳುತ ಮಲಗಿದ ಹಾಸಿಗೆ ಮೇಲೆ ೭೮

ಕುಗ್ಗಿದ ಕಂಗಳ ಮೈಕೈ ಸ್ವರವು
ಬಗ್ಗಿಹ ಬೆನ್ನನು ಸುಕ್ಕಿದ ಚರ್ಮವ
ಮುಗ್ಧದ ದೇವನು ತೋರಲ್ ತಕ್ಷಣ
ಮುಗ್ಧೆಯು ಆಗುತ ಗಾಭರಿಯಿಂದ
ಸಿಗ್ಗನು ತೊರೆಯುತ ಬಗ್ಗುತ ಗಂಡಗೆ
ಮಗ್ಗುಲಲ್ಲುಳಿತು ಏನಿದು ಕಾಂತ
ತಗ್ಗುವನಲ್ಲವೆ ಹೀಗೇಕಾಗಿಹೆ
ಹಿಗ್ಗುತ ನುಡಿನುಡಿ ಎಂದಳು ಭಾಮೆ ೭೯

ಪ್ರೇಮದಲಪ್ಪುತ ನುಡಿದನು ಸ್ವಾಮಿ
ಕಾಮನ ಜನನಿಯು ಇಲ್ಲದ ಮೇಲೆ
ನೆಮ್ಮದಿಯೆಲ್ಲಿದೆ ಮನಕೆಂತೆಂಬ
ವಾಮವೆ ಆಗಿದೆ ನನಗೀಗೆಲ್ಲ
ಕ್ಷೇಮವ ಪಡೆದೆನು ನೋಡುತ ನಿನ್ನ
ಸೋಮನ ಸೋದರಿ ನಡಿಸುವ ಕಾರ್ಯ
ನೇಮದಿ ಬಹುವಿದೆ ನೋಡಿಕೊ ನೀನು
ಭಾಮೆಯೆ ಮಾನವು ನಿನ್ನದು ಎಂದೆ ೮೦

ಜಾಣೆಯು ಗ್ರಹಿಸುತ ತಕ್ಷಣವೆಲ್ಲ
ಶ್ರೀನಿಧಿ ಮಾಡಿದ ಮಾಟವ ಮೆಚ್ಚಿ
ನಾನಿಹೆ ನಿಮ್ಮಯ ಛಾಯೆಯು ಅಲ್ಲೆ
ಮಾನಿನಿ ಮನಪತಿ ಮನತೆರವೇನೆ
ಏನನುಮಾನವು ಮಾಡಲು ಬೇಡ
ನಾನೆ ನಿಲ್ಲುವೆ ನಡಿಸಲ್ ಕಾರ್ಯ
ಜಾಣರೆ ಬನ್ನಿರಿ ಹಾಸೇಮಣೆಗೆ
ವಾಣಿಯೆ ಹಾಡನು ಬೇಗನೆ ಹೇಳೆ ೮೧

ಬನ್ನಿದೇವತೆ ವಂದಿಸಿ ಬಂದು
ಅನ್ನವ ನೀಡುತ ವಿಪ್ರರಿಗೆಲ್ಲ
ಘನ್ನವಿಶೇಷದ ದಾನಗಳಿತ್ತು
ಮನ್ನಿಸಿ ಸರ್ವರ ಯೋಗ್ಯತೆಯಂತೆ
ಚೆನ್ನಮುಹೂರ್ತದಿ ಬೆಳಸುತ ಪಯಣ
ಚಿನ್ಮಯ ತಂಗುತ ಶುಕರೆಡೆಯಲ್ಲಿ
ಉಣ್ಣುತ ಬೃಹತೀ ಅನ್ನವನಲ್ಲಿ
ಉಣ್ಣಿಸಿ ತೃಪ್ತಿಯ ನೆಲ್ಲರಿಗಿತ್ತ ೮೨

ಪಾರಣೆ ಮುಗಿಸುತ ಮರುದಿನ ಹೊರಟು
ಊರಿನ ಬಹಿಬರೆ ರಾಜನು ಬಂದು
ಹಾರವ ಹಾಕುತ ಬೀಗರನಪ್ಪಿ
ಕೂರಿಸಿ ವರನಂಬಾರಿಯ ಮೇಲೆ
ಚಾರು ಅಲಂಕೃತ ಬೀದಿಗಳಲ್ಲಿ
ಭೋರ್ಗರೆಯುತಲಿರೆ ವಾದ್ಯ ಸುಗೋಷ್ಠಿ
ವಾರವಧೂಗಣ ನೃತ್ಯವ ಗೈಯೆ
ವೀರ ಸುಯೋಧರ ಪಂಕ್ತಿಯು ಸಾಗೆ ೮೩

ಪೌರ ಸ್ತ್ರೀಯರು ಕುಸುಮಗಳೆರಚೆ
ಏರುತ ಉನ್ನತ ಸ್ಥಳಗಳ ಜನರು
ಹೀರುತಲಿರೆ ಸಂತೋಷದಿ ವರನ
ಭಾರೀ ಪುರಜನ ನಮ್ರದಿ ಸಾಗೆ
ಊರಿಲಿ ತುಂಬಿದೆ ಹರ್ಷ ವಿಶೇಷ
ಶೌರಿಯ ಮೆರೆಸುತ ಪುರದೊಳ್ ಕೊನೆಗೆ
ಗೌರವ ತೆರದಿ ಬಿಡಾರಗಳಲ್ಲಿ
ಸೇರಿಸಿ ಬೀಗರ ಸೌಧಕೆ ನಡೆದ ೮೪

ಮಾತೆಯ ಮದುವೆಯ ನೋಡುವ ಪುಣ್ಯ
ಪೋತರಿ ಗೊದಗಿರೆ ಬಿಡುವರೆ ಸಮಯ
ನಾತಾಯೆನ್ನುತ ಇಡಿ ಜಗವೇನೆ

ನಾಥನ ಸೇವಿಸೆ ಬಂದಿಳಿದಿತ್ತು
ಆತತವಾಗಿರೆ ಹರಿ ಸಂಪತ್ತು
ಕೌತುಕದಿಂದಲಿ ಜನಗಣವೆಲ್ಲ
ಪ್ರೀತಿಯ ಸುರಿಸುತ ನೋಡುತ ನೊಡಿ
ಆತ್ಮಾನಂದವ ನುಂಡರು ಆಗ ೮೫

ನೋಡಿರೆ ನಾಲ್ಮೊಗ ವರಬಲಗಿಹನೆ
ನೋಡಿರೆ ವಾಮದಿ ವೃಷಭಧ್ವಜನೆ
ಕೂಡಿಹಗಜಮುಖ ಷಣ್ಮುಖರಲ್ಲೆ
ನೀಡುವ ಹಸ್ತದಿಲಾಗವ ವಜ್ರಿ
ಪಾಡುತ ಮುಂದಿಹ ನಾರದನಲ್ಲೆ
ಪ್ರೌಢಗೆ ಛತ್ರಿಯ ಪಿಡಿದಿಹ ಕಾಮ
ಗಾಢಾನಂದದಿ ಕುಣಿವನೆ ಹನುಮ
ಮೂಡಿಹ ಶಶಿವೋಲ್ ಮೆರೆಯುವ ಗಂಡು ೮೬

ಮರೆಯಿಸಿ ಸಂಭ್ರಮ ದೊರೆ ಕರತಂದು
ವರನಂ ಪೂಜಿಸಿ ವಿಧಿತೆರ ಮುದದಿ
ಪರಿಪರಿ ಭೂಷಣ ವಸನ ವಿಶೇಷ
ಉರುತರ ಸುಂದರಿ ಕನ್ಯೆಗೆ ಸುರಿಸಿ
ಸಿರಿ ಬಕುಳಾ ಪರಿವಾರದ ಮುಂದೆ
ತ್ವರಿಯಂ ಕೂರಿಸಿ ನಿಶ್ಚಯಗೈಯೆ
ಸರಸ ಪುರೋಹಿತ ರುಭಯರಿಗೆರಗಿ
ಸರಸರ ನಡಿಸಿರಿ ಯೆಂದನು ಕಾರ್ಯ ೮೭

ಎರಡನೆ ಮದುವೆಯು ಎಂಬುವಿರಿಲ್ಲ
ಅರಿಯದ ಪುತ್ಥಳಿ ಕೂಸಿದು ದೊರೆಗೆ
ಇರುವುದೆ ಸವತಿಯ ಕಾಟವು ಪೇಳಿ
ಕರಕರೆ ವಗೆತನ ಸಹಿಸುವದೆಂತು
ಪರಿಪರಿ ಆಟವನಾಡಿಹವರನು

ಭರವಸೆ ನೀಡಿರಿ ನೆಂಟರುನೀವು
ಹಿರಿಸತಿ ಹೃದಯವು ಹೇಗಿದೆ ಏನೊ
ದೊರೆಯ ಪುರೋಹಿತ ರಂದರು ಹೀಗೆ ೮೮

ಏನಿದು ಮುನಿಗಳೆ ಎಂದಳು ಲಕ್ಷ್ಮಿ
ನಾ ನಡಿಸುವೆ ಸಂಸಾರವ ನಾದಿ
ನ್ಯೂನತೆ ಸೊಲ್ಲೇ ನಮ್ಮಲ್ಲಿಲ್ಲ
ಕಾಣೆನು ಒಂದಿನ ಸಹ ನಿಜ ಕಲಹ
ಪೂರ್ಣೈಶ್ವರ್ಯಾತ್ಮಕರಿವರಿಹರು
ನಾನಾ ರೂಪದಿ ಜಗ ಪೋಷಕರು
ದಾನಿಗಳಿಗುಭಯ ಸತಿಯರು ಕಷ್ಟವೆ
ಕಾಣೆನು ಬಾಧಕ ಸವತಿಯರಿಂದ ೮೯

ಪತಿಯಾಧೀನವು ತನುಮನವೆಲ್ಲ
ಪ್ರತಿಮನ ಪುಟ್ಟುವದಿಲ್ಲವು ನಮಗೆ
ಅತಿಶಯದಿಂ ಷೋಡಶ ಸಹಸ್ರ
ಸತಿಯರರಾಳಿದ ಮಹಿಮರು ಹಿಂದೆ
ಮತಿಗತಿ ಸ್ವರತರು ವಲಿಯುತಲೀಗ
ಸುತೆಯಳ ಪೊರೆಯಲ್ ಬಂದಿಹರಷ್ಟೆ
ಸುತನಂ ಪಡೆದರು ಕುಕ್ಷಿಲಿ ತಾವೆ
ಅತಿಮತಿ ಬೇಡವು ನೀಡಿರಿ ಕನ್ಯ ೯೦

ಅರಿಯದೆ ನುಡಿದೆನು ಕ್ಷಮಿಸಮ್ಮಮ್ಮ
ಅರಿಯಲ್ ಸಾಧ್ಯವೆ ನಿಮ್ಮನೆ ಗುಟ್ಟು
ಸಿರಿ ನೀ ಚಂಚಲೆ ಅಚಲಗೈದ
ಉರುತಮ ಮಹಿಮನ ಬಲ್ಲವರಾರು
ಉರದಲಿ ಸತಿಯಳ ಮೆರಸುವರುಂಟೆ
ಗುರುತಮ ಪ್ರೇಮವ ಸುರಿಸುವ ಸತ್ಯ
ಕಿರಿಯಳ ಪೊರೆಯುವ ಬಗೆ ಇನ್ನೇನೊ
ಹಿರಿಯಳ ನುಡಿ ಇರೆ ಭಯ ಇಲ್ಲಮ್ಮ ೯೧

ನರಜನ ಮನವೇ ಸಂಶಯ ಬೀಡು
ಪರಿಪರಿ ಯೋಚಿಸಿ ಮಿಡುಕುವರಮ್ಮ
ದೊರೆತಿರಿ ಬೀಗರು ನಿಮ್ಮಂಥವರು
ಪುರಜನ ಸಂಶಯ ಹರಿಸಲ್ ನುಡಿದೆ
ಹರಿಯನು ನಂಬದೆ ನೆಮ್ಮದಿಯೆಂತು
ಧೊರೆಗಿಹ ಪುಣ್ಯದ ಮಟ್ಟವ ಕಾಣೆ
ಶರಣ್ಯೆ ತಾಯಿಯೆ ಎನ್ನುತ ಮುನಿಯು
ಹರುಷದಿ ಬಗೆದರು ಮುಂದಿನ ಕಾರ್ಯ ೯೨

ಮದುವೆಯ ಮಂಟಪ ವೈದಿರೆ ವರನು
ಮುದಮಯವಾಯಿತು ಎಲ್ಲವು ಅಲ್ಲಿ
ಸದಮಲ ಭಕ್ತಿಯು ಉಕ್ಕಿತು ಸಭೆಗೆ
ಹೃದಯವೆ ನೀಡುತ ಕಾಣಿಕೆಯಾಗಿ
ವಿಧಿತೆರ ಪೂಜಿಸಿ ವರನಂ ದೊರೆಯು
ಪದಗಳ ಪಿಡಿಯುತ ಹಿರಿಯರನೆಲ್ಲ
ಮುದದಿಂ ದಾನಕೆ ಒಪ್ಪಿಗೆ ಕೇಳಿ
ಪದ್ಮಜೆ ಕುವರಿಯ ಕರಸಿದನಾಗ ೯೩

ನಿಲುವಾಭರಣ ಸಮೇತವೆ ಸುತೆಯ
ಚಲುವ ಕರಂಗಳ ಹರಿಯಲಿಟ್ಟು
ಅಲವ ಮಹಾತ್ಮನೆ ನಿನ್ನವಳನ್ನೆ
ಒಲಿದಿಹ ನಿನಗೇ ನೀಡಿಹೆನಿಂದು
ಲಲನೆಯೆ ಇಹ ಸರ್ವಸ್ವವುನಮಗೆ
ತಿಳಿಸುವದೇನಿದೆ ಸರ್ವಜ್ಞನಿಗೆ
ಪುಳಕಿತ ತನುವಿಂ ದೀಪರಿ ನುಡಿದು
ಅಳಿಯನ ಚರಣವ ಪಿಡಿದನು ಧನ್ಯ ೯೪

ಮಂಗಳವಾದ್ಯ ವಿಶೇಷವುಮೊಳಗೆ
ತುಂಗ ಮಹೋತ್ಸವ ನಲಿನಲಿದಾಡೆ
ಡಿಂಗರ ವೃಂದವು ನೃತ್ಯವ ಮಾಡೆ

ಅಂಗನೆ ಸಿರಿಸಹ ವೆಂಕಟ ಮೆರೆಯೆ
ಭಂಗಾರದ ಮಯವಾಗಿರೆಯೆಲ್ಲ
ಇಂಗಿರೆ ತಾಪಗಳೆಲ್ಲವು ಅಲ್ಲಿ
ಕಂಗಲು ನೋಡುವ ಯೋಗ್ಯತೆಯಂತೆ
ರಂಗನು ತೋರುವ ತನ್ನಯಕಾಂತಿ ೯೫

ನಿತ್ಯ ಸುಮಂಗಳೆ ಕನ್ಯಾಮಣಿಗೆ
ನಿತ್ಯನು ಕಟ್ಟುತ ಮಂಗಳ ಸೂತ್ರ
ನಿತ್ಯಾನಂದದಭಯವ ನಿತ್ತ
ಸುತ್ತಲು ನೆರೆದಿಹ ಭಕ್ತರಿಗಲ್ಲಿ
ಭಿತ್ತಿಲಿ ಕೆತ್ತಿಹರತ್ನಗಳಲ್ಲಿ
ಸುತ್ತಲು ಪ್ರತಿ ಪ್ರತಿಬಿಂಬಗಳೆರಚೆ
ಮೊತ್ತದಿ ದಂಪತಿ ರೂಪಗಳನ್ನೆ
ಕೆತ್ತಿದ ತೆರದಂತಾಯಿತು ಸಭೆಗೆ ೯೬

ಮುಕ್ತರ ತೆರಸುಖ ಮೂಡಿತು ಜನಕೆ
ಭಕ್ತಿಯೆ ಶಾರದೆ ಕೂಡುತ ಬಂದು
ಮುತ್ತಿನ ಆರತಿಯೆತ್ತಿದರಾಗ
ಗತ್ತಿನ ಶೃತಿತತಿ ಪಾಡಿದ ಬೊಮ್ಮ
ನೃತ್ಯವ ಮಾಡಿದ ಮೊಮ್ಮಗ ರುದ್ರ
ಸುತ್ತ ವಿಚಾರವ ನಡಿಸಿದ ಶಕ್ರ
ಸುತ್ತ ಸುಗಂಧವ ಬೀರಿದ ಪ್ರವಹ
ಇತ್ತ ಕುಬೇರನು ಫಲ ತಾಂಬೂಲ ೯೭

ಶಕ್ತಿಯ ತೆರತಮ್ಮನುಗುಣಸೇವೆ
ಭಕ್ತರು ಮಾಡುತ ಮೆರೆದರು ತಾವು
ಭೃತ್ಯರ ಭಾಗ್ಯವ ಕಂಡರು ಆಗ
ಇತ್ತರು ಬಗೆಬಗೆ ಉಡುಗೊರೆ ವಡವೆ
ಇತ್ತನು ಮಾವನು ಭಾರಿಕಿರೀಟ

ಸ್ತೋತ್ರಸುವರ್ಷವ ಕರೆದರು ಎಲ್ಲ
ಕೆತ್ತಿದರಾಗಲೆ ಹೃದಯದಿ ಹರಿಯ
ಸಾರ್ಥಕವಾದವು ಕಂಗಳು ನೋಡಿ ೯೮

ಸ್ವೀಕೃತವಾಗಲ್ ವೆಂಕಟನಿಂದ
ಪ್ರಾಕೃತವೆಲ್ಲ ಪ್ರಾಕೃತ ಸುರಭಿ
ತಾಕಿಸಿ ಕೊಟ್ಟವು ನೆರದಿಹ ಜನಕೆ
ಏಕಿನ ಗುಣಗಣ ಗಾನದ ಸೊಂಕು
ನೂಕುತ ಮನಮನ ತಲೆಗಳಿಗೇರಿ
ಝುಂಕರಿಸುತ ಧಡ ನಿಂತಿತು ಅಲ್ಲಿ
ನಾಕಕು ಮಿಗಿಲಿಹ ಸುಖಗಳೊಳ್ ಮುಳುಗೆ
ಭೀಕರ ಭವಧಗೆ ಓಡಿತುತಾನೆ ೯೯

ನೋಟವು ಆಟವು ಕೂಡಿದ ಜನಕೆ
ಊಟುಪಚಾರಗಳೆಲ್ಲವ ಹಾಗೆ
ಸಾಟಿಯು ಇಲ್ಲದ ತೆರದೊಲ್ ನಡಿಸಿ
ಹಾಟಕಮಯ ಶ್ರೀ ವೆಂಕಟಗರ್ಪಿಸಿ
ನಾಟುತ ಹೃದಯದಿ ಹರಿಯಂಬೇಗ
ದಾಟಿದ ರಾಜನು ಭವಕಡಲನ್ನು
ನಾಟಕವಾಡಿದ ವೆಂಕಟ ಕರುಣಿ
ಏಟಿದು ಕಲುಷಕೆ ಭಜಿಸಿರಿ ಬೇಗ ೧೦೦

ವೆಂಕಟನೆಂದನು ಕಿರುನಗೆ ಬೀರಿ
ಸಂಕಟವಳಿಯಲ್ ಬಂದಿಹೆ ಸಾರಿ
ಬಿಂಕದಿ ಗಿರಿಯೊಳ್ ನೆಲಸಿಹೆ ಕೇಳಿ
ಸಂಕರ ಮಯಸರಿ ಕಲಿಯಲಿ ಎಲ್ಲ
ಸುಂಕವ ನೀಡುತ ಭಕ್ತಿಯ ನನಗೆ
ಅಂಕಿತ ದಾಸನು ಶರಣೆಂದೆರಗೆ
ಶಂಕೆಯ ಮಾಡದೆ ಸಲಹುವೆನೆಂದು
ಕಂಕಣ ಕಟ್ಟಿಹೆ ನೋಡಿರಿ ಇಂದು ೧೦೧

ಜಯ ಜಯ ಕಾರವು ಮೊಳಗಿತು ಆಗ
ಜಯ ಜಯ ಸಿರಿವರ ವೆಂಕಟನಾಥ
ಜಯ ಜಯ ಶ್ರೀನಿಧಿ ಸತ್ಯನ ಸತ್ಯ
ಜಯ ಜಯ ಪೂರ್ಣನೆ ದೋಷವಿದೂರ
ಜಯ ಜಯ ಸೃಷ್ಟಾದ್ಯಷ್ಟ ಸುಕರ್ತ
ಜಯ ಜಯ ಶೃತಿತತಿ ಶಾಸ್ತ್ರಸುವೇದ್ಯ
ಜಯ ಜಯ ವಿಭುವರ ಪರಮಾನಂದ
ಜಯ ಜಯ ನಾಯಕ ಮಾಯಾರಮಣ ೧೦೨

ಅಕ್ಷಯ ಗುಣ ಗಣ ಧಾಮನೆ ಶರಣು
ಅಕ್ಷರಕ್ಷರ ವಿಲಕ್ಷಣ ಶರಣು
ತ್ರ್ಯಕ್ಷ ವಿಧೀರ ಸುರಕ್ಷಕ ಶರಣು
ಸೂಕ್ಷ್ಮನೆ ಸರ್ವಾಧ್ಯಕ್ಷನೆ ಶರಣು
ಅಕ್ಷರಳೀಶನೆ ಪ್ರೇರಕ ಶರಣು
ಅಕ್ಷರ ಸರ್ವಸುಸಾಕ್ಷಿಯೆ ಶರಣು
ಪಕ್ಷಪಾತ ವಿವರ್ಜಿತ ಶರಣು

ರಕ್ಷಸರಿಪು ನಿರಪೇಕ್ಷನೆ ಶರಣು ೧೦೩
ಶ್ರೀಕರ ಶುಭಕರ ಭವಹರ ಶರಣು
ನಾಕಪ ಪುಣ್ಯ ಶ್ಲೋಕನೆ ಶರಣು
ಐಕಾತ್ಮ ಪ್ರತ್ಯಯ ಸಾರನೆ ಶರಣು
ಭೀಕರ ದುರಿತ ವಿನಾಶಕ ಶರಣು
ಸಾಕುತ ಭಕ್ತರ ಪೊರೆವಗೆ ಶರಣು
ಲೋಕವ ನೂಕುವ ಶ್ರೀಪತಿ ಶರಣು
ಪ್ರಾಕೃತ ವರ್ಜಿತ ದೇವನೆ ಶರಣು
ಏಕನೆ ಕೇವಲ ಬಲ ಬಲ ಶರಣು ೧೦೪

ಜಯ ಜಯ ಸಾಮನೆ ಬೃಹತೀನಾಥ
ಜಯ ಜಯ ವಿಷ್ಣುವೆಸರ್ವಾಧಾರ
ಜಯ ಜಯ ಹಯಮುಖವೇದವ್ಯಾಸ

ಜಯ ಜಯ ನರಹರಿ ಜೀವಾಂತಸ್ಥ
ಜಯ ಘೋಷಾದಿ ನಿಖಿಳ ಶಬ್ಧಸುವಾಚ
ಜಯ ಜಯ ಸೀಮಾಶೂನ್ಯ ಅನಂತ
ಜಯ ಜಯ ಶ್ರೀ ಪದ್ಮಾವತಿ ರಮಣ
ಜಯ ಜಯವೆನ್ನುತ ಬಾಗಿದವರೆಲ್ಲ ೧೦೫

ಎಂಟಾನೆಂಟದಿನಂಗಳ ಮದುವೆ
ಕಂಟಕ ಕಾಣದೆ ಮುಗಿಸುತ ಭೂಪ
ನೆಂಟರ ಮನ್ನಿಸಿ ಯೋಗ್ಯತೆಯಂತೆ
ಭಂಟರ ತೆರದೊಳ್ ಬೀಗರ ಮುಂದೆ
ಅಂಟುತ ಸೇವಿಸಿ ಶಕ್ತಿಯ ತೆರದಿ
ಕುಂಠಿತ ಕಂಠದೀನುಡಿದನು ಹರಿಗೆ
ರಂಟೆಯು ಬಹು ತೆರವಾಗಿರಬಹುದು
ಉಂಟಿಹ ನ್ಯೂನತೆ ಕ್ಷಮಿಸಿರಿಯೆಂದು ೧೦೬

ಪೂರ್ಣನು ಮನ್ನಿಸಿ ಸುರಪರಿವಾರ
ಧ್ಯಾನಿಪೆ ನಿಮ್ಮದು ಮಹದುಪಕಾರ
ಮಾನವ ತಂದಿರಿ ಒಂಟಿಗ ನನಗೆ
ಸ್ಥಾನವು ನಿಮ್ಮದು ಸುಸ್ಥಿರವಿರಲಿ
ಮಾನ್ಯಸು ಸೇವಕರೆನಿಸುವ ನಿಮ್ಮ
ಧ್ಯಾನಿಸಿ ವಲುಮೆಯ ಪಡೆಯದ ನರರು
ಏನನುಗೈದರು ವಲಿಯೆನು ಕೇಳಿ
ನಾನಿಹೆ ನಿಮ್ಮವನೆಂದನು ಶೌರಿ ೧೦೭

ವಾಂಛಿತವೆಲ್ಲವ ಪಡೆಯುತ ಮಂದಿ
ಮೆಚ್ಚುತ ಮನದೊಳ್ ಹರಿವಾತ್ಸಲ್ಯ
ಸಂಚಿಲಿ ತುಂಬುತ ಉಡುಗೊರೆಎಲ್ಲ
ಕಂಚು ಸುಕಂಠದಿ ಪೊಗಳುತ ಧೊರೆಯ
ಸಂಚಿತ ದುರಿತಗಳೆಲ್ಲವ ನೀಗಿ

ಕೊಂಚವೆ ಕೊಂಚವೆ ಸಾಗುತ ಮನೆಗೆ
ಹಂಚುತ ಹರಿ ಪ್ರಸಾದವನಲ್ಲಿ
ಮಿಂಚುವ ಹರಿಯಂ ನೆನೆದರು ಮನದಿ ೧೦೮

ತೆರಳಲ್ ನೆಂಟರು ಇಷ್ಟರು ಎಲ್ಲ
ಸ್ಮರಿಸೆನು ಭಕ್ತರ ದೋಷವ ನಾನು
ಕೊರತೆಗಲಿಲ್ಲದೆ ನಡೆಯಿತು ಮದುವೆ
ಗುರುಶ್ರಮವಾಯಿತು ನಿಮಗೆಂತೆಂಬೆ
ಕರಗದ ಭಾಗ್ಯವು ಶೀಘ್ರದಿ ನಿಮ್ಮ
ಕರಗತ ವಾಗಲಿ ಎನ್ನಲು ಅಳಿಯ
ಪರಮಾನಂದದಿ ಮುಳುಗಿದ ರಾಜ
ವರಸುತೆ ಭಾಗ್ಯವು ಎಲ್ಲವು ಎಂದ ೧೦೯

ತಂಗುತ ಕೆಲದಿನ ಮಾವನ ಗೃಹದಿ
ಗಂಗಾಜನಕನು ಸಾಗುತ ಮುಂದೆ
ತುಂಗತಪೋನಿಧಿ ಅಗಸ್ತ್ಯರೆಡೆಯ
ಅಂಗನೆ ಸಹಿತಲೆ ಸೇರಲ್ ಮುನಿಯು
ತಿಂಗಳು ಆರನು ಕಳೆಯದೆ ಗಿರಿಯ
ಮಂಗಳ ಮಹಿಮನೆ ಏರುವಿಯೆಂತು
ಭಂಗವಿದೂರನೆ ಶಾಸ್ತ್ರವು ಮಾನ್ಯ
ತಂಗಿರಿ ಮನೆಯಿದು ನಿಮ್ಮದುಎಂದ ೧೧೦

ಕಾಲದಿ ಅಲ್ಲಿಯೆ ನೆಲಸುತ ದೇವ
ಪಾಲಿಸಿ ಮೆರೆಯಲ್ ಭಕ್ತರ ಭಯಕೆ
ಕಾಲವ ನೈದಿದ ಮಾವನು ಬೇಗ
ಆಳಲು ರಾಜ್ಯವ ಪುಟ್ಟಿತು ಕಲಹ
ಧಾಳಿಗೆ ನಿಂತರು ಮಗ ಚಿಕ್ಕಪ್ಪ
ಕೆಳಲ್ ಉಭಯರು ದೇವ ಸಹಾಯ
ಪಾಲಿಸಿ ತೊಂಡಮಾನಗೆ ಚಕ್ರ
ಧಾಳಿಗೆ ಸುತ ನೆರವಾದನು ತಾನೆ ೧೧೧

ಚಕ್ರವ ಬಿಡೆ ವಸುಧಾನನ ಮೇಲೆ
ರಕ್ಷಿಸ ಲಡ್ಡವ ಬಂದನು ಶ್ರೀಶ
ಫಕ್ಕನೆ ಮೂರ್ಛಿತನಾಗಲು ತೊಂಡ
ರಕ್ಷಿಸಿ ಎಬ್ಬಿಸೆ ಭಕ್ತನು ಬಂದು
ಚಿಕ್ಕವನೇ ರಾಜಾರ್ಹನು ಸರಿಯೆ
ಪಕ್ವಸುಭಕ್ತಿಯ ಭಿಕ್ಷೆಯ ನೀಡು
ಅಕ್ಕರೆ ನಿನ್ನದು ಸಿಕ್ಕರೆ ಸಾಕು
ರಕ್ಷಿಸು ಎನ್ನುತ ಮೊರೆಯನು ಹೊಕ್ಕ ೧೧೨

ಹಿರಿಯರ ಮೇಲೆಯೆ ಕೈಮಾಡಿದೆನೆ
ಗುರುತರ ದ್ರೋಹವ ಘಳಿಸುತ ಕೆಟ್ಟೆ
ಕರಕರೆ ರಾಜ್ಯವು ಬೇಡವುನನಗೆ
ಕರುಣವ ಕೊಡುವ ಸುಧಾನನು ನುಡಿಯೆ
ಸರಿಸರಿ ಪಾಲನು ಹಂಚುತ ನಾಥ
ಪೊರೆಯುತಲುಭಯರ ಹರಿ ಸಂತೈಸೆ
ಹರುಷದಿ ಭೋಗಿಸುತಿದ್ದರುರಾಜ್ಯ
ಮರೆಯದೆ ಧರ್ಮವ ದೇವನ ದಯದಿ ೧೧೩

ಸಾರುತ ಬರುತಿಹ ಕಲಿಬಹುತೀವ್ರ
ಚಾರು ಸುವರ್ಣದ ಮಂದಿರವೊಂದು
ತೀವ್ರವೆ ಕಟ್ಟಿಸು ತೊಂಡನೆ ಎನ್ನೆ
ಶೂರನು ವಿಶ್ವಕರ್ಮನ ಕರಸಿ
ಶೌರಿಯ ಆಜ್ಞೆಯ ನಡೆಸಿದನಾಗ
ಹಾರುತ ಬಂದರು ಸುರಪರಿವಾರ
ಭಾರೀ ಉತ್ಸವ ನಡೆಸಿದ ಬ್ರಹ್ಮ
ಆರದ ನಂದಾದೀಪವ ನಿಟ್ಟ ೧೧೪

ಇಂದಿಗು ಬ್ರಹ್ಮನನಾಮದಿ ಉತ್ಸವ
ಛಂದದಿ ನಡೆವುದು ಪ್ರತಿ ಸಂವತ್ಸರ
ನಂದದು ದೀಪವು ಕಲಿಕೊನೆ ತನಕ

ಕುಂದುಗಳ್ ಅಳಿಯಲ್ ಕಪ್ಪವ ಕೊಂಬ
ವಂದಿಪ ಭಕ್ತರ ಬಹುತೆರ ಪೊರೆವ
ಇಂದಿರೆಯರಸನ ನಾಟಕ ಪ್ರಬಲ
ಎಂದಿಗು ಬಿಡನವ ಶರಣೆಂದವರ
ಬಂಧನ ನಾಶವೆ ನಂಬಿದ ಜನಕೆ ೧೧೫

ವಿಪ್ರನ ಸತಿಸುತರನ್ನವ ಕಾಣದೆ
ಕ್ಷಿಪ್ರದಿ ಮರಣವ ಪೊಂದಿರೆ ತೊಂಡ
ತಪ್ಪಿನ ತಾಪದಿ ಮರುಗುತ ಧೊರೆತಿ
ಮ್ಮಪ್ಪನ ಶರಣಂ ಬೇಡಲು ಸ್ವಾಮಿ
ದಪ್ಪುತ ಆಸ್ಥಿ ಸುತೀರ್ಥದಿ ಅದ್ದಿ
ಕ್ಷಿಪ್ರದಿ ಸಲಹಿದ ಕರುಣಾಮಯನು
ಒಪ್ಪಿಸೆ ಭೀಮ ಮೃದಾಭರಣಂಗಳ
ತಪ್ಪದೆ ಕಾಯ್ದಮಹಾಂತಗೆ ಶರಣು ೧೧೬

ಮಂಗಳ ಜಯ ಜಯ ಭೂ-ವರಾಹಗೆ
ಮಂಗಳ ವೆಂಕಟ ಪದ್ಮಾಕಾಂತಗೆ
ಮಂಗಳ ಕಪಟಸುನಾಟಕ ಪ್ರಭುವಿಗೆ
ಮಂಗಳ ಜಯ ಭೂವೈಕುಂಠೇಶಗೆ
ಮಂಗಳ ಮಂಡೆಯ ಒಡೆಯಿಸಿ ಕೊಂಡಗೆ
ಮಂಗಳ ಕ್ರೋಡನ ಬೇಡಿದ ಜಾಲಗೆ
ಮಂಗಳ ಬಕುಳೆಯ ಮೋಹದ ಕಂದಗೆ
ಮಂಗಳ ಮಡದಿಯ ಹುಡುಕುತ ನಡೆದವಗೆ ೧೧೭

ಮಂಗಳ ಬಕುಳೆಯ ಕಳಿಸಿದ ಚತುರಗೆ
ಮಂಗಳ ಕಣಿಗಳ ಹೇಳಿದ ಜಾಣಗೆ
ಮಂಗಳ ಸುರಗಣ ಕರಸಿದ ಶೂರಗೆ
ಮಂಗಳ ಆಟದಿ ಸಾಲವ ತಂದಗೆ
ಮಂಗಳ ಜಯ ಜಯ ಸಿರಿಮನಹಾರಿಗೆ

ಮಂಗಳ ಮದುವೆಯ ಹೂಡಿದ ದೇವಗೆ
ಮಂಗಳ ಶುಕಮುನಿ ತೋಷ ಪ್ರದಾತಗೆ
ಮಂಗಳ ರಾಜಕುಮಾರಿಯ ವರನಿಗೆ ೧೧೮

ಮಂಗಳ ರಾಜನ ಪೂಜೆಯ ಕೊಂಡಗೆ
ಮಂಗಳ ತನ್ನ ವಿಭೂತಿಯ ತೋರ್ದಗೆ
ಮಂಗಳ ಬಹುವಿಧ ತೋಷವ ತಂದಗೆ
ಮಂಗಳ ಜಯ ಜಯ ನಿತ್ಯಾನಂದಗೆ
ಮಂಗಳ ಪದ್ಮಜೆ ಮೋಹವ ತಂದಗೆ
ಮಂಗಳ ಪಂಕಜವದನೆಯ ನಾಥಗೆ
ಮಂಗಳ ರಾಜನ ಅಳಿಯನು ಆದಗೆ
ಮಂಗಳ ಜಯ ಜಯ ಶ್ರೀನಿವಾಸಗೆ ೧೧೯

ಕವಿತೆಯ ಚಪಲದ ಫಲವಿದು ಅಲ್ಲ
ಕವಿತಾ ಗಂಧವು ನನ್ನಲ್ಲಿಲ್ಲ
ಭುವನವಿಮೋಹಕ ವೆಂಕಟನಾಥ
ಸ್ತವನವ ಗೈಯದೆ ಇಹೆಏಕೆಂದು
ತವಕದಿ ಹೃದಯದಿ ದುಗುಡವ ತಂದು
ಭವಹರ ಕಥೆಯಿದು ಬರಿಯೆಂತೆಂದು
ಅವಚಿತ ಪ್ರೇರಿಸೆ ಬರೆದಿಹೆ ಕೇಳಿ
ಕವಿವರ ವೆಂಕಟ ಒಪ್ಪುವ ಸತ್ಯ ೧೨೦

ನಿತ್ಯ ಸುಮಂಗಳ ಚರಿತ ಮಹಾಂತ
ಭೃತ್ಯರ ನೆತ್ತುವ ಭವ ಕಡಲಿಂದ
ಭಕ್ತಿಲಿ ಪಾಡಲು ಈ ಕಥೆಯೆಂಬೆ
ಸತ್ಯನು ವಲಿಯುವ ಸಂಶಯವಿಲ್ಲ
ಉತ್ಸವ ಸೂರೆಯು ಆಗುವದವಗೆ
ಮತ್ತಿಹ ಬಯಕೆಯ ಸಿದ್ಧಿಯು ಸತ್ಯ
ಮುಕ್ತಿಯು ಸಿಗುತಿರೆ ಬೇಡುವದೇಕವ
ಭೃತ್ಯರ ಭಾಗ್ಯವ ಸಾಕೆಂತೆನ್ನಿ ೧೨೧

ಉರಗಾದ್ರಿವಾಸವಿಠಲನ ದಾಸರ
ಚರಣ ಸರೋಜದಿ ಬಾಗುತವಿನಯದಿ
ಪರಿಸರ ವಿಧಿನುತ ಇಂದಿರೆಯರಸನ
ಕರುಣವ ಪಡೆದಿಹ ಭಕ್ತರಿಗೊಂದಿಸಿ
ಸುರಪತಿ ಜಯತೀರ್ಥ ವಾಯ್ವಾಂತರ್ಗತ
ವರಸಮರಹಿತ "ಶ್ರೀ ಕೃಷ್ಣವಿಠಲ"ನ
ಚರಣ ಸರೋಜದಿ ಸರ್ವಸಮರ್ಪಿಸಿ
ಹರಸುತ ನಿಜಹರಿದಾಸನ ಮಾಡೆಂಬೆ ೧೨

॥ ಶ್ರೀ ಶ್ರೀನಿವಾಸಾಯ ನಮಃ ॥
॥ ಶ್ರೀ ವೆಂಕಟೇಶಾಯ ಮಂಗಳಂ ॥
–: ಸಂಪೂರ್ಣಂ:–

## ಗಜೇಂದ್ರ ಮೋಕ್ಷ

### ೧೮

ವರಶಂಖಗದೆ ಪದ್ಮಕರದಿ ಚಕ್ರವ ಪಿಡಿದ
ಗರುಡಗಮನ ನಮ್ಮ ಕರಿವರದಹರಿಯನ್ನ
ನಿರುತ ನೆನೆನೆನೆದು ಬದಿಕಿರಯ್ಯಾ ಪ

ಹರಿಧ್ಯಾನ ಹರಿಸೇವೆ ಹರಿಭಕ್ತಿ ಹರಿಚರಿತೆ
ದುರಿತದುರ್ಗಕೆಕುಲಿಶ ವರಮುಕ್ತಿಸೋಪಾನ ಕಾಣಿರಯ್ಯಾ ಅ.ಪ.

ಕ್ಷೀರಸಾಗರ ಮಧ್ಯೆ ಗಿರಿತ್ರಿಕೂಟ ದೊಳಗೆ
ಇರುವುದೂ ಖುತುಮಂತ ವರುಣನ ವರವನವು ಅಲ್ಲಿ
ಪರಿಪರಿಯ ಲತೆಬಳ್ಳಿ ಸರಸಸ್ಥಾನಗಳಲ್ಲಿ
ಮೆರೆವೋರು ಸುರಸಂಘ ನಾರಿಯರ ಸಹಿತಾ ೧

ಪದ್ಮಗಾಶ್ರಯವಾದ ಪದ್ಮಕೊಳಾದೊಳಗೆ
ಮದಿಸಿದಾ ಗಜವೊಂದು ಐದಿತು ಪರಿವಾರ ಸಹಿತ

ವಿಧಿಯ ಬಲ್ಲವರಾರು ಮುದದಿರ್ದ ಆ ಗಜಕೆ
ವಿಧಿ ವಕ್ರಗತಿಯಿಂದ ಪಾದವನೆ ಪಿಡಿಯಿತು ನಕ್ರವೊಂದು ೨

ಒಂದು ಸಾವಿರ ವರುಷ ಕುಂದದೆಲೆ ಕರಿಮಕರಿ
ನಿಂದು ಹೊರಾಡೆ ಸುರವೃಂದ ಬೆರಗಾಯಿತು
ಬಂಧು ಬಳಗವು ಮತ್ತೆ ಅಂದ ಹೆಂಡಿರು ಎಲ್ಲ
ಕುಂದು ಅಳಿಸದೆ ಇರಲು ಛಂದದಲಿ ಯೋಚಿಸಿತು ಗಜವೂ ೩

ಏನಿದ್ದರೇನಯ್ಯ ಶ್ರೀನಿವಾಸನಕೃಪೆಯು
ಇನ್ನಿಲದಾಮೇಲೆ ಕುನ್ನಿಗೆ ಸರಿಎಂದು
ಹೀನ ಎನ್ನಯ ಜನ್ಮ ದೀನ ಭಾವದಿ ಹರಿಯ
ಮಾನವನು ಬದಿಗಿಟ್ಟು ಧ್ಯಾನಿಸಿ ಸ್ತುತಿಸಿದಾ ೪

ಸತ್ಯಶಾಶ್ವತಭೋಕ್ತ ಸೃಷ್ಟ್ಯಾದಿಕರ್ಮವಿಗೆ
ನಿತ್ಯ ತೃಪ್ತನು ಆದ ಶಾಡ್ಗುಣ್ಯಪರಿಪೂರ್ಣನೆ ವಂದಿಸುವೆನೋ
ಓತಪ್ರೋತದಿ ಜಗದಿ ವ್ಯಾಪ್ತ ಆಪ್ತನು ಆದ
ಉತ್ಪತ್ತಿವರ್ಜಿತ ಅಚ್ಯುತಾನಂತನಿಗೆ ಎತ್ತಿ ಸೊಂಡಿಲನಾ
ಆರ್ತದಲಿ ಕರೆವೆನೋ ೫

ಎಲ್ಲಕಡೆಯಲಿ ಇರ್ಪ ಎಲ್ಲರೂಪವ ತಾಳ್ವ
ಎಲ್ಲ ಪ್ರೇರಣೆಮಾಳ್ಪ ಎಲ್ಲರಿಂ ಭಿನ್ನನಿಗೆ ವಂದಿಸುವೆನೋ
ಎಲ್ಲರಿಂ ಉತ್ತಮಗೆ ಎಲ್ಲರಾ ಬಿಂಬನಿಗೆ
ಎಲ್ಲರ ವಾಚ್ಯನಿಗೆ ನಲ್ಲನೆಂತೆಂದು ನಾಕರೆವೆನೋ ೬

ಎಲ್ಲವಾ ತಿಳಿದವಗೆ ಎಲ್ಲ ಕಾಲಗಳಲ್ಲಿ
ಎಲ್ಲ ಕೆಲಸಗಳನ್ನು ನಿಲ್ಲದೆಲೆ
ಮಾಡುವಗೆ ವಂದಿಸುವೆನೋ
ಎಲ್ಲರನು ಗೆದ್ದವಗೆ ಎಲ್ಲರಾನಲ್ಲನಿಗೆ
ಎಲ್ಲ ದೋಷವಿಹೀನ ಒಳ್ಳೆ ಗುಣ ಪೂರ್ಣನ ಕರೆವೆನೋ ೭

ನಿನ್ನ ತಿಳಿದವರಿಲ್ಲ ನಿನ್ನ ಮೀರಿದುದಿಲ್ಲ
ಜನನ ಮರಣಗಳಿಲ್ಲ ನಿನಗಿಲ್ಲ ಸಮ ಅಧಿಕ ವಂದಿಸುವೆನೋ
ನಿನ್ನನಾಮಕೆ ಗುಣಕೆ ನಿನ್ನ ಅವಯವಕೆ
ನಿನ್ನ ಕ್ರಿಯ ರೂಪಗಳಿಗೆ ಇನ್ನಿಲ್ಲವೊ ಭೇದಸಾರಿ ನಾಕರೆವೆನೋ ೮

ವೇದಗಮ್ಯನುನೀನೆ ವೇದದಾಯಕ ನೀನೆ
ವೇದಾತೀತನು ನೀನೆ ಸಾಧು ಪ್ರಾಪ್ಯನುನೀನೆ ವಂದಿಸುವೆನೋ
ಖೇದವರ್ಜಿತನೀನೆ ಅಂದ ಸಾರವು ನೀನೆ
ಬಂಧನೀಡುವ ನೀನೆ ಅದ್ಭುತ ಅಚಿಂತ್ಯಶಕ್ತಿವಂತನ ಕರೆವೆನೋ ೯

ಜ್ಞಾನಿಗೋಚರನೀನೆ ಗುಣಾತೀತನು ನೀನೆ
ಗುಣಪ್ರವರ್ತಕನೀನೆ ಅನಾಥ ಸರ್ವಸಮ ವಂದಿಸುವೆನೋ
ಜ್ಞಾನದಾಯಕನೀನೆ ಆನಂದಮಯನೀನೆ
ನೀನೇ ಸರ್ವಾಧಾರ ನೀನೆ ಏಕನು ಎಂದು ಕೂಗಿ ನಾಕರೆವೆನೋ ೧೦

ಸಾಕಾರ ನಿರಾಕಾರ ಆಕಾರ ಅಹೇಯ
ಓಂಕಾರ ವಾಚ್ಯನೆ ಸಾಕಲ್ಯಸಿಗದವನೆ ಸ್ವೀಕಾರ ಮಾಡೋ
ವಿಕಾರ ವರ್ಜಿತನೆ ಲೋಕೈಕವೀರಾನೆ
ನೀ ಕೇವಲನು ಮುಕ್ತೇಶ ಸಲಹೋ ೧೧

ಏನು ಕೊಡಲೊ ದೇವ ದೀನನು ನಾನಯ್ಯ
ನಿನ್ನದೇ ಈ ಭಾಗ್ಯ ಮನ್ನಿಸುತ ದಯಮಾಡಿ ಸಲಹೋ
ಘನ್ನಕರುಣಾಳುವೆ ಅನ್ಯರನು ನಾ ನೊಲ್ಲೆ
ನಿನ್ನವನು ನಿನ್ನವನೋ ನಿನ್ನ ಚರಣಕೆ ಶರಣು ಶರಣೂ ೧೨

ಪರಿಪರಿಯಲಿ ಕರಿ ತಾನು ಮೊರೆಯಿಡುತ ಕೂಗಲು
ಸುರವೃಂದ ಯೋಚಿಸುತ ಹರಿಯಲ್ಲದನ್ಯತ್ರ
ಅರಿಯೆವೀಗುಣವೆಂದು ಅರಿತು ಸುಮ್ಮನಿರಲೂ

ಹರುಷದಿಂದಲಿ ಹರಿಯು ಗುರುಡನೇರುತ ಬರಲು
ತರಿದು ನಕ್ರನ ಭರದಿ ಕರಿಯಪೊರೆಯೆ ಆದ ೧೩

ಏನೆಂದು ವರ್ಣಿಸಲಿ ಶ್ರೀನಿವಾಸನ ಕರುಣ
ದೀನ ಭಕ್ತರ ಮೇಲೆ ಸಾನುರಾಗದಿ ಕರಿಯ ಹಿಡಿದೆತ್ತಿದಾ
ಇನ್ಯಾಕೆ ಭಯವಯ್ಯ ಘನ್ನ ಇಂದ್ರದ್ಯುಮ್ನನೆ ಏಳು
ಮುನ್ನಿನಾ ದೋಷವಿದು ಇನ್ನು ನೀ ಧನ್ಯನಹುದೋ ೧೪

ದೇವಲನ ಶಾಪದಲಿ ಆ ವರ ನಕ್ರನಾಗಿದ್ದ
ಶ್ರೀವರನ ಭಕ್ತ ಹೂಹೂ ಗಂಧರ್ವನೆರಗಿ ಬಿದ್ದನು ಹರಿಗೇ
ದೇವೇಶ ಹುಸಿನಗುತ ಈವೆ ವರವನು ಕೇಳಿ
ಯಾವಾತ ಈ ಕಥೆಯ ಭಾವಶುದ್ಧದಿ ಭಜಿಸೆ ಉದಯದಲಿ
ನಾ ಒಲಿವೆ ತವಕದಲಿ ಎಂದನೂ ೧೫

ಹರಿಗೆ ಸಮರಾರಿಲ್ಲ ಹರಿಭಕ್ತ ಗೆಣೆಯಿಲ್ಲ
ಹರಿ ಹರೀಶ ಶರಣೆಂದು ಸುರರು ಮೊರೆಯಿಟ್ಟರಾಗ
ಹರಿವಾಯುಗುರುಗಳು ಕರುಣದಿಂದಲಿ ಇದನು
ಅರುಹಿ ಬರೆಯಿಸಿದರಿಂದು ಪೋರನನು
ಮನ್ನಿಪುದು ಬುಧರೂ ೧೬

ಮುದ್ದುಜಯತೀರ್ಥರ ಹೃದಯದಲಿನಲಿಯುವ
ಮಧ್ವಾಂತಃಕರಣದಿ ಮುದ್ದಾಗಿ ಕುಣಿಯುವಂಥ
ಮಾಧವ ಶ್ರೀಕೃಷ್ಣವಿಠಲರಾಯನು ಬೇಗ
ಮುದ ಮೋದ ಸುರಿಸುವ ಈ ಪದವ ಪಠಿಸಲೂ ೧೭

## ಹರಿಸಂಕೀರ್ತನೆ

೧

ಇದನಾದರು ಕೊಡದಿದ್ದರೆ ನಿನ್ನ-ಪದದ
ಸೇವೆಗೆ ಜನರೊದಗುವರೆ ಪ

ದೊರೆತನವಾಗಬೇಕೆನಲಿಲ್ಲ-ಬಲು ಸಿರಿತನವನು ವಾಂಛಿಸಲಿಲ್ಲ
ಪರಿಪರಿಭೋಗದ ಸ್ಪೃಹೆಯನಗಿಲ್ಲ-ನಿನ್ನ ಸ್ಮರಣೆ
ಯೊಂದಿತ್ತರೆ ಸಾಕಲ್ಲ ೧

ಅನ್ನವಸ್ತ್ರವಕೇಳುವುದಿಲ್ಲ ಒಳ್ಳೆ-ಚಿನ್ನ ಬಣ್ಣವ ಕೊಡುಎನಲಿಲ್ಲ
ಹೆಣ್ಣುಮಣ್ಣಿನೊಳಾಸೆ ಯನಗಿಲ್ಲ-ಪರಿ-ಪೂರ್ಣ
ನೀನೊಲಿದರೆ ಸಾಕಲ್ಲ ೨

ಸುರರ ಭೋಗದಿ ಮನವೆನಗಿಲ್ಲ-ಪುಲಗಿರಿ ದೊರೆ
ವರದ ವಿಠಲ ಬಲ್ಲೆ ನೀನಿದಸಲ್ಲ ೩

೨

ಈತ ನೀತನೇ ರಮಾನಿವಾಸನು ಕೇಳಿಜನರು
ಈತನೀಗಚಿದ್ವಿಲಾಸನು ಪ

ಈತನೀಗ ಸರ್ವಭೂತ ಜಾತಚೇತನರ್ಗೆ ಸೌಖ್ಯ
ದಾತವೇದ ಶಾಸ್ತ್ರ ವಿಖ್ಯಾತ ಲೋಕೈಕನಾಥ ಅ.ಪ.

ಬ್ರಹ್ಮರೂಪನಿಂದ ಜಗವ ನಿರ್ಮಿಸುತ್ತತಾನೆ ಸರ್ವ
ಕರ್ಮಫಲಗಳನ್ನೆ ಕೊಟ್ಟು ಶರ್ಮಪಡಿಸುವ

ಚರ್ಮವಸ್ತ್ರವುಟ್ಟು ರೌದ್ರ ಕರ್ಮಿಯಾಗಿ ಕಡೆಗೆ ಕಾಲ
ಧರ್ಮವನ್ನು ತೋರಿ ಜಲದೊಳೊಮ್ಮೆ ಮಲಗಿ ತೇಲುತಿರುವ ೧

ರಮೆಯನಾಳ್ವ ಭಾಗ್ಯವಂತ ಕ್ಷಮೆಯನಾಳ್ವರಾಜ್ಯಕರ್ತ
ಕಮಲಭವನ ಪಡೆದ ಹಿರಿಯನಮರರೊಡೆಯ
ಸುಮಶರನಪೆತ್ತ ಚೆಲುವ ನಮಲಗಂಗೆಯಿತ್ತು ನಲಿವ
ಸಮರವೈರಿಗಳನು ಕೊಲುವ ಕಮಲನಾಭ ವಾಸುದೇವ ೨

ಉರಗಶಯನ ಗರುಡಗಮನ ಪರಮಪದವನುಳಿದುಶೇಷ
ಗಿರಿಯೊಳಿರ್ದುಬಂದ ವ್ಯಾಘ್ರಗಿರಿಯ ಶಿಖರಕೆ
ಭರದಿ ನಿತ್ಯಮುಕ್ತರೊಡನೆ ಕರದಿ ಶಂಖಚಕ್ರಪಿಡಿದು
ಕರುಣದಿಂದ ಚರಣ ಸೇವಕರನು ಪೊರೆವ ವರದವಿಠಲ ೩

## ೩

ಎಂತುನುತಿಪೆ ನಾನು–ಈ ಜಗ । ದಂತರ್ಯಾಮಿಯನು ಪ

ಅಂತರಹಿತನನು ಚಿಂತಿಸಿಪದನಖ ದಂತರಪರಿಯವು
ಸಂತತ ವಾಙ್ಮಾನ ಅ.ಪ.

ಸಾಸಿರ ಮುಖದವನ–ಅವಯವ–ಸಾಸಿರವುಳ್ಳವನ
ಸಾಸಿರ ಪೆಸರವನ–ರೂಪಿ ಸಾಸಿರವಾಗಿಹನ
ಮೀಸಲಳಿಯದಂತೀ ಸಚರಾಚರ
ವಾಸಿಯಾದ ಶ್ರೀ ವಾಸುದೇವನು ೧

ಜಗವನು ನಿರ್ಮಿಸುವ–ಬೊಮ್ಮನು–ಮಗನೆಂದೆನಿಸಿರುವ
ಬಗೆಯುವದೀಜಗವ–ಜಠರದಿ–ನುಸುಳಿಸಿಕೊಂಡಿರುವ
ಮಗುಳಿದ ನಳಿಯುವ
ನಗಜಾಪರಮೇಮ್ಮಗನೆಂಬುವರೀ । ಯಗಣಿತ ಮಹಿಮನ ೨

ನಿಗಮವ ಪೆತ್ತವನ-ಬೊಮ್ಮಗೆ-ನಿಗಮವನಿತ್ತವನ
ನಿಗಮೋದ್ಧಾರಕನ-ನಿತ್ಯದಿ-ನಿಗಮಗೋಚರನ
ಬಗೆಬಗೆಯೋಗಿಗಳ ಧ್ಯಾನಕೆನುಗಳಿದ ಶ್ರೀಪದ
ಯುಗಳಾಂಬುಜನನು ೩

ಮಾಯಾಧೀಶ್ವರನ-ದೇವನಿ-ಕಾಯಾರಾಧಿತನ
ಕಾಯಜ ಸುಂದರನಾ-ಜೀವನಿ-ಕಾಯಕೆ ಮಂದಿರನಾ
ಮಾಯಾಕಾರನಿವ ನಾಯವ ನರಿಯದೆ
ದಾಯಗೆಟ್ಟರ ನ್ಯಾಯದಿ ಮುನಿಗಳು ೪

ಪರಮಪದದೊಳಿಹನಾ
ಪುನರಪಿ- ತರಣಿಯೊಳಿರುತಿಹನ
ಶರನಿಧಿ ಮಂದಿರನಾ-ಶ್ರೀ ಪುಲಿಗಿರಿಯೊಳು ನಿಂದಿಹನ
ನಿರುತವು ತನ್ನಯ ಚರಣವ ನಂಬಿದ
ಶರಣರ ಪೊರೆಯುವ-ವರದ ವಿಠಲನಾ ೫

೪

ಎಂತೋಪೂಜಿಪುದಂತರ್ಯಾಮಿಯಾ-ನಂತಾದಿರಹಿತನ
ಚಿಂತಾದೂರನ ಚಿನುಮಯ ರೂಪನಾ ದೆಂತೋಧ್ಯಾನಿಪೆ ನಾ ಪ

ಈಶ-ವೀಶ-ವಾಹನಗೀಸಚರಾಚರ ಮಿಸಲಿಗೊಳಗಲ್ಲಾ
ಆಸನವಿತ್ತರ ವಾಸುಕಿ ಭೋಗನಿವಾಸಿಗೆ ತರವಲ್ಲಾ ೧

ಚರಣದಿ ಗಂಗೆಯ ಪಿಸುವಾತನ ಚರಣವ ತೊಳೆಯುವರೇ
ತರಣಿಗೆ ತೇಜದ ಭರಣಿಗೆ ದೀಪದ ಸರಣಿಯ ತೋರುವರೆ ೨

ವಿಗ್ರಹರಹಿತನಿಗರ್ಘ್ಯದ ಪೂಜೆಯು ದುರ್ಘಟ ಕಾರ್ಯವಲೆ
ಭರ್ಗಾದ್ಯಮರರ ವರ್ಗವು ತಮ್ಮ ನಿಸರ್ಗದಿ ಕಾಣದಲೆ ೩

ಕಲಶಾಂಬುಧಿಯೊಳು ನೆಲಸಿಹಮೂರ್ತಿಗೆ-ಸಲಿಲ ಸ್ಪರ್ಶನವೆ
ಜಲರುಹನೇತ್ರಗೆ ಜಲರುಹಗಾತ್ರಗೆ ಜಲದಲ್ಲಿ ಮಜ್ಜನವೆ ೪

ಸ್ವರ್ಣಾಂಬರಗಳ ಬಣ್ಣಿಸುಡುವಗೆ ಬಣ್ಣದವಸ್ತ್ರಗಳೆ
ಉನ್ನತ ಕೌಸ್ತುಭರನ್ನದ ತೊಡವಿಗೆ ಬಿನ್ನಣದೊಡವೆಗಳೆ ೫

ಬಿಸಜನಾಭನಿಗೆ ಕುಸುಮಾಸ್ತ್ರನ ಮಾನಸದಿಂಪಡೆದವಗೆ
ಮಿಸುಪ ತುಲಸಿಯಿಂದೆಸವಗೆ ಪೂಗಳ ವಿಸರ ಮನೋಹರವೇ ೬

ಗಂಧವಾಹನ ಸುವಿಂದಲಿಸೃಜಿಸಿದ ಗಂಧವತೀಶನಿಗೆ
ಗಂಧಧೂಪಗಳು ಬಂಧುರಂಗಳೆ ಗಂಧರ್ವಾನತನಿಗೆ ೭

ವೇದ ಗೋಚರಿಸು ವೇದಾತ್ಮಕನು ವೇದೋದ್ಧಾರಕನು
ವೇದಲೇಶದಿಂ ಮೋದಿಸುವನೋ ಸಮ್ಮೋದ ಪರಾತ್ಮಕನೆ ೮

ಪೊಕ್ಕರೆ ಜಲಮಂ ಕುತ್ತಿಗೆ ನೆರೆಯದವಸ್ತು ಪರಾತ್ಪರನಾ
ನಿತ್ಯತೃಪ್ತನಂ ಚಿತ್ರಾನ್ನಗಳಿಂ ತೃಪ್ತಿಪುದೆಂತುಜನಾ ೯

ಮಂತ್ರ ಮೂರುತಿಗೆ ಮಂತ್ರಜ್ಞನಿಗೆ ಸ್ವತಂತ್ರವಿಹಾರನಿಗೆ
ಮಂತ್ರ ಯಂತ್ರಗಳ ತಂತ್ರವದೆಂತೊ ಮಂತ್ರಾಧಾರನಿಗೆ ೧೦

ಅಂತರ್ಬಹಿಯೊಳಗಂತರವಿಲ್ಲದ ನಂತ ಗುಣಾತ್ಮಕನಾ
ಎಂತು ಪ್ರದಕ್ಷಿಣೆಯಾಂತು ನಮಿಪೆ ಜಗದಂತ ಶರೀರಕನಾ ೧೧

ಸರ್ವಾಧಾರನ ಸರ್ವ ಶರೀರನ ಸರ್ವವ್ಯಾಪಕನಾ
ಸರ್ವನ ನಮಿಸುವಗರ್ವವೆಂತುಟೊ ಶಕ್ರನಮಸ್ಕೃತನಾ ೧೨

ಧರೆಯೊಳು ಪುಲಗಿರಿವರದ ವಿಠಲನ ಚರಣವ ಭಜಿಸುವರ
ನಿರುತದಿ ಪೂಜಿಪ ಹರುಷವು ಸಾಲದೆ ಹರಿದಾಸೋತ್ತಮರಾ ೧೩

೫

ಏನಯ್ಯ ಧೊರೆಯೆ-ನಿನಗಾನಂದವೆ ಧೊರೆಯೇ ಪ

ಮಾನಿತ ಜನರವಮಾನವನೋಡದೆ ಹೀನಜನರ
ನುಡಿನೀನೊಲಿದಾಲಿಪುದು ಅ.ಪ.

ಜಾತಿಧರ್ಮವಿಲ್ಲಾ-ಶಾಸ್ತ್ರದರೀತಿನಡತೆಯಿಲ್ಲ
ಮಾತಿದುಪುಸಿಯಲ್ಲಾ-ಮಾನದ-ಭೀತಿಯುಮೊದಲಿಲ್ಲಾ
ನೀತಿಯನರಿಯದ-ಕೋತಿಗಳಂದವ
ಜಾತಿಯ ಜನರೊಳು ಮಾತಿನವಾಶಿಯಿಲ್ಲ ೧

ದುರ್ಜನರು ಬೆರೆದು-ದೋಷವಿ
ವರ್ಜಿತರನ್ನು ಜರಿದು ಲಜ್ಜೆಯನೆರೆತೊರೆದು
ಗರ್ವದಿ ಗರ್ಜಿಸಿ ಮೊರೆದು
ಈ ಜಗದೊಳಗಿಹ ಸಜ್ಜನರಿಗೆ ಕುಲಕಜ್ಜಳರವ ಮತಿ ಗುಜ್ಜುಗಿಸುತ್ತಿಹ ೨

ಗಂಡನ ಬಿಟ್ಟಿಹರು-ಗರತಿಯ-ಕಂಡು ನಗುತ್ತಿಹರು
ಮಿಂಡರ ಬೆರೆದಿಹರು-ಮೇಲತಿ-ದಿಂಡೆಯರಾಗಿಹರು
ಭಂಡತನದಿ ಪರಗಂಡಸರೊಳು ಸಮದಂಡಿಯೆನಿಸಿ ಬಲು
ಚಂಡಿಸುತಿರ್ಪರೋ ೩

ಕೇಳುಹಂದೆಯಾಳು-ಕ್ಲೇಶವ ಪೇಳಲು ಮತಿತಾಳು
ಕೀಳು ಜನರ ಬಾಳು ಕಿವಿಯಲ್ಲಿ ಕೇಳಬಹುದೆ ಪೇಳು
ಕಾಳಮೂಳಿಯರ ಮೇಳದಿ ಹಿಗ್ಗುವ ಬಾಳುಗೇಡಿ
ಜನರೂಳಿಗ ಬಲುಘನ ೪

ಧರೆಯೊಳಧಿಕವಾದ ಶ್ರೀ ಪುಲಿ-ಗಿರಿಯೊಳು ನೆಲೆಯಾದ
ಸಿರಿವರ ನಿಜಪಾದ-ಸೇವೆಯ-ಕರುಣಿಸು ಬಹುಮೋದ
ಶರಣಾಭರಣ ನಿಜ ಕರುಣವ ತೋರಿಸು
ವರದ ವಿಠಲಧೊರೆ ವರದದಯಾನಿಧೆ ೫

೬

ಏನುಂಟು ನಿನ್ನೊಳಗೆ–ನಾಬೇಡಲು–ಏನು ಕೊಡುವೆ ಯನಗೆ ಪ

ಶ್ರೀನಿವಾಸನೇ ಬಲು ದೀನನೊಳವಲಕ್ಕಿಯೇನೆಂದು
ಬೇಡಿದೆಮಾನವನೋಡದೆ ಅ.ಪ.

ತಿರುಕನಾಗಿ ತಂದೆ ಧರೆಯ ಕಶ್ಯಪನೆಂಬ ತಿರುಕ
ಹಾರುವನಿಗೆ ಗುರಿಮಾಡಿದೆ
ಸಿರಿಯನು ರಜಕನ ಪರಿವಾರದಿ ಬಿಟ್ಟು
ಗರಳನಹಾಸಿನೊಳೆರಗಿದೆ ಕೃಷ್ಣ ೧

ಧನಕನಕಂಗಳು ನಿನಗಿರೆ ಸತ್ರಾಜಿತನ ಮಣಿಯನ್ನು
ನೀಗಣಿಸುವೆಯಾ
ಅನುವಾದ ಮನೆಯಿರೆ ಮುನಿಮನವೇತಕೆ ಮನೆವಾರ್ತೆ
ಯುಳ್ಳರೆವನವಾಸ ವೇಕೆ ೨

ಕಾಮಧೇನುವು ಕಲ್ಪನಾಮಕ ತರುವು
ಚಿಂತಾಮಣಿಗಳನು ಸುತ್ರಾಮನಿಗಿತ್ತು
ಗೋಮಯರಸಗಳ ಕಾಮಿಸಿ ಕದ್ದು
ನೀ ದಾಮೋದರನಾದೆ ತಾಮರಸಾಕ್ಷ ೩

ಖ್ಯಾತಿನೋಡದೆ ರಣಭೀತಿಯೊಳೋಡಿದೆ
ಜಾತಿ ನೋಡದೆ ಜಾಂಬವತಿಗೂಡಿದೆ
ನೀತಿಯ ನೋಡದೆ ಕೋತಿಯೊಳಾಡಿದೆ
ಮಾತು ನೋಡದೆ ಬರಿಮಾಯೆಯ ಪಿಡಿದೆ ೪

ಗತಿಹೀನರಿಗೆ ವರ ಗತಿಯತೋರಿಪನಾಮ
ಸ್ಮೃತಿಯೊಂದಿತ್ತರೆಸಾಕೆನಗೆ
ಅತಿಶಯವಿದುಯನ್ನಮತಿಯೊಳು ನಿನ್ನಯ ರತಿಯನ್ನು
ಪಾಲಿಸು ವರದ ವಿಠಲರಾಯ ೫

೭

ಕರುಣದಿ ಕಾಯೊ–ಕರುಣದಿ ಕಾಯೊ ಕಮಲನಯನ ಯನ್ನ ಪ

ಪರಮಪುರುಷ ಹರೆ ಸರಸಿಜನಾಭನೆ ಅ.ಪ.

ನೀನೇ ತಂದೆಯು ಎಂದು ಜ್ಞಾನದಿಂದಲಿ ಬಂದು
ಧ್ಯಾನಿಸುವೆನು ಈಗ ೧

ತಾಯಿ ನೀನೇಯೆಂದು ಬಾಯಿಗೆ ಬಂದಂತೆ ಜೀಯ
ನಿನ್ನನು ನೆನೆವೆ ೨

ಜಗದೊಳಗೆಲ್ಲ ನೀನೇ ಸುಗುಣ ಶೀಲನು
ಎಂದು ಮುಗಿಲು ಮುಟ್ಟುತಲಿದೆ ೩

ಸಂಗತ ಶ್ರಮವನ್ನು ಭಂಗವಗೈವ ಭುಜಂಗ ಗಿರಿಯವಾಸ ೪

ಲೀಲೆಯಿಂದಲಿ ವ್ಯಾಘ್ರ ಶೈಲದಲ್ಲಿರುವ ಶ್ರೀ ಲೋಲವರದವಿಠಲ ೫

೮

ಕನಸಿನಲಿ ಕಂಡೆನಾ–ಶ್ರೀನಿವಾಸನಾ
ಧ್ಯಾನಗೈವ ಮುನಿ ಮಾನಸದಲ್ಲಿ ನಿಧಾನಿಸಿ ನೋಡಲು
ಕಾಣದಾತನ ॥ಕನಸಿನಲಿ॥ ಪ

ಶರದಾಭಗಾತ್ರನ–ಶಂಪಾಭೋಜ್ವಲ ಕರಪೀತವಸ್ತ್ರನ
ಸಾರಸಾಕ್ಷನ ಶರದಿಂದುವಕ್ತ್ರನ
ಸಿರಿಯನುರದಿತಾನಿರಿಸಿಕರಗಳಿಂ
ದರಚಕ್ರಗಳನು ಧರಿಸಿರ್ಪಾತನ ೧

ಕಾಮನಂ ಪೆತ್ತನ ಕಾಕುಸ್ಥನಿಗೆ ಕಾಮಿತವಿತ್ತನ
ಕೌಸ್ತುಭಮಣಿ-ಧಾಮವಂ ಪೊತ್ತನ
ಹೇಮ ಸೂತ್ರಮಣಿ ದಾಮಭೂಷಣ
ಸ್ತೋಮ ದಿವ್ಯಗುಣರಾಮಣೀಯನ ॥ಕನಸಿನಲಿ ॥ ೨

ಸುರವೃಂದಾನಂದದಿ-ಸ್ತುತಿಸುತ್ತ ಬರುತಿರೆ ತೂರ್ಯಾರವದಿ
ಸಿತಛತ್ರಾದ್ಯುರುತರ ರಾಜ ಚಿಹ್ನದಿ
ಗರುಡನೇರಿ ನಿಜ ಶರಣರ ಪೊರೆಯುವ
ವರದಪುಲಿಗಿರಿ ವರದವಿಠಲನ ॥ಕನಸಿನಲಿ॥ ೩

೯

ಕಣ್ಣಾರೆ ಕಂಡೆನವ್ಯಯನ-ಕೃತ-ಪುಣ್ಯರ
ಮಾನಸ-ಗಣ್ಯಚಿನ್ಮಯನ ಪ

ನೀಲಮೇಘಶ್ಯಾಮಳನ, ಮಣಿ, ಜಾಲರಂಜಿತ
ವನಮಾಲಿಕಾಗಳನ
ಫಾಲದಿ ತಿಲಕವೊಪ್ಪಿಹನ ಹೇಮ-ಚೇಲದಿ
ಮಿಂಚನು ಸೋಲಿಸುತಿಹನ ॥ಕಣ್ಣಾರೆ॥ ೧

ಪಂಕಜಪತ್ರಲೋಚನನ-ನಿಜ-ಕಿಂಕರ
ಹೃದಯಾತಂಕಮೋಚನನ
ಶಂಖ ರಥಾಂಗಾಂಚಿತನೆ ಮಕರಾಂಕಜನನೀಕು
ಚಕುಂಕುಮಾಂಕಿತನ ೨

ಬೃಂದಾರಕ ಪರಿವೃತನ-ಶ್ರಿತ-ಮಂದಾರನ
ಗುಣವೃಂದ ಪೂರಿತನ
ಇಂದಿರಾಹೃದಯ ಮಂದಿರನ-ಮುನಿವೃಂದ
ಚಕೋರನಂದ ಚಂದಿರನ ೩

ಮಕರ ಕುಂಡಲ ಮಂಡಿತನ ಮಣಿಮುಕುಟಾದಿ
ಭೂಷಣನಿಕರ ಭೂಷಿತನ
ಪ್ರಕಟಿತ ನಿಜಮಾಯಕನ–ಸೇವಕರಿಗೆ ನಿತ್ಯದಿ
ಸುಖದಾಯಕನ ॥ಕಣ್ಣಾರೆ॥ ೪

ಕರುಣದ ಖನಿಯೆನಿಸುವನ ನಿಜ–ಚರಣವೆ
ಶರಣೆಂದು ಕರದಿ ತೊರುವವನ
ಧರಣೀ ನೀಳೆಯರಿಹ ಕೆಲನ–ಪುಲಿಗಿರಿಯೊಳು
ನೆಲಸಿಹ ವರದ ವಿಠಲನ ೫

## ೧೦

ಕರುಣದಿ ಕಾಯೋಯನ್ನ ಕಾರುಣ್ಯನಿಧಿ ಕರುಣದಿ ಕಾಯೊಎನ್ನ ಪ

ಚರಣ ಸೇವಕ ಭಯಹರಣ ಶ್ರೀಕೌಸ್ತುಭಾಭರಣ ಸೌಖ್ಯವಿತರಣ
ನಿನ್ನಯ ಚರಣ ಯುಗಳವ ಶರಣುಹೊಕ್ಕೆನು ಅ.ಪ.

ಕರ್ಮತಂತ್ರವನುಳಿದು ಕಾಮಿಸಿ ಮನ ನಿರ್ಮಲತ್ವವ ತೊರೆದು
ಹಮ್ಮಿನಿಂದಲೆ ಭಕ್ತಿಯುಮ್ಮಳಿಸದೆ ಬಲು ನಿರ್ಮಲತ್ವವನಳಿದು
ಕಾಮವು ಹೊಮ್ಮುತಿದೆ ಪರ ಬೊಮ್ಮ ಮೂರುತಿ ೧

ಸ್ನಾನ ಮೌನವ ತೊರೆದು ಸಂಧ್ಯಾದ್ಯನುಷ್ಠಾನನೇಮವ ಮರೆದು
ಮಾನಸ ಪೂಜಾ ವಿಧಾನ ವನರಿಯದೆ ದೀನಜನ
ಸುರಧೇನು ಭಕ್ತರ
ಮಾನನಿಧಿಯಹ ಶ್ರೀನಿವಾಸನೆ ೨

ಶರಣಜನಾವನನೆ ಶಕ್ರಾದಿನಿ–ರ್ಜರಕುಲ ಪಾಲಕನೆ
ಸರಸಿಜಸಂಭವ ಪುರಹರ ಸನ್ನುತ ಚರಿತದೂರಿತ ದುರಿತಸದ್ಗುಣ
ಭರಿತ ಪುಲಿಗಿರಿ ವರದ ವಿಠಲ ೩

## ೧೧

ಕರುಣದಿ ಕಾಯೋ-ಕರುಣಾಲ ವಾಲ ಪ

ಶಿರಿಯರಸನೆ ನಿನ್ನ ಚರಣವ ನಂಬಿದೆ
ಸುರಗಣ ಸೇವಿತ ಸುರರಾಜ ಪಾಲ ಅ.ಪ.

ಇಂದ್ರನ ಕೂಡಿ ಮುನೀಂದ್ರನ ಸತಿ
ಶಾಪದಿಂದರೆಯಾಗಿರಲಂದು ನೀದಯದಿ
ಸುಂದರ ಚರಣಾರವಿಂದಗಳಿತ್ತ ಧೂಳೀಯಿಂದ ಪಾವನಗೈದ
ಇಂದಿರೇಶನೆ ನೀ ॥ಕರು॥ ೧

ನಕ್ರನ ಮುಖದಲ್ಲಿ ಸಿಕ್ಕಿದ ಕರಿಕುಲ ಚಕ್ರವರ್ತಿಯು
ಮಾರೆಹೊಕ್ಕರೆ ನುತಿಸಿ
ಚಕ್ರದಿ ಮಕರಿಯನಿಕ್ಕಿ ಗಜೇಂದ್ರನರಕ್ಷಿಸಿದಾಪರಿಯಕ್ಕರೆ ತೋರಿಸಿ ೨

ತರಣಿತನಯ ಫಣಿವರಶರವನು ನರವರ
ಶಿರಸರಿಸಕ್ಕೆಗುರಿಯಿಡಲು
ಚರಣದುಂಗುಟದಿಂದ ಧರಣಿಯನೂರಿ ನರನ-
ಶಿರವುಳುಹಿದ ಶಿರಿ ವರದವಿಠಲ ಹರಿ ೩

## ೧೨

ಕರುಣದಿ ರಕ್ಷಿಸುಯನ್ನನು-ಪುಲಿಗಿರಿ ಲೋಲ ನಂಬಿದೆ ನಿನ್ನನು
ಕರುಣದಿ ರಕ್ಷಿಸು ಚರಣಸೇವಕ ಭಯಹರಣ ಸೌಖ್ಯವಿತರಣ
ನಿನ್ನಯಚರಣ ಯುಗಳದಿ ಶರಣು ಹೊಕ್ಕೆನು ಪ

ಯತಿಗಣ ನೇಮವನರಿಯದ-ಸ್ವರ-ಗತಿತಾಳ-
ಲಯಬಂಧ ತಿಳಿಯದ
ಶೃತಿನುತ ನಿಮ್ಮನು ಪೊಗಳದ-ನಿಮ್ಮ ಶ್ರುತಿಗಳ
ಮಹಿಮೆಯ ಕೇಳದ

ಮತಿಹೀನ ನಾದೆನ್ನಮತಿಗೆಗೋಚರನಾಗಿ
ಶೃತಿಗೋಚರ ನಿಮ್ಮಸ್ತುತಿಯು
ಅನುಭವವಿತ್ತು ಪತಿತ ಪಾವನ ಪುಲಿಗಿರೀಶನೆ ಪತಿತನುದ್ಧರಿಪಂತೆ
ಗತಿಮತಿಗಳೇನೇನು ಅರಿಯದಪತಿತನೆನ್ನನು ಭವಜಲಧಿ ಮಧ್ಯದಿ ೧

ಕರುರಾಯ ಕೌರವಸಭೆಯಲ್ಲಿ-ಭೀಷ್ಮ-ಗುರುದ್ರೋಣ
ಕೃಪರಮುಂದೆಡೆಯಲ್ಲಿ
ಧುರಧೀರ ಪಾಂಡವರಿದಿರಲ್ಲಿ ಬಲು
ದುರುಳದುಶ್ಯಾಸನನ ಕೈಯಲ್ಲಿ
ತರುಣಿ ಪಾಂಚಾಲಿಯಕರಸಿ ಸೀರೆಯ ಸೆಳೆದು ಕರೆಕರೆ
ಪಡಿಸಲೆಂದೆನುತಲುಜ್ಜುಗಿಸಲು
ಪರಮಾತ್ಮ ಪರಿಪೂರ್ಣ ಕರುಣಾಳು ನಿನ್ನನೇಮರೆಹೊಕ್ಕೆ
ಪೊರೆಯೆಂದು ಮೊರೆಯಿಡಲಾಕ್ಷಣ
ತರುಣಿಗಕ್ಷಯವಸವನಿತ್ತಾ ಶರಣಜನ
ಸಂಸಾರ ಶ್ರೀಹರಿ ||ಕರು|| ೨

ಕರಿರಾಜ ನಕ್ರನ ಬಾಯೊಳು-ಸಿಲುಕಿ-ನರಳಿಸಾವಿರ
ವರುಷ ಜಲದೊಳು
ಪರಮಪುರುಷ ಪುರುಷೋತ್ತಮ ನಿರುಪಮ ಪರಮೇಶವಂದ್ಯ
ಪರಾತ್ಪರ ಪುಲಿಗಿರಿ
ಧೊರೆಯೆ ಕರುಣಿಸೆನ್ನುತ ಕರಿ ಮೊರೆಯಿಡಲಾಗಬೇಗ
ಕರುಣದಿಂ ಮೊರೆಕೇಳಿ ಗರುಡನ ಪೆಗಲೇರಿಸಾರಿ
ಕರದ ಚಕ್ರದಿ ಸೀಳಿ ನಕ್ರನ ಕರಿಯ ಪೊರೆದಾ ವರದ ವಿಠಲ ೩

## ೧೩

ಕಲಯಾಮಿ ಶ್ರೀನಿವಾಸಂ-ಕಲಭಾಷ ಮಿಂದುಹಾಸಂ ಪ

ಕಮನೀಯಹೇಮ ಚೇಲಂ-ಕಮಲಾಲಯಾನುಕೂಲಂ
ಕಮಲಾಭಿರಾಮ ಮಾಲಂ ೧

ಸುಮಬಾಣ ಸುಂದರಾಂಗಂ–ಸುಮನಸಾರ್ಪಿತಾಂತರಂಗಂ
ನಮದಾರ್ತಿ ಸಂಗ ಭಂಗಂ ೨

ಜಲಜಾಪ್ತ ಪತ್ರನೇತ್ರಂ–ಜಲದೋಪಮಾನ ಗಾತ್ರಂ
ಜಲಜಾಪ್ತ ಪುತ್ರ ಮಿತ್ರಂ ೩

ಕುಂದೋಪಮಾನ ರದನಂ–ಚಂದ್ರೋಪಮಾನ ವದನಂ
ಬೃಂದಾರಕಾರಿ ದಮನಂ ೪

ಅಜವಂದ್ಯ ಚರಣಕಮಲಂ–ನಿಜ ಸೌಖ್ಯ ಕರಣ ಕುಶಲಂ
ಭಜನೀಯ ವರದ ವಿಠಲ–ಕಲಯಾಮಿ ಶ್ರೀನಿವಾಸ ೫

## ೧೪

ಕಲೆಯೇಹಂ ಶ್ರೀ ಕನಕಾದ್ರೀಶಂ ಜಲದೋಪಮ ಭಾಸಂ ಪ

ಸುಲಲಿತ ಕರಧೃತ ಧರರಥ ಚರಣಂ
ಕಲಿಕಲುಹಾಪಹ ಕಮನೀಯ ಚರಣಂ
ಮಸ್ತಕ ನಿಹಿತ ಮಹಾರ್ಹಕಿರೀಟಂ ಕಸ್ತೂರಿ
ತಿಲಕಿತ ದಿವ್ಯಲಲಾಟಂ
ನಿಸ್ತುಲಸುಮದಮಾಂಚಿತ ಜೂಟಂ ಕೌಸ್ತುಭ
ಶೋಭಿತ ಮಣಿಸರಕೂಟಂ ೧

ಸುಮಶರಕೋಟಿ ಮನೋಹರವೇಷಂ
ಕಮಲಾಸಖಭಾಭರಣ ವಿಭೂಷಂ
ಸುಮಹಿತಭಣಿತ ಸದೃಶಮಂಜು ಭಾಷಂ
ವಿಮಲ ಹೃದಯ ಸೇವಕ ಪೋಷಂ ೨

ಶ್ರೀ ರಮಣೀಪರಿ ಶೋಭಿತಗಾತ್ರಂ
ವಾರಿಜ ಭವಕೃತವಿವಿಧ ಸ್ತೋತ್ರಂ

ಸಾರಸದಳ ವಿಸ್ತಾರಸುನೇತ್ರಂ
ನಾರದ ಮುನಿಕೃತ ಪೂಜಾಪಾತ್ರಂ ೩

ಶರದಿಂದು ಮಂಡಲ ಸುಂದರ ವದನಂ
ವರಕುಂದ ಕುಟ್ಮಲ ಸನ್ನಿಭರದನಂ
ಕರಸಂದರ್ಶಿತ ವೈಕುಂಠ ಸದನಂ
ತರುಣ ತರಣಿಘೃಣಿ ರುಚಿದಂತ ಹಸನಂ ೪

ತರುಣ ಶ್ರೀ ತುಳಸೀ ಶೋಭಿತ ಮಾಲಂ
ಸರಸಿಜಗರ್ಭ ರುಚಿರ ದಿವ್ಯ ಚೇಲಂ
ವರವ್ಯಾಘ್ರಭೂಧರ ವಿಹರಣ ಶೀಲಂ
ವರದ ವಿಠಲ ಮಖಿಲಾಗಮಪಾಲಂ ೫

೧೫

ಕೊಡು ಕೊಡುವರವನು ತಡವುಮಾಡದೆಯನ್ನೊಡೆಯ
ಶ್ರೀಹರಿ ಕೃಪೆಮಾಡಯ್ಯ ಪ

ಬಿಡದಿರೆನ್ನನು ಜಗದೊಡತಿಯಾಣೆ
ನಿನ್ನಡಿಗಳನೆಂದಿಗೂ ಬಿಡೆನಯ್ಯ ಅ.ಪ.

ಕ್ಷಿತಿಯೊಳಗತಿಶಯ ಪತಿತ ಪಾವನ ಶ್ರೀಪತಿ
ನೀಗತಿಯೆನುತಿಹೆನಯ್ಯ
ರತಿಪತಿ ಪಿತನೆ ಸು ಮತಿಯನು ಪಾಲಿಸಿ ಗತಿಯನು
ತೋರಿಪುದೆನಗಯ್ಯ ೧

ನಿನ್ನ ಪದವನಂಬಿ–ನಿನ್ನವನೆನಿಸಿದ–ಯೆನ್ನನು ಪೇಕ್ಷಿಪರೇನಯ್ಯ
ಸನ್ನುತ ನಿನ್ನದು ಮನ್ನಿಸಿ ಕೇಳುವ ಬಿನ್ನಪವಿನಿತೆ ಕೇಳಯ್ಯ ೨

ಎಲ್ಲರ ಹೃದಯದೊಳಲ್ಲಿ ನೆಲಸಿರುವ ಪುಲ್ಲನಯನನೀ ಪೇಳಯ್ಯ
ಕಲ್ಲುಮನದಿನೀ ನೊಲ್ಲದೊಡೀ ಜಗ-ದಲ್ಲಿ ಪೋಪುದಿನ್ನೆಲ್ಲಯ್ಯ ೩

ಪತಿಯಗಲಿದ ಪತಿವ್ರತೆಗೆ ಇತರರಲಿ ರತಿ ಸಂಜನಿಸುವದೇನಯ್ಯ
ಗತಿಪತಿಯೆಲ್ಲರ ಪತಿನೀನೆನ್ನುತ ಶ್ರುತಿ
ನುತಿಪುದು ಪುಶಿಯೇನಯ್ಯ ೪

ಜಗದೊಳು ನಿನ್ನಗೆ ಸುಗುಣಿಯುಯೆನ್ನತ
ನಿಗಮವು ಪೊಗಳುತಲಿಹುದಯ್ಯ
ಖಗಪತಿಗಮನನೆ ಬಗೆಬಗೆಯಲಿ ರತಿ
ಸೊಗಯಿಸುನಿನ್ನೊಳುಯನಗಯ್ಯ ೫

ಸೃಷ್ಟಿನಾಥಪದ ವಿಷ್ಟರ ಭಕ್ತಿಯ ಕೊಟ್ಟರಭೀಷ್ಟವು ಯನಗಯ್ಯ
ಇಷ್ಟರಮೇಲಿನ್ನು ಲಕ್ಷಕೊಟ್ಟರೂಯನಗಿಷ್ಟವಿಲ್ಲಶ್ರೀ ಕೃಷ್ಣಯ್ಯ ೬

ಚರಣ ಕಮಲಗಳಿ ಗೆರಗುವೆ ಪುಲಗಿರಿವರದವಿಠಲ
ದಯೆಯಿರಿಸಯ್ಯ
ಚರಣ ಶರಣನಿಗೆ ಕರುಣಿಸದಿರ್ದರೆ ಕರುಣಿಗಳರಸರಿನ್ನಾರಯ್ಯ ೭

೧೬

ಕ್ಷಮಿಸೆನ್ನ ದೋಷಗಳ-ಕ್ಷಿಪ್ರದಿ ಹರಿ ಪ

ಕ್ಷಮೆಯನ್ನು ಧರಿಸಿದ ಕಮಲಾ ನಿವಾಸನೆ ಅ.ಪ.

ಕರಣ ತ್ರಯದಿ ಕಾಲ-ಹರಣವಿಲ್ಲದೆ ಪಾಪಾ
ಚರಣೆಯಿಂದೋಷದ ಭರಣಿಯಾದೆನು ಹರಿ ೧

ಮಾಡಬಾರದ ಪಾಪ ಮಾಡುವೆನನುದಿನ
ಮೂಢನ ಸುಕೃತವ ನಾಡಿ ತೋರಿಸಲೇಕೆ ೨

ಹರಿಗುರುಹಿರಿಯರ–ಜರಿದು ಸಜ್ಜನರನು
ತೊರೆದು ದುರ್ಜನರೊಳು ಬೆರೆದು ಪಾಮರನಾದೆ ೩

ಸರ್ವಂಸಹಾಧಿಪ ಸರ್ವಚೇತನ ದೀಪ
ಸರ್ವಾಪರಾಧವ ನಿರ್ವಹಿಸುವ ಭೂಪ ೪

ದುರಿತ ವೈರಿಯೆ ನಿನ್ನ–ಮೊರೆಹೊಕ್ಕಮನುಜಗೆ
ದುರಿತದುಃಖಗಳುಂಟೆ–ವರದ ವಿಠಲರಾಯ ೫




## ೧೭

ಚಿಂತಿಸು ಮನವೆ ಶ್ರೀಹರಿಯ–ನಿಶ್ಚಿಂತೆಯೊಳಗೆ
ಪುಲಿಗಿರಿ ಧೊರೆಯ ಪ

ಶ್ರೀರಮಣೀ ನಿಜವಲ್ಲಭನ–ಮಾರ ಚತುರ್ಮುಖರಿಗೆ ಪಿತನ
ನಾರದ ಶರ್ವ ಪಿತಾಮಹನ–ಮದ–
ವಾರಣಮುಖ ಪ್ರಪಿತಾಮಹನ ೧

ಉರದಲ್ಲಿ ಸಿರಿಯನ್ನು ಧರಿಸಿಹನ–ನಿಜ–ಶಿರದಿ
ಕಿರೀಟವ ನಿರಸಿಹನ
ಕರದಲ್ಲಿ ಚಕ್ರವ ಪಿಡಿದಿಹನಾ–ನಿಜ–ಕರುಣದಿ ಭಕ್ತರಿಗೊಲಿದಿಹನ ೨

ನೀಲ ಜಲದಸಮ ವಿಗ್ರಹನ ವನಮಾಲೆಯ
ಕೊರಳೊಳು ಪೊತ್ತಿಹನ
ಬಾಲಕ ಸುಕೃತಾನುಗ್ರಹನ–ನಿಜ ಲೀಲೆಯೊಳಾಸುರ ನಿಗ್ರಹನ ೩

ಅಂಗಜನಿಭ ಸುಂದರನ–ಸುರ–ಗಂಗೆಯ
ಪಡೆದ ಪಾದಾಂಬುಜನ
ತುಂಗ ವಿಹಂಗ ತುರಂಗಮನ–ಶುಭ–ಮಂಗಳ
ಗುಣಗಣ ಸಂಗತನ ೪

ಸರಸಿಜ ಸನ್ನಿಭಲೋಚನನ-ನಿಜ ಶರಣರ
ಭವಭಯ ಮೋಚನನ
ವರವ್ಯಾಘ್ರಾಚಲ ನಾಯಕನ-ನಮ್ಮ-
ವರದವಿಠಲ ವರದಾಯಕನ ೫

## ೧೮

ಜಯಕೃಷ್ಣ ಜಗದೀಶ ಜಯ ಶಶಿಕುಲಾಧೀಶ
ಜಯವಿನುತ ವಾಣೀಶ ಜಯ ರುಕ್ಮಿಣೀಶ ।ಜಯಜಯ ಪ

ಕಮಲಭವನುತಿಪಾತ್ರ ಕಮಲಸಖನಿಭಗಾತ್ರ
ಕಮಲರಿಪು ಸಮವಸ್ತ್ರ ಕಮಲದಳ ನೇತ್ರ
ಕಮಲ ಕರಧೃತಗೋತ್ರ ಕಮನೀಯ ಸುಚರಿತ್ರ
ಕಮಲಾರಿ ಧರ ಮಿತ್ರ ಕಮಲಾಕಳತ್ರ ೧

ನಂದಗೋಪ ಕುಮಾರ ನವನೀತ ದಧಿ ಚೋರ
ಸುಂದರೀ ಕುಲಜಾರ ಸ್ಮರಸಮರ ಶೂರ
ಕಂದರ್ಪಸಪಕಾರ ಕಾಮಿನೀ ಪರಿವಾರ
ಬೃಂದಾವನ ವಿಹಾರ ಭಕ್ತ ಮಂದಾರ ೨

ಧರಣೀ ಧರಾಸ್ಫಾಲ ದಮನಕರ ನಿಜಲೀಲ
ನರಪೌತ್ರ ಪರಿಪಾಲ ನವ್ಯ ವನಮಾಲಾ
ಮುರನರಕ ಶಿಶುಪಾಲ ಮುಖದನುಜ ಕುಲ ಕಾಲ
ವರವ್ಯಾಘ್ರಗಿರಿಲೋಲ ವರದಾರ್ಯವಿಠಲಾ ೩

## ೧೯

ತನುವೆನ್ನದು ಚೇತನವೆನ್ನದು ಎಂದು ಅನುದಿನ
ಪೋಷಣೆಯನು ಮಾಡಿದೆ ಹರಿ ಪ

ಚಿನುಮಯ ನಿನ್ನನು ನೆನೆವೆನೆಂದರಮನ
ತನುಮಧ್ಯೆಯರತನು ವಿನೊಳಿರುತಿಹುದು

ಅನಘ ನಿನ್ನನು ನೋಡುವೆ ನಾನೆನ್ನಲು ದೃಷ್ಟಿ
ಕನಕಾಂಗಿಯರ ಕುಂಭಸ್ತನದ ಮೇಲಿಹುದಯ್ಯ ೧

ಚರಣದ ಪೂಜೆಯೊಳಿರುವೆನೆಂದರೆ
ಕರವೆರಡು ಕೋಮಲೆಯರ ನರಸುವುವು
ಹರಿಕಥಾಶ್ರವನದೊಳಿರದೆ ಈ ಕಿವಿಗಳು
ಹರಿಣಾಕ್ಷಿಯರ ಕಂಠ ಸ್ವರಕೆಮೋಹಿಪವಯ್ಯ ೨

ದುರಿತದೂರನ ನಾಮಸ್ಮರಿಸದು ನಾಲಿಗೆ
ಸರಸಿಜಾಕ್ಷಿಯರೊಳು ಸರಸ್ತೋಕ್ತಿಪಡೆದು
ಚರಣ ಶ್ರೀ ತುಳಸಿಯ ನರಿಯದೆ ನಾಸಿಕ
ತರುಣಿಯ ಮೈಗಂಪನರಸಿ ಹಿಗ್ಗುವದಯ್ಯ ೩

ನಿನ್ನಂಘ್ರಿಗೆರಗದೆ ಕುನ್ನಶರೀರ
ವಿದುನ್ನತಸ್ತನವುಳ್ಳ ಕನ್ನೆಯರೋಳ್
ತನ್ನ ಸುರತಸುಖವನ್ನ ಚಿಂತಿಸುವದು
ಯನ್ನಾಧೀನದೊಳಿಲ್ಲ ನೀನೇ ಬಲ್ಲಿ ೪

ಎರವಿನ ಸಿರಿಯಂತೆ ಕರಣಕಳೇವರ
ಬರಿದೆ ನನ್ನದು ಎಂದು ಮರೆದೆ ನಾನು
ಹರಿ ನಿನ್ನದೇಸರಿ ದುರಿತ ಕೃತಕೆನ್ನ
ಗುರಿಮಾಡದೆ ಕಾಯೋ ವರದ ವಿಠಲ ಕೃಷ್ಣ ೫

## ೨೦

ತವದಾಸೋಹಂ ತವದಾಸೋಹಂ
ತವದಾಸೋಹಂ ದಾಶರಥೆ ಪ

ದಶರಥಪುತ್ರಾ–ಪಶುಪತಿಮಿತ್ರ–ಶಶಿರವಿನೇತ್ರಾ–ದಾಶರಥೆ ೧

ವಿಧೃತ ಕೋದಂಡ–ವಿಪುಲದೋರ್ದಂಡ
ಕದನಪ್ರಚಂಡ ದಾಶರಥೆ ೨

ತಾಟಕಾಹನನ ತಾಡಿತಕುಜನ ಹಾಟಕವಸನಾ–ದಾಶರಥೆ ೩

ಮನಸಿಜವೇಷ ಮಂಜುಳಭಾಷ ಮನುಜವಿಶೇಷ ದಾಶರಥೆ ೪

ಶರದಾಭಗಾತ್ರ ಶರನಿಧಿಯಾತ್ರಾ ಕರಧೃತಗೋತ್ರ ದಾಶರಥೆ ೫

ರಾವಣಹರಣ–ಪಾವನಚರಣ–ಶ್ರೀವಧೂರಮಣ–ದಾಶರಥೆ ೬

ರಕ್ಷಿತಲೋಕ ರಚಿತಸು ಶ್ಲೋಕ ಶಿಕ್ಷಿತಕಾಕ ದಾಶರಥೆ ೭

ವ್ಯಾಘ್ರಾಗಶಮನ–ವ್ಯಾಘ್ರಾರಿಗಮನ ವ್ಯಾಘ್ರಾದ್ರಿಸದನ ದಾಶರಥೆ ೮

ಪರಿಹೃತ ಕುಟಿಲ–ಸರಸಿಜನಿಟಿಲ ವರದಾರ್ಯವಿಠಲ ದಾಶರಥೆ ೯

## ೨೧

ತಿಗಣೆಯ ಕಾಟವೇ ಕಾಟ–ಚಲ್ವ–ಸುಗುಣೆಯ ಕೂಟವೇ ಕೂಟ ಪ

ಹಗಲಿರುಳೆನ್ನದೆ ಬಗೆಬಗೆ ರತಿಯೊಳು–
ಸೊಗಯಿಸಿದೇಹಧಾತುಗಳನು ಕೆಡಿಸುವ ಅ.ಪ.

ಮನೆಯೊಳು ತಿಗಣೆಯು ಹೆಚ್ಚಿತು–ಮನಸಿಜನಸ್ತ್ರಕೆ
ಮನಸೋತು ಕಾಮುಕ ಜನದಂತೆ
ನಿಶಿಯೊಳಗನುದಿನ ಬಾಧಿಪ ೧

ಗೋಡೆ ಕಂಬಗಳ ಸಂದುಗಳಲಿ ಮನೆಮಾಡಿ
ಹಾಸಿಗೆ ಮಂಚಾದಿಗಳಲಿ
ರೂಡಿಸಿ ಕಾಮಿನಿ ಕೂಡುವ ತೆರದೊಳೋಲಾಡಿ
ಶರೀರದ ನಾಡಿಯನಿಲ್ಲಿಸುವ ೨

ಸದ್ದಡಗಲು ಜತೆಗೂಡುತ–ಸುಖ–ನಿದ್ರೆಯ ಸಮಯವನೊಡುತ
ಹೊದ್ದಿ ಸಮೀಪವ ಮುಗ್ದೆಯ ರಂದದಿ ಮುದ್ದಾಡುತ
ನಮ್ಮ ನೊದ್ದಾಡಿಸುತಿಹ ೩

ಹೆಗಲಿನ ಮೂಲದೊಳೇರಿ–ನಮ್ಮಬಗಲಿನ ಸಂದಿಗೆ ಸೇರಿ
ತೊಗಲಿನ ನರಕಕ್ಕೆ ತಗಲೆ ನಿದ್ರೆಯನಗಲಿಸಿ
ಬೇಗದಿನುಗುಳಿಕದ್ದೋಡುವ ೪

ಚಿಗಟದ ಹಿಂದೊಡಗೂಡಿ–ನಮ್ಮ–ತೊಗಟೆ ರಕ್ತದ ಸವಿನೋಡಿ
ತಿಗಟೆಯ ಸಂಧಿಸಿ ಚಿಗಟದ ಪರಿಯಲಿ
ಬುಗುಟಿದ್ದಗಾಯವ ವಿಗಟವಮಾಡುವ ೫

ನೋಟಕ ನೀನಾಗ ಬಹುದೆ–ಕಪಟ–ನಾಟಕಧಾರನೆ ಬರಿದೆ
ಕಾಟ ಕರ್ಮದ ಬಲು ಕೋಟಲೆಯಂಬೆ
ನಿಶಾಟದಲ್ಲಣ ನಿನ್ನಕೂಟದ ಜನರಿಗೆ ೬

ದುರಿತ ಕೋಲಾಹಲನೆಂದೆ–ನಿನ್ನ ಬಿರುದನು ಪೊಗಳುತ ನಿಂದೆ
ಧರೆಯೊಳುತ್ತಮ–ಪುಲಿಗಿರಿಯೊಳು ನೆಲಸಿಹವರದವಿಠಲ
ನಿನ್ನ ಶರಣರಾದವರಿಗೆ ೭

## ೨೨

ದಿನವೇ ಸುದಿನವು ಧ್ಯಾನ ಮಾಳ್ಪ ಜನವೇ ಸುಜನವು ಪ

ಘನತರ ಹರುಷದಿ ಮನದಣಿಮಂದದಿ ಮನಸಿಜನ್ಯೆಯನ
ಮಹಿಮೆಯ ಪಾಡುವ ಅ.ಪ.

ಯುಕ್ತದಿ ಕೂಡಿ ಆಯುಕ್ತವಿರಕ್ತಿಯ ಮಾಡಿ
ಭಕ್ತಿಗಾಗಲಿ ಭವಮುಕ್ತಿಗಾಗಲಿ
ಹರಿಭಕ್ತರನೊಡಗೂಡಿ ರಕ್ತಿಲಿ ಪಾಡುವ ದಿನವೇ ೧

ತಾಳ ತಂಬೂರಿಯ ತಪ್ಪದೆ ತಂದು ಮೈಳೈಸಿ–ಶ್ರುತಿಯ
ಹಾಳು ಹರಟೆಯಿಂದ ಕಾಲವಕಳೆಯದೆ ಶ್ರೀಲಲಾಮನ
ಕಥೆಪೇಳವ ಕೇಳುವ ೨

ಅರ್ಥಾಪೇಕ್ಷೆಯಲಿ ಕಾಲಗಳನ್ನು ವ್ಯರ್ಥಮಾಡದಲೆ
ಅರ್ಥಿಪರಿಗೆ ಪರಮಾರ್ಥವ ನೀಯುವ ಪಾರ್ಥಸಾರಥಿಯನ್ನು
ಪ್ರಾರ್ಥನೆ ಮಾಡುವ ೩

ಕಾಮಕ್ರೋಧಗಳ ಕಳೆವ ರಘುರಾಮ ನಾಮಗಳ
ಪ್ರೇಮದಿಂಪಾಡುತ್ತ ರೋಮಾಂಚದೊಡಗೂಡಿ
ನೇಮದಿಂದ ಭವ ತಾಮಸ ಕಳೆಯುವ ೪

ಹರಿವಾಸರವನು ಸಾಧಿಸಿ ಮುರುಹರ ನಾಮಗಳನು
ಹರಿದಾಸರೊಡಗೂಡಿ ಹರುಷದಿಂದೆಚ್ಚತ್ತು ವರದ ವಿಠಲ
ನರಹರಿಯೆಂದು ಪಾಡುವ ದಿನವೇ ೫

## ೨೩

ದೀನನ ಸೇರಿದರೇನು ಫಲ (ರಾಮ) ಗುಣಹೀನನ
ಸೇರಿದರೇನು ಫಲ ಪ

ಅಕ್ಕರೆಯಿಲ್ಲದ ರಕ್ಕಸಿ ಯುದರದಿ ಮಕ್ಕಳು ಜನಿಸಿದರೇನು ಫಲ
ದುಃಖಿಪಜನರನು ಲೆಕ್ಕಿಸದಾತನ ಒಕ್ಕಲುತನದಿಂದೇನು ಫಲ ೧

ಜನಿಸಿದ ಮಕ್ಕಳುಜೀವಿಸದಿದ್ದರೆ ಜನನೀಜನಕರಿಗೇನು ಫಲ
ಕನಸಿಲಿ ಕಾಣುವ ಧನಕನಕಂಗಳ ನಂಬಿದ ಜನರಿಗೇನು ಫಲ ೨

ಕರೆಯದ ಪಶುವನು ನೆರೆಯದ ಸೊಸೆಯನು
ಅರಿಯದೆಕೊಂಡವಗೇನು ಫಲ
ಹಿರಿಯರ ನಡತೆಯನಡೆಯಿಸದಾತನು
ಹಿರಿಯವನಾಗಿರಲೇನು ಫಲ ೩

ಗಂಡನ ದೂರುತ ಮಿಂಡನ ಸೇರುವ ಹೆಂಡತಿಯಿರಲೇನು ಫಲ
ಹೆಂಡಿರ ಮಕ್ಕಳ ದಂಡಿಸದಾತನ ಗಂಡಸುತನದಿಂದೇನು ಫಲ ೪

ವರನಿಲ್ಲದ ವರತರುಣಿಯ ನಾನಾತೆರದಲಿ
ಸಿಂಗರಿಸಿದರೇನು ಫಲ
ವರದ ವಿಠಲ ಪುಲಿಗಿರಿ ಪತಿಗಲ್ಲದ ಪರಿಪರಿ
ಪುಣ್ಯದಿಂದೇನು ಫಲ ೫

## ೨೪

ನಮೋಸ್ತುತೇ ಕಮಲಾಪತೇ ॥ ಪ

ನಮೋಸ್ತು ತೇ ಶತಧೃತಿ ಶಂಕರ ಮುಖ
ವಿಮಾನ ಚರಗಣ ವಂದಿತ ಚರಣ ॥ ಅ.ಪ.

ವಾರಣಭೀತಿನಿವಾರಣ ಭವಜಲಪಾರಣ
ದೈತ್ಯವಿದಾರಣ ಶುಭಗುಣ ೧

ಪಂಕಜಲೋಚನ ಪಂಕವಿಮೋಚನ
ಪಂಕಜಾಲಯಾಲಂಕೃತ ಗಾತ್ರ ೨

ಶರಣಾಗತಜನ ಭರಣಾಧೃತ ರಥ ಚರಣ ಫಣಿಗಿರಿ ವರದ ವಿಠ್ಠಲ ೩

## ೨೫

ನಾರಾಯಣ ನಿನ್ನ ಪಾರಾಯಣಗೈವ
ಧೀರತನವ ಪಾಲಿಸೋ ಪ

ಪಾರವಿಲ್ಲದ ಭವ ಪಾರಾವರದೊಳೊಂದು
ತೀರಕ್ಕೆನ್ನನು ಸೇರಿಸೋ ಅ.ಪ

ನಿನ್ನಕಿಂಕರ ಭಾವವನ್ನು ಮರೆತು ನಾನಾ ಜನ್ಮದಿ
ತೊಳಲುತ ಖಿನ್ನನಾಗಿ
ನಿನ್ನ ದಯದಿ ನರಜನ್ಮದಿ ಜನಿಸಿದೆ
ವರ್ಣಶ್ರೇಷ್ಠರಕುಲದಿಬಹು ಪುಣ್ಯದಿ
ಇನ್ನು ಪುನರಪಿ ಜನ್ಮವಿಲ್ಲ ನಿನ್ನ ಕಿಂಕರನನ್ನು ಸೇರಿಸಿ
ಘನ್ನ ಮಹಿಮನೆ ನಿನ್ನ ಸೇವೆಯೊಳುನ್ನತದರತಿಯನು
ಪಾಲಿಸಿ ॥ನಾರಾ॥ ೧

ಅಷ್ಟಯೋನಿಗಳಲ್ಲಿ ಹುಟ್ಟಿಸಾಯುತ ಬಲು
ಕೆಟ್ಟಿರ್ಮವ ಮಾಡಿ ಕಷ್ಟಪಟ್ಟು ಎಷ್ಟು ನಿನಗೆ
ಮೊರೆಯಿಟ್ಟು ಬೇಡಲಿ
ಎಳ್ಳಿನಷ್ಟು ಕಾರುಣ್ಯವು ಪುಟ್ಟದೇನೋ
ಸೃಷ್ಟಿಗೈಯುವೇ ಪುಷ್ಠಿಗೈಯುವೆ ಕಟ್ಟಕಡೆಯೊಳು ನಷ್ಟಪಡಿಸುವೆ
ಸೃಷ್ಟಿಯೊಳು ಜೊತೆಗಟ್ಟಿನೋಡುವ ದಿಟ್ಟರಾರೈ ವಿಷ್ಣುಮೂರುತಿ ೨

ಧರೆಯ ರಾಜ್ಯವನೊಲ್ಲೆ ಸಿರಿಯಸಂಪದ ವೊಲ್ಲೆ
ಸುರರು ಭೋಗಿಪ ಸುರಪುರವಾನೊಲ್ಲೆ
ಪರಮೇಷ್ಟಿಪುರದೊಳಗಿರಲಾ ನೊಲ್ಲೆನು
ನಿನ್ನ ಹೊರತಾದಕೈವಲ್ಯ ಸ್ಥಿರವೊಲ್ಲೆನು
ನಿರುತ ನಿನ್ನಯ ಚರಿತೆಯಲಿ ಮನವಿರಲಿ
ನಾನಾ ತೆರದಿ ಭಕ್ತಿಯೊಳಿರಲಿ
ಯನ್ನಯ ಕರಣವೃತ್ತಿಯು ಪರಮ ಪುಲಿಗಿರಿ ವರದ ವಿಠಲ ೩

## ೨೬

ನಾರಾಯಣಯೆಂಬ ನಾಮವ ನೇಮದಿ
ಪಾರಾಯಣ ಮಾಡಿರೋ
ಪಾರವಿಲ್ಲದ ಭವ ಪಾರಾವಾರದೊಳುತ್ತಾರಕವಿದು ನೋಡಿರೋ ಪ

ನೀರಬೊಬ್ಬುಳಿಕೆಯು ತೋರುವ ರೀತಿ
ಶರೀರನೆಚ್ಚಿರಬೇಡಿರೋ
ಸಾರುವ ಮೃತ್ಯುವ ದಾರಿಗೆ ಗೋಚರ ಧಾರಿಣಿಯಲಿ ಪೇಳಿರೋ ೧

ದೇಹಕ್ಕೆ ನೆಲೆಯಿಲ್ಲ ಮೋಹಕೆ ಕೊನೆಯಿಲ್ಲ
ಸಾಹಸ ಪಡಬೆಡಿರೋ
ದೇಹಗೇಹಂಗಳನೂಹಿಸಿ ಸಂಗಡ ಬಾಹವೆಂದಿರ ಬೇಡಿರೊ ೨

ದೇಹರಕ್ಷಣೆಗೆಂದು ಗೇಹವನಿರ್ಮಿಸಿ ನೇಹದಿ ನಾರಿಯೊಳು
ಗೇಹಿನಿಯೆಂದತಿ ಮೋಹದಿ ಕೆಡುವನು ದೇಹಿಸಂಸಾರದೊಳು ೩

ನಾರಿಯು ಮೋಹನಾಕಾರಿಯು ಲೋಕಕೆ
ಮಾರಿಯಲ್ಲವೆ ಕೇಳಿರೋ
ನಾರಿಯಾರಿಗೆ ಮಕ್ಕಳಾರಿಗೆ ಜೀವಿತದಾರಿಯೆಲ್ಲಿಗೆ ಪೇಳಿರೋ ೪

ಮಂಚಬಾರದು ತನ್ನ ಮಡದಿಯು
ಬಾರಳು ಕಂಚುಕನ್ನಡಿಬಾರದೀ
ಸಂಚಿತ ದ್ರವ್ಯದಿ ಕೊಂಚವು ಬಾರದು ವಿಸಂಚಿಗೆ ದೇಹವಿದು ೫

ಹಲವು ಸಾಹಸದಿಂದ ಘಳಿಸಿದರ್ಥಗಳೆಲ್ಲ ಬಳಸಿನ ಬಾಂಧವರು
ನಿಳಯದೊಳುಂಡುಟ್ಟು ನಲಿದು ನಂಟರು ಎಂದು
ಒಲಿದುಕೊಂಡಾಡುವರು ೬

ಅರ್ಥವಿದ್ದವನ ಸಮರ್ಥನೀತನ ಜನ್ಮಸಾರ್ಥಕವೆಂಬುವರು
ಅರ್ಥವ ಕಳಕೊಂಡು ಸಾರ್ಥನಾಗಲು
ಜನ್ಮವ್ಯರ್ಥವೆಂದುಸುರುವರು ೭

ರೊಕ್ಕವಿದ್ದರೆ ಕೈಲಿ ಸಕ್ಕರೆ ಮಾತಿನೊಳಕ್ಕರೆ ಪಡಿಸುವರು
ರೊಕ್ಕವಿಲ್ಲದವನ ಮಕ್ಕಳು ಮಡದಿಯರು ಲೆಕ್ಕಿಸದಿರುತಿಹರು ೮

ಧರಣಿಗೋಸುಗ ತಮ್ಮ ಹರಣವ ಕಳಕೊಂಡು
ಮರಣವ ಪೊಂದುವರು
ಮರಳು ಜಗಳಕೆ ತರಳರು ಚಾಚುತೆ ಕೊರಳನು ಕೊಯ್ಯುವರೋ ೯

ತಂದೆಯ ಬಿಡುವರು ಕಂದನ್ನ ಬಡಿವರು
ಬಂಧುಗಳನ್ನು ಕೊಲ್ವರು
ಒಂದಿಗೆ ಜನಿಸಿದರೆಂದು ನೋಡರುನಿಜ ದಂದುಗಕ್ಕೊಳಗಹರು ೧೦

ನಂಟರು ನಮಗಿವರುಂಟೆಂದು ಮೋಹದ ಗಂಟುಕಟ್ಟಿರೆ ಮನದಿ
ಕಂಟಕ ಯಮಬಂದು ಗಂಟಲಬಿಗಿವಾಗ ನಂಟರಿಲ್ಲವು ಜಗದಿ ೧೧

ಅಪತ್ತುಬಂದಾಗ ಪಾಪಿಯು ಮನದನು ತಾಪದಿ ನೆನೆಯುತಿರೆ
ಕಾಪಾಡುವನಾಗ ಶ್ರೀಪತಿ ಪುಲಿಗಿರಿ ಭೂಪನು ನಮ್ಮದೊರೆ ೧೨

ನೊಂದ ಗಜೇಂದ್ರನ ಕಂದ ಪ್ರಹ್ಲಾದನ ಬಂದವಿಭೀಷಣನ
ಚಂದಿರಮುಖಿ ನೃಪನಂದನ ಧ್ರುವರನು ಚಂದದಿ ಸಲಹಿದನ ೧೩

ಅಜಮಿಳಗೊಲಿದನ ಕುಜನರ ತರಿದನ ಸುಜನರನಾಳಿದನ
ಭಜಕರದಾತನ ತ್ರಿಜಗಕ್ಕೆ ನಾಥನ ವಿಜಯನ ರಥಸೂತನ ೧೪

ಅಂಗಜಜನಕನ ಮಂಗಳ ಮಹಿಮನ ಗಂಗೆಯ ಪಡೆದವನ
ರಂಗನ ಸುಗುಣ ತರಂಗನ ಶಂಖರಥಾಂಗವ ಪಿಡಿದಿಹನ ೧೫

ಗೌತಮ ಭಾರ್ಯೆಯ ಪೂತೆಯ ಮಾಡಿದ
ಖ್ಯಾತ ಪಾದಾಂಬುಜನ
ವಾತನ ಮಗನೊಳು ಪ್ರೀತಿಯ ಬೆಳಸಿದ ಸೇತು ವಿಧಾತನ ೧೬

ರಾಮನ ಜಗದಭಿ ರಾಮನ ದೈತ್ಯವಿರಾಮನ ಭಜಕಜನಾ
ರಾಮನ ದಶರಥರಾಮನ ಸೀತಾರಾಮನ ಗುಣಧಾಮನ ೧೭

ಪಂಕಜನೇತ್ರನ ಪರಮ ಪವಿತ್ರನ ಶಂಕರನುತಿಪಾತ್ರನ
ವೆಂಕಟರಮಣನ ಕಿಂಕರ ಶರಣನ ಸಂಕಟ ಹರನಾಮನ ೧೮

ಧರೆಯೊಳುತ್ತಮ ಪುಲಿಗಿರಿಯೊಳು ನೆಲಸಿದ
ವರದ ವಿಠಲ ದೇವನ
ಶಿರಿನಾಮವೆ ತನ್ನ ಮರೆಯದೆ ನೆನೆಯಲು
ಪೊರೆಯುವದಾನರನ ೧೯

## ೨೭

ನಾರಾಯಣ ರಕ್ಷಿಸೊ ನಮ್ಮನು ಲಕ್ಷ್ಮೀನಾರಾಯಣ ರಕ್ಷಿಸೋ ಪ

ಪಾರರಹಿತಭವ ಪಾರಾವಾರದಿಬಲು
ಘೋರತಾಪವು ಮೀರಿತೋ ಭವ
ದೂರ ನಿತ್ಯೋದಾರ ಕರುಣದಿ ಅ.ಪ.

ಶ್ರೀಶ ನಿನ್ನರ್ಚಿಸದೆ ಶ್ರೇಯಸ್ಸುಖದಾಶಯನೇ ತೊರೆದೆ
ಕೋಶ ಕಳತ್ರ ನಿವೇಶ ತನುಜ ಮಾಯಾ
ಪಾಶದೊಳಗೆ ಶಿಲ್ಕಿಗಾಸಿಯಾದೆನು ಜಗದೀಶ
ನಿಖಿಲಸುರೇಶ ಕಮಲ
ಪಲಾಶ ನಯನ ದಿನೇಶ ಶತ ಸಂಕಾಶ
ವ್ಯಾಘ್ರಗಿರೀಶ ಭವ ಭಯ
ಪಾಶ ಹರಪರಮೇಶ ವಂದಿತ॥ನಾರಾಯಣ॥ ೧

ದೇಹಾಭಿಮಾನದಲ್ಲಿ ತೀವಿದಭೂತ ದ್ರೋಹವನಾಚರಿಸುತಲಿ
ಸೋಹಮೆಂಬುವ ಬಲು ಮೋಹದಿ
ಸಿಲುಕಿ ದಾಸೋಹಮೆನ್ನದೆ ದೈವ
ದ್ರೋಹಿಯಾದೆನು ವಿದೇಹ
ಜಾವರಿಗೂಹನೋಚಿತದೇಹ ವಿಜಿತವಿದೇಹ

ಖಗವರವಾಹ ಶುಭಪರಿವಾಹ ನಿಖಿಲ ನಿರೀಹ ಲೋಕವಿ
ಮೋಹನಾಚ್ಯುತ ||ನಾರಾಯಣ|| ೨

ಗುರು ಹಿರಿಯರ ಮರೆದು-ಗರ್ವದಿ
ಧರ್ಮಾಚರಣೆಯನೆರೆತೊರೆದು
ದುರುಳರ ಸಂಗದಿ ಜರಿದು ಸಜ್ಜನರನು ಜರಿದು ದುರ್ಗತಿಗೆ ನಾ
ಗುರಿಯಾದೆನು ಹರಿ ಪರಮ ಪುರುಷ ಪರಮ ಪಾವನ
ಚರಣ ಸುಗುಣಾಭರಣದೀನೋದ್ಧರಣ ಭವ ಸಂಹರಣ
ವಿಶ್ವಂಭರಣ ಪುಲಿಗಿರಿ ವರದ ವಿಠಲ ||ನಾರಾಯಣ|| ೩

## ೨೮

ನಿನಗಿದು ಘನವೆ-ನಿತ್ಯಾತ್ಮಕವನಜಭವಾದಿಗಳನು ಪಾಲಿಪದೇವ ಪ

ಸದಯನೀನಾದರೆ-ಬದುಕಿಸಿ ಪಶುಗಳ
ಮುದವನು ತೋರಿಸು ಮಧುಸೂಧನ ಈಗ ೧

ಇದಿರಿಗೆ ನೋಡಲಾರದೆ ನಿನ್ನ ದೂರಿದೆ
ಇದುವೊಂದು ತಪ್ಪುಯನ್ನದು ಎಂದು ಮುನ್ನಿಸು ೨

ವಿಷದ ನೀರನು ಕುಡಿ-ದಸುವನ್ನು
ಕಳಕೊಂಡ ಪಶು ಪಾಲಕರಿಗೆ ನೀನಸುವಿತ್ತು ಪೊರೆದೆ ೩

ಹೊಟ್ಟೆಯೊಳಗೆ ಸತ್ತು ಹುಟ್ಟಿದ ಶಿಶುವನ್ನು
ಮುಟ್ಟಿ ಜೀವನವಿತ್ತೆ ಕೃಷ್ಣಾಕೃಪಾಕರ ೪

ಗುರುಸುತನನು ಯಮ ಪುರದಿಂದ ಕರೆತಂದ
ಪರಮ ಶ್ರೀ ಪುಲಿಗಿರಿ ವರದ ವಿಠಲರಾಯ ೫

## ೨೯

ನಿನ್ನ ದಾಸರ ದಾಸ ನಾನಯ್ಯ–ಹರಿ–
ಯನ್ನನುಪೇಕ್ಷಿಪರೇನಯ್ಯ ಪ

ಕಾಮಕ್ರೋಧಗಳಿನ್ನೂ ಬಿಡಲಿಲ್ಲ–ನಿನ್ನ–
ಪ್ರೇಮವೆನ್ನೊಳುಕಾಲಿಡಲಿಲ್ಲ
ನೇಮನಿಷ್ಠೆಗಳನು ಕೊಡಲಿಲ್ಲ–ಭವ–
ತಾಮಸಬೀಜವ ಸುಡಲಿಲ್ಲ ೧

ಆಚಾರದಲಿ ಕಾಲಗತಿಯಿಲ್ಲ–ಬಲು–ನೀಚರ ಸಂಗಕೆ ಮಿತಿಯಿಲ್ಲ
ಪ್ರಾಚೀನ ಕರ್ಮಕ್ಕೆ ಚ್ಯುತಿಯಿಲ್ಲ–ಇದ–
ಗೋಚರಪಡಿಸುವ ಮತಿಯಿಲ್ಲ ೨

ದೇಹದಿ ಬಲವಿಲ್ಲವಾದರೂ–ವ್ಯಾ–
ಮೋಹವು ಬಿಡದಲ್ಪವಾದರೂ
ಗೇಹದಿ ಸುಖವಿಲ್ಲದಿದ್ದರು–ಈ ಸೋಹಮೆಂಬುದಕಿಲ್ಲ ಬೇಸರು ೩

ದಾಸರ ಸಂಗದೊಳಾಡಿಸು–ಹರಿ–ವಾಸರವ್ರತದೊಳು ಕೂಡಿಸು
ವಾಸುದೇವನೆ ನಿನ್ನ ಪಾಡಿಸು–ಸಿರಿವಾಸನಾಮದ ಸವಿ ಯಾಡಿಸು ೪

ಶರಣವತ್ಸಲನಹುದಾದರೆ–ಘನ–ಕರುಣಾರಸನಿನಗುಳ್ಳರೆ
ಕರುಣಿಸು ಪುಲಿಗಿರಿ ವಾಸಹರೆ–ಸಿರಿ–ವರದ
ವಿಠಲ ನೀನೆ ನಮ್ಮದೊರೆ ೫

## ೩೦

ನೀನುಳಿಯೆ ರಕ್ಷಕರ ಕಾಣೆನೀ ಜಗದೊಳಗೆ
ಶ್ರೀನಿವಾಸ ಜಗನ್ನಿವಾಸ ಪ

ದೀನ ರಕ್ಷಕ ನಿಖಿಲ ಮಾನವರಮಾನಾಭಿಮಾನ
ದೊಡೆಯನು ನೀನೇಯಲ್ಲದಿಲ್ಲಾ ಅ.ಪ.

ನಕ್ರಮುಖದಲ್ಲಿ ಸಿಕ್ಕಿ ದುಃಖಿಸುವ ಕರಿರಾಜ
ಚಕ್ರವರ್ತಿಯು ಶರಣು ಹೊಕ್ಕೆನನಲು
ಚಕ್ರವನು ಪಿಡಿದು ನೀನಕ್ಕರೆಯೊಳೈತಂದು
ನಕ್ರವದನವಸೀಳಿ ರಕ್ಷಿಸಿದೆ ಗಜವಾ-ದೇವ ೧

ಹಿಂದೆ ನಾನಾನ್ನಗಿರಿಯಿಂದ ಬಹದಾರಿಯೊಳು
ಸಂದುಗೆಳೀಚಲು ಭಂಡಿ ಸಂಜೆಯೊಳಗೆ
ಮುಂದಾಗ ಜೊತೆಯೊಳಗೆ ಬಂದು ಜನಕೆಲ್ಲಿನೀ
ಬಂದು ಬೆಳಕನು ತೋರಿ ಮಂದೆಗೂಡಿದೆ ಕೃಷ್ಣಾ ೨

ಇಂದು ನಿಜ ಸತಿಯುನೊಂದಳುಬ್ಬಸರೋಗದಿಂದ
ಗಾಳಿಯದೀಪದಂದಮಾಗಿ/ ನಂದಿಪೋಗದ ಮುನ್ನ
ಬಂದು ನೀಮರೆಯಾಗು ಎಂದು
ಮೊರೆಯಿಡಲೀಗ ಬಂದು ಸಲಹಿದೆ ತಂದೆ ೩

ಗುರುಸುತನ ಸಂಯಮಿನೀ ಪುರದಿಂದ ತಂದಿತ್ತೆ
ತುರುಗಾಯ್ವರಸುಗಳನು ಮರಳಿಪಡೆದೆ
ನರಪೌತ್ರನನು ಬಾಣದುರಿಯಿಂದ ರಕ್ಷಿಸಿದೆ
ಸರಿಯಾರು ನಿನಗೆ ಸುರನರಭುಜಂಗರಲ್ಲಿ ೪

ತರಳಧ್ರುವ ಪ್ರಹ್ಲಾದ ತರುಣಿ ಪಾಂಚಾಲಿ
ಕುರು ವರವಿಭೀಷಣ ತಾಪಸರನುಪೊರೆದೆ
ಶರಣರನು ಪಾಲಿಸುವ ಬಿರುದು ಧರಿಸಿಹ
ವ್ಯಾಘ್ರಗಿರಿಯೊಳಗೆ ನೆಲಸಿರುವ ವರದ ವಿಠಲ ರಾಯ ೫

## ೩೧

ನೀನೇಗತಿಯೆನಗೆ ನೀರಜನೇತ್ರ ನಿನ್ನ
ಪಾದಂಗಳ ನಂಬಿದೆ ಕೊನೆಗೆ ಪ

ಶ್ರುತಿಹಿತಧರ್ಮವಿಶ್ರುತನಾನಲ್ಲ ಸತತವು
ಜ್ಞಾನಿಯ ಜೊತೆ ಸೇರಲಿಲ್ಲ ೧

ಭಕ್ತಿಪಥದಿಮನ ವರ್ತಿಸಲಿಲ್ಲ ಯುಕ್ತಿಯಿಂ ವಿಷಯವಿರಕ್ತನಾನಲ್ಲ ೨

ಗುರುಕುಲವಾಸದಗುರುತೆನಗಿಲ್ಲ ಪರಮ
ಭಾಗವತರ ಪರಿಚರ್ಯವಿಲ್ಲ ೩

ಮಂತ್ರಾರ್ಥದಭೋಧೆ ಮನದೊಳಗಿಲ್ಲ
ತಂತ್ರದೊಳಗೆ ಜಾಣ್ಮೆಯನಗಿನಿತಿಲ್ಲ ೪

ಸಜ್ಜನ ಸಹವಾಸ ದುಜ್ಜುಗವಿಲ್ಲ–ದುರ್ಜನರ
ಸಂಗತಿ ವರ್ಜಿಸಲಿಲ್ಲ ೫

ಹರಿಕಥೆ ಮಾಡುವ ಪ್ರಜ್ಞೆನನಗಿಲ್ಲ ದುರುಳ
ಕಾಮುಕಸಂಗ ಕಿರಿದಾಗಿಲ್ಲ ೬

ಪರಿಪರಿಕಷ್ಟವ ಪರಿಹರಿಸುವನೆ ಪರಮ
ಶ್ರೀಪುಲಿಗಿರಿ ವರದ ವಿಠಲನೆ ೭

## ೩೨

ನೀರಜಾಕ್ಷನಿನ್ನೂರಿಗೆ ಪೋಗುವ ದಾರಿಯ ತೋರಯ್ಯ ಪ

ಘೋರವಾದ ಸಂಸಾರವೆಂಬ ಕಾಂತಾರದಿ
ತೊಳಲುವೆ ದಾರಿಯ ಕಾಣದೆ ಅ.ಪ.

ಜನ್ಮಾಂತರಕೃತ ಕರ್ಮಗಳೆಂಬುವ ಹೆಮ್ಮರಗಳು ಬೆಳೆದು
ಧರ್ಮನಿರೋಧವಿ ಕರ್ಮದ ಬಳ್ಳಿಯು ಬಿಂಮನೆ ಬಿಗಿವಡೆದು
ದಮ್ಮಿನ ಗುಂದಿಯ ಹೆಮ್ಮೆಯಕಂಟಕವೆಮ್ಮನು ಕಾಲಿಡ
ಲಮ್ಮಗೊಡವುಹರಿ ೧

ನಾರಿಯ ಮೋಹದ ಭಾರಿಯದುರ್ಗವು ದಾರಿಯೊಳಡಸಿಹುದು
ಮೀರಿಬರಲುಘನ ಚೋರರು ಕಾದಿಹರಾರುಮಂದಿ ಮುಳಿದು
ಮೂರುತೆರದೊಳಿಹ ಘೋರ ತಾಪಗಳು ಸಾರಿ
ಸಾರಿ ಬಾಯಾರಿಸುತಿರ್ಪವು ೨

ಮನೆ ಮನೆ ವಾರ್ತೆಗಳೆನಿಪ ಮಹಾನದಿಯನು
ದಾಂಟುವೊಡರಿದು
ಧನಕನಕಾದಿಗಳೆನಿಪ ಪಿಶಾಚಗಳನವರತವು ಬಿಡವು
ತನು ಸಂಬಂಧದ ಜನಗಳು ದುರ್ಮೃಗವನು
ಪೋಲುತ ನಮ್ಮನು ಬಾಧಿಸುತಿರುವರು ೩

ಕ್ಷುದ್ರವಿಷಯಗಳು ಛಿದ್ರವಹುಡುಕುವ ವಧುಗದೇಪದೊಳು?
ಕದ್ರುಸುತರವೋಲುಪದ್ರವಗೈವವಭದ್ರದ ಭೀತಿಗಳೂ
ನಿದ್ರೆಯೊಳೆಮ್ಮನು ಮುದ್ರಿಸಿಗೈವಳುಪದ್ರವ
ಜರೆಯೆಂಬುದ್ರಿಕ್ತಾಂಗನೆ ೪

ಸುರನರವರರೊಳು ತರಣೋಪಾಯವನರಸಿದೆ ಮನವಿರಿಸಿ
ನರಿಗಳ ಪರಿಯಲಿ ನರಳುವರೆಲ್ಲರು ನರಕಗಳನುಭವಿಸಿ
ಶರಣಾಗತರನು ಪೊರೆಯುವ ಪುಲಿಗಿರಿ
ವರದ ವಿಠಲನಿಜ ಚರಣವೆ ನಂಬಿದೆ ೫

೩೩

ಪಚ್ಚೆಯು ಬಂತೀಗ–ಶ್ರೀಪುಲಿಗಿರಿ ಪಚ್ಚೆಯ ನೋಡಿ ಬೇಗ ಪ

ಸಚ್ಚಿದಾನಂದರೂಪಚ್ಚರಿಯಾದಂಥ
ಮುಚ್ಚುಮರೆಯಿಲ್ಲದಚ್ಚುತ ನೆಂಬುವ ಅ.ಪ

ಕೈಗೆ ಸಿಕ್ಕುವದಲ್ಲವೈತ–ಕ್ಕಡಿಯಲ್ಲಿ–ತೂ ಗಿನೋಡುವದಲ್ಲವೈ
ಆಗಮಾಂತಗಳಲ್ಲಿ ಯೋಗಿ ಹೃದಯದಲ್ಲಿ
ಭಾಗವತರೊಳನುರಾಗದಿಮೆರೆಯುವ ೧

ಬೆಲೆಯ ಕಟ್ಟುವದಲ್ಲವೈ ಈ ಪಚ್ಚೆಯ ನೆಲೆಯಕಂಡವರಿಲ್ಲವೈ
ನಲಿದು ಧ್ಯಾನಿಪರಿಗೆ–ಒಲಿದು ತೋರುವ ದಿವ್ಯ
ಜಲಧರವರ್ಣದ ಜಲಜಾಕ್ಷನೆಂಬುವ ೨

ಧರೆಯೊಳುತ್ತಮವಾಗಿಹ–ಶ್ರೀ ಪುಲಿಯೆಂಬ–
ಗಿರಿಯೊಳು ನೆಲೆಯಾಗಿಹ
ಚರಣವ ನಂಬಿದ ಶರಣರ ಪೊರೆಯುವ
ವರದವಿಠಲ ಧೊರೆವರದನೆಂದೆಸರಾದ ೩

## ೩೪

ಪರಮ ಪುರುಷ ಪರೇಶ ಪಾವನ ಪರಮ ಮುನಿಜನ ಪಾಲನ
ಶರಧಿ ಶಯನೆ ವಿಹಂಗವಾಹನ ಶಾರದಾಂಬುಜಲೋಚನಾ ೧

ವಾಸುದೇವ ವಿರಿಂಚಿ ವಂದಿತ ವಾಸವಾದಿ ಸುರಾರ್ಚಿತ
ವಾಸುಕಿ ಪ್ರಿಯ ಭೂಪಭಾವಿತ ವಾಸರೇಶಕುಲೋದಿತ ೨

ಶರಣ ಜನರ ಸೌಖ್ಯವಿತರಣ ಶುಭಗುಣಸಾಗರ
ವರದ ಪುಲಿಗಿರಿವಾಸ ವೆಂಕಟ ವರದ ವಿಠಲ ದಯಾಕರ ೩

## ೩೫

ಪರಮ ಪುರುಷ ಬಾರೋ-ಪಾವನ-
ಚರಣಯುಗವ ತೋರೋ ಪ

ಶರಣರ ಪೊರೆಯುವ ಕರುಣಿಗಳರಸನೆ
ನಿರುತವು ನಿನ್ನನೆ ನೆರೆನಂಬಿದೆ ಹರಿ ಅ.ಪ.

ದಿಕ್ಕು ನೀನೆ ಎಂದು-ನಂಬಿದನಕ್ಕರಿಂದ ಬಂದು
ಟಕ್ಕಿನಿಂದ ನೀ ನಕ್ಕಜ ಮಾಡಲು ತಕ್ಕುದೇನ
ಘನ ರಕ್ಕಸ ವೈರಿಯೆ ೧

ಇಷ್ಟದೇವನಾರೋ-ಮನಸಾಭೀಷ್ಟವ ಕೊಡುಬಾರೋ
ಅಷ್ಟರೊಳಗೂ ಬಹಳಿಪ್ಪದೆನೆಲಸಿದ ಕೃಷ್ಣಮೂರ್ತಿ
ನೀಂದೃಷ್ಟಿಸು ನಮ್ಮನು ೨

ಕೇಣವ್ಯಾಕೋಹರಿಯೇ-ಕಣ್ಣಿಲಿ-ಕಾಣ ಬಾರೋ ಧೊರೆಯೇ
ಪ್ರಾಣದೊಡೆಯ ನೀ ಕಾಣಿಸುಹರ್ಷವ ಕಾಣೆ ನಿನಗೆ
ಸರಿ ಜಾಣತನದಿಹರಿ ೩

ವಾರಿಧಿಕೃತಶಯನ–ವಿಕಸಿತ–ವಾರಿಜದಳನಯನ
ಕ್ಷೀರದೊಳದ್ದುನೀ ನೀರೊಳಗದ್ದು ಕಂಸಾರಿ ನಿನ್ನನೆ
ಸಾರಿದೆ ನರಹರಿ ೪

ಧರೆಯೊಳಧಿಕವಾದ–ಶ್ರೀ ಪುಲಿಗಿರಿಯೊಳು ನೆಲೆಯಾದ
ಶರಣಾಭರಣ ನಿಜ ಕರುಣವ ತೋರಿಸು
ವರದವಿಠಲಧೊರೆ ವರದ ದಯಾನಿಧೆ ೫

೩೬

ಪಾಲಿಸೆನ್ನ ಶ್ರೀಲೋಲ ಕೃಪಾಳೋ
ಬಾಲಕನುಕ್ತಿಯ ಲಾಲಿಸಿ ಕೇಳೋ ಪ

ಕಾರಾಗಾರ ಶರೀರದಯುಗಳ ದಾರಾಪತ್ಯದ ದಾರಿಯನಿಗಳ ೧

ಆರುಮಂದಿ ಬಲು ಶೂರರು ಖಳರು ಚೋರರು
ಚಿತ್ತವ ಹಾರಿಸುತಿಹರು ೨

ತನುಸಂಬಂಧದ ಜನರರ್ಥಿಯಲಿ ।
ಕೊನೆವರು ದುರ್ಮೃಗವನು ಪೋಲುತಲಿ ೩

ತಾಪತ್ರಯ ಪರಿತಾಪದ ಬೇಗೆ । ಈ ಪರಿಮೋಚನ ಶ್ರೀಪತಿ ಹೇಗೆ ೪

ಕರುಣದಿ ಶ್ರೀಪುಲಿಗಿರಿಯೊಳಿರುವನೆ ।
ಶರಣರ ಪೊರೆಯುವ ವರದವಿಠಲನೆ ೫

## ೩೭

ಪಾಲಿಸೋಯನ್ನ ಪರಾತ್ಪರಾ ಹರಿ ಪ

ಪಾಲಿಸೊ ಬುಧಹಿತ ಫಾಲನಯನನುತ
ಲೀಲಾನಟನಫಣಿ ಶೈಲ ನಿಳಯ-ಹರಿ ಅ.ಪ.

ಜಲಜಭವನ ನಿಜಕುಕ್ಷಿಯೊಳಿದ್ದ ಸುಲಲಿತ
ವೇದಾಪಹಾರಿಯಕಂಡು
ಜಲಚರ ರೂಪಿನಿಂದಾ ಖಳನ ಸಂಹರಗೈದು
ಜಲಜಸಂಭವನಿಗೆ ಒಲಿದ ಮತ್ಸ್ಯಾವತಾರ ೧

ಅಂದು ದೂರ್ವಾಸನಶಾಪದಿ-ಜಗವು-ಇಂದಿರೆ
ಕರುಣಾವಿಹೀನದಿ ಬಲು
ನೊಂದು ಕಂಗೆಡುತಲಿರೆ ಸಿಂಧುಮಥನಗೈದು
ಇಂದಿರೆಯನು ತಂದ ಮಂದರಧರ ಕೂರ್ಮ ೨

ದುರುಳ ಹಿರಣ್ಯಾಕ್ಷನೆಂಬುವ-ದೈತ್ಯ-ಧರಣಿಯನ
ಪಹಾರಗೈಯಲು ಬೇಗ
ಪರಮೇಷ್ಟಿಗೊಲಿದು ಸೂಕರನ ರೂಪವ ತಾಳಿ
ಧರಣೀಚೋರನ ಕೊಂದ ಸರಸೀರುಹಾಂಬಕ ೩

ಸರಸಿಜಜನ ವರದರ್ಪದಿ ಜಗವನುರುಹಿ-ತರಳನಭಾದೆ
ಗೈಸಿದ ಬಲು
ದುರುಳ ಹಿರಣ್ಯಕನುರವ ನಖದಿಂದ ಸೀಳಿ
ಕರುಳಮಾಲೆಯನಿಟ್ಟ ಧುರಧೀರ ನರಹರಿ ೪

ಬಲಿಯ ಮೂರಡಿ ಭೂಮಿದಾನವ ಬೇಡಿ
ಅಳೆದು ಈರಡಿಮೂಡಿಲೋಕವ ಮತ್ತೆ

ಉಳಿದೊಂದು ಪಾದದಿ ಬಲಿಯ ತಲೆಯನು ಮೆಟ್ಟಿ
ನಲಿದು ಗಂಗೆಯಪೆತ್ತ ಚಲುವ ವಾಮನ ರೂಪ ೫

ಚಕ್ರಾಂಶನಾದ ಕಾರ್ತಿವೀರ್ಯನ-ಭುಜ
ಚಕ್ರದೊಡನೆದುಷ್ಟಭೂಪರಅತಿ
ಅಕ್ರಮವನು ಕಂಡು ವಿಕ್ರಮಾನ್ವಿತ ನೃಪ
ಚಕ್ರವ ಮುರಿದ ಮುನಿಚಕ್ರರಕ್ಷಕ ರಾಮ ೬

ಕ್ರೂರರಾವಣ ಕುಂಭಕರ್ಣರ-ಬಲು-ಘೋರತನಕೆ
ತ್ರಿದಿವೇಶರದೊಡ್ಡ
ದೂರಕೇಳುತ ಮನುಜಾಕಾರವ ಧರಿಸಿ ದೈತ್ಯ
ವೀರರ ಮಡುಹಿದ ಶ್ರೀ ರಾಮ ಮೂರುತಿ ೭

ಬಲಭದ್ರನೆಂಬುವ ನಾಮದಿ-ಧುರದಿ-ಹಲ
ನೇಗಿಲುಗಳನು ಹಸ್ತದಿಪಿಡಿದು
ಬಲವಂತರಾದ ದೈತ್ಯಕುಲವತರಿದು ದಿವಿಜ
ಕುಲವ ಸಂರಕ್ಷಿಸಿದ ಜಲಧರ ನಿಭಚೇಲ ೮

ದುಷ್ಟಕ್ಷತ್ರಿಯರ ಭಾರ ತಾಳದೆ-ಧರಣೀ-ಸೃಷ್ಟೀಶನಲ್ಲಿದೂರಿಡೆ
ಬಲು ಭ್ರಷ್ಟಕೌರವ ಯುಧಿಷ್ಠಿರರಿಗೆ ವೈರಿ ಪುಟ್ಟಿಸಿ
ಭೂಭಾರ ಮಟ್ಟುಮಾಡಿದ ಕೃಷ್ಣ ೯

ಕಲಿಯಿಂದ ಕೆಡೆ ನಿಜಧರ್ಮವು ಬಹುಖಳರಿಂದ
ವ್ಯಾಪಿಸೆಲೋಕವು ಆಗ
ಲಲಿತತೇಜಿಯನೇರಿ ಕಲುಷಾತ್ಮಕರಕೊಂದು
ವಿಲಸಿತ ಧರ್ಮವನ್ನು ಸಲಹಿದ ಕಲ್ಕಿರೂಪ ೧೦

ಗಿರಿಜಾವಿವಾಹದಿ ತೃಷ್ಣನ-ಶಾಪ-ಶರಧಿಯಿಂಟಿದ
ಮುನಿಗೈದಲುಬೇಗ
ವರವ್ಯಾಘ್ರಗಿರೀಶನೆ ಶರಣೆಂದಮುನಿಪಗೆ
ವರವಿತ್ತು ಸಲಹಿದ ವರದ ವಿಠಲ ಹರಿ ೧೧

## ೩೮

ಪಾದಸೇವೆಯ ಪಾಲಿಸೋ ಪಂಕಜನಾಭ ಪ

ಪಾದಸೇವೆಯ ತೋರೋ ವೇದಗೋಚರವ್ಯಾಪ್ತ
ಭೂಧರ ವಿಹರಣ ಶ್ರೀಧರ ಹರಿ ನಿನ್ನಪಾದ ಅ.ಪ.

ಶೇಷವಾಯುಗಳತಿ ದೋಷವರ್ಜಿಸಿ
ತನು ಶೋಷಿಸಿ ತಪನವಿಶೇಷವಾಚರಿಸೆ
ದೋಷರಹಿತ ಗುಣ ಭೂಷಾಶೇಷನಿಗೊಲಿದು
ಶೇಷಪರ್ವತಶಿರೋ
ಭೂಷಣವೆನಿಸಿದ ಪಾದಸೇವೆಯ ೧

ಬಲಿ ಚಕ್ರವರ್ತಿಯು ಬಲವೈರಿಯನು
ಬಲು ಬಳಲಿಸಿ ರಾಜ್ಯವ ಛಲದಿಂದಾ ಕ್ರಮಿಸೆ
ನಲಿದು ವಾಮನನಾಗಿ ಬಲಿಯ ದಾನವ ಬೇಡಿ ನೆಲನ
ಈರಡಿ ಮಾಡಿ ಬಲಿಯಮೆಟ್ಟಿದ ಧಿಟ್ಟ ಪಾದ ೨

ಪಲಕಾಲ ಶಾಪದಿ ಶಿಲೆಯಾಗಿದ್ದ ಗೌತಮ
ಕುಲಸತಿಗೊಲಿದು ನಿರ್ಮಲತಪೋವನಕೆ
ಸುಳಿದು ಆ ಲಲನೆಯ ಕಲುಷವಖಂಡಿಸಿ ಲಲನಾರೂಪವನಿತ್ತು
ಸಲಹಿದ ಪಾವನ ॥ಪಾದಸೇವೆಯ॥ ೩

ತರಣಿ ತನಯನೆಚ್ಚ ಗರಳ ಶರವು ಬೇಗ
ನರನುತ್ತಮಾಂಗಕ್ಕೆ ಗುರಿಯಾಗಿ ಬರಲು
ಚರಣ ದುಂಗುಟದಿಂದ ಧರಣೀತಳವನೂರಿ
ನರನ ಶಿರವಕಾಯ್ದ ನರನಾರಾಯಣ ನಿನ್ನ ॥ಪಾದ॥ ೪

ಪುಲಿನಾಮದಸುರನು ಛಲದಿ ಮಾಂಡವ್ಯನ-ಗಳವ
ಪಿಡಿದು ಬಾಧೆಗೊಳಿಸೆ ವೇಗದಲಿ
ಪುಲಿಗೆ ಮೋಕ್ಷವನಿತ್ತು ಪುಲಿಗಿರಿಯಲಿ ಮುನಿ ಕುಲಜ
ಮಾಂಡವ್ಯಗೆ ಒಲಿದ ವರದ ವಿಠಲ ॥ನಾರಾಯಣ॥ ೫

## ೩೯

ಪಿತಾಂಬರಧರ ನಮೋ ನಮೋ
ವನಜಾತಾಂಬಕತೇನಮೋನಮೋ ಪ

ಖ್ಯಾತಚರಿತ್ರವಿಧಾತೃಜನಕ ಪುರುಹೂತ
ಸಹೋದರ ನಮೋನಮೋ ಅ.ಪ

ಜಾತರಹಿತ ಜಲಜಾತಭವಾರ್ಚಿತ ಪಾಥೋನಿಧಿಶಯ
ನಮೋನಮೋ
ಪೀತದನುಜ ಭವಭೀತಿದರಾನತ ಶ್ರೀ ತರುಣೀಪ್ರಿಯ
ನಮೋನಮೋ ೧

ಶಾಮಳ ನೀರದ ಕೋಮಳ ದೇಹನಿ
ರಾಮಯ ನಿರ್ಮಲ ನಮೋನಮೋ
ಕಾಮಜನಕ ಬಲರಾಮ ಸಹಜ ಸಂಗ್ರಾಮ
ಮುಜ್ವಲ ನಮೋನಮೋ ೨

ನಂದಗೋಪ ವರನಂದನ ಲಲನಾನಂದನ
ಸುಂದರ ನಮೋನಮೋ
ಕುಂದರದನಶರದಿಂದು ವದನ ಗೋವಿಂದಜನಾರ್ದನ
ನಮೋ ನಮೋ ೩

ಹಂಸಡಿಂಬಕ ಬಕಕಂಸಪ್ರಮುಖ ನೃಶಂಸ ವಿಹಿಂಸಕ
ನಮೋನಮೋ

ಸಂಸರದಘವಿಧ್ವಂಸಕ ಪರಮಹಂಸೋತ್ತಂಸಕ
ನಮೋನಮೋ ೪

ಶರಣಜನಾವನ ಶಶಿಕುಲಪಾವನ ಗರುಡಗಮನತೇ
ನಮೊನಮೋ
ತರುಗಣಸಂಕುಲ ವರವ್ಯಾಘ್ರಾಚಲ ವರದ ವಿಠಲತೇ
ನಮೋನಮೋ ೫

## ೪೦

ಫಾಲನಯನ ನುತೆ ಪಾಲಿಸು ಸತತೆ
ಪಾಲಿತ ಸುರನರ ಜಾಲಸುಚರಿತ ಪ

ಲೀಲಾನಟನ ಫಣಿ ಶೈಲನಿಳಯ ಭಕ್ತ ಪಾಲವಿದೈತವನ
ಮಾಲಶ್ರೀಲೋಲ ೧

ಬಾಲತನದಿ ನಿಜ ಲೀಲಾಚರಿತಗುಣ
ಜಾಲವಿಮೋಹಿತ ಬಾಲಾನು ಕೂಲ ೨

ಧಾರಾಧರಾಭ ಶರೀರ ತಿರಸ್ಕೃತದೂರ ವಿಹಗಸಂ ಚಾರವುದಾರ ೩

ಘೋರ ದನುಜ ಸಂಹಾರ ಸುಜನಪರಿವಾರ
ನಿಗಮ ವಿಚಾರ ವಿಹಾರ ೪

ಕರುಣಾವರಣ ನಿಜ ಶರಣಾ ಭರಣ ಭಯ ಹರಣಸಕಲ
ಸುಖಕರಣ ಶ್ರೀರಮಣ ೫

ಶೇಷಶಯನ ಕಲಿ ದೋಷದಮನ ಮೃದು ಭಾಷ
ಮನೋಹರಭೂಷ ಸುವೇಷ ೬

ಹರಿದಾಸರನು ಬಲು ಹಿರಿದಾಗಿಮೆರೆಸುವ
ದ್ವಿರದವರದ ಶ್ರೀವರದ ವಿಠಲ ೭

## ೪೧

ಬಂದೆ ಗೋವಿಂದ ನಿನ್ನ ಸನ್ನಿಧಿಗೆ–ಮುದದಿಂದ
ಕಾಣಿಕೆಯನು ತಂದೆ ನಿನ್ನಡಿಗೆ ಪ

ನಾರಾಯಣನೆಂಬ ಚೋರ ದುಷ್ಕೃತಗಳ
ಹಾರಿಸಿಕೊಂಬುವ ಶೂರನೆಂದು
ದೂರಕೇಳುತ ಬಹು ಭಾರಿಪಾಪಂಗಳ ಸೇರಿಸಿ
ತಂದೆ ಮುರಾರಿ ವಿಚಾರಿಸಿ ೧

ಇಲ್ಲದ ವಸ್ತುವಿಗಲ್ಲವೆ ಲೋಕದೊಳೆಲ್ಲರ ಮಾನಸರುಲ್ಲಾಸವೂ
ಫುಲ್ಲನಾಭನೆ ನಿನ್ನೊಳಿಲ್ಲದೋಷಗಳೆಂದು
ನಿಲ್ಲದೆ ದುರಿತಗಳೆಲ್ಲ ಸೇರಿಸಿಕೊಂಡು ೨

ಪರಮ ಪುರುಷನಿನ್ನ ಚರಣದ ಸೇವೆಗೆ
ಬರಿಕೈಯೊಳೆಂದಿಗು ಬರಲಾಗದೆಂದು
ಪರಿಪೂರ್ಣನಿನ್ನೊಳಗಿರದ ವಸ್ತುಗಳನ್ನು ಪರಿಕಿಸಿ
ತಂದೆನೈ ವರದ ವಿಠಲ ಹರಿ ೩

## ೪೨

ಬದುಕಿಸೀ ಪಶುಗಳನೂ ಭಗವಂತ ನೀನು ಪ

ಬದುಕಿಸೀ ಪಶುಗಳ ಭವರೋಗವೈದ್ಯನೆ
ಕದಲಿಸೀರೋಗವ–ಕರುಣೆಗಳರಸನೆ ಅ.ಪ.

ಗೋವುಗಳೆಲ್ಲಾ ಹೊಟ್ಟೆ–ನೊವಿನಿಂ ಕಂಗೆಟ್ಟು
ಮೇವನುಬಿಟ್ಟ ವಿದಾವರೊಗವೋ ಕಾಣೆ ೧

ಹೊಟ್ಟೆ ಕಳೆದು ಕಂಗೆಟ್ಟುಧಾತುಗಳೆಲ್ಲಾ
ಕೆಟ್ಟು ಜೀವಂಗಳ ಬಿಟ್ಟುಬಿಡದಮುನ್ನ ೨

ನಾಲಿಗೆ ನೀಡವು ಕಾಲು ಕೆಟ್ಟವು ಕಂ
ಣಾಲಿ ಕೆಂಣಾಲಿ ಕೆಂಪಾದವು ಮೂಲವೆ ತಿಳಿಯದು ೩

ಗೋವುಗಳಿಗೆ ಭೂದೇವರುಗಳಿಗೆಲ್ಲ
ದೇವ ನೀನಲ್ಲವೆ–ದೇವಕೀ ತನಯನೆ ೪

ಸತ್ತವರಿಗೆ ಜೀವವಿತ್ತು ಬದುಕಿಸಿದೆ
ಮೃತ್ಯುದೇವತೆ ನಿನ್ನ ತೊತ್ತಹಳಲ್ಲವೆ ೫

ದಾಸನು ನಾನೆಂಬ ವಾಸಿಯುಳ್ಳರೆ ಬೇಗ
ವಾಸಿಯ ಮಾಡಯ್ಯ ನೀ ಮೋಸವ ಮಾಡದೆ ೬

ಇಷ್ಟದಿನೆನೆವರ ಕಷ್ಟವ ಕಳೆವ ಪುಲಿ
ಬೆಟ್ಟದೊಳಿಹ ವರದ ವಿಠಲ ಕೃಷ್ಣನೀ ೭

## ೪೩

ಬೃಂದಾವನವೇರಿ–ಬಹುನಲವಿಂದ ಬಂದ ಶೌರಿ ಪ

ಬೃಂದಾರಕವರದಿಂದ ಶೌರಿಯಾನಂದವ ಸೇವಕ ಬೃಂದಕೆ ತೋರಿ ಅ.ಪ.

ಕುಂದಮುಕುಳದಿಂದಾ ಕುಮುದಸು ಗಂಧಿಯಗಳಿನಿಂದಾ
ಕೆಂದಾವರೆ ಶ್ಯಾವಂತಿಗೆ ಜಾಜಿಯಿಂದ
ರಚಿಸಿಸೊಗಸಿಂದಲಿ ಮೆರೆಯುವ ೧

ಸುತ್ತಿರೆ ಹಸ್ತಿಗಳೂ–ಕೂರ್ಮನು ಪೊತ್ತಿರೆ ಮಧ್ಯದೊಳು
ಮತ್ತೆಫಣೀಂದ್ರನ ಮಸ್ತಕದಲ್ಲಿರೆ ಸ್ವಸ್ತಿಕಾದಿಬಹು ಚಿತ್ರದಿ ಶೋಭಿಪ ೨

ಪಂಕಜ ಚಿಹ್ನೆಗಳಾ–ಸೂರ್‍ಯಶ–ಶಾಂಕ ಸುರೇಖೆಗಳಾ
ಶಂಖಚಕ್ರ ಬಿರುದಾಂಕಿತ ದಿವ್ಯ ವಿಟಂಕದಿಂದ
ಬಹುಬಿಂಕದೊಳೆಸೆಯುವ ೩

ಕೋಟೆಯ ತೆನೆಗಳಲಿ ದಿವ್ಯವಧೂಟಿಯರೊಲವಿನಲಿ
ನಾಟಕರಚನೆಯ ಪಾಠಕರಂದದಿ ನೋಟಕರಿಗೆ
ಬಹುದೀಟಲಿ ತೋರುವ ೪

ಶಾರದಾಭ್ರನೀಲ–ಶರೀರದಿ– ಹೈರಣ್ಮಯಚೇಲಾ
ಹಾರಮಕುಟ ಕೇಯೂರ ಕಟಕಮಂ
ಜೀರಭೂಷಣೋದಾರ ವಿಹಾರ ೫

ಮಂಗಳರವದೊಳಗೆ–ಶಂಖಮೃದಂಗ–ಧ್ವನಿಮೊಳಗೆ
ಸಂಗತ ಸುರವಾರಂಗನೆಯರು ಗಾನಂಗಳಿಂದ
ನಾಟ್ಯಂಗಳರಚಿಸಲು ೬

ವರ ವಿಪ್ರರು ಪೊಗಳೆ–ಛತ್ರಚಾಮರಗಳ ನೆಳಲೊಳಗೆ
ಪರಿಪರಿ ಜ್ಯೋತಿಗಳೆಸೆಯಲು ಪುಲಿಗಿರಿ
ವರದವಿಠಲನು ವರಗಳ ಬೀರುತ ೭

೪೪

ಬಾರೋ ಬಾರೋ ಭವಸುತ ಚರಣನೆ
ಸಾರಸುಗುಣ ಪರಿಪೂರಿತ ಕರುಣನೆ ಪ

ಚರಣ ಕಮಲಗಳಿಗೆರಗುವೆ ಭಕ್ತಿಯಲಿ
ಭರದಲಿ ಯನ್ನನು ಪೊರೆಯಲು ಮುದದಲ್ಲಿ ೧

ಅರಿದರ ವರಗಳ ಕರದಲಿ ಪಿಡಿಯುತ
ಕರಿಯನು ಪೊರೆಯುವ ತ್ವರೆಯಲಿ ಬಹುವೋಲ್ ೨

ಪರಮ ಪುರುಷಫಣಿಗಿರಿ ಶಿಖರಾಲಯ
ವರದ ವಿಠಲ ಸುಖಕರಕಮಲಾಲಯ ೩

## ೪೫

ಬಾರೋಮನೆಗೆ ಭಾಗವತರ ಭಾಗದೇಯನೆ
ಚಾರುವದನ ತಾಮರಸವ ತೋರು ಪ್ರೀಯನೆ ಪ

ಹಗಲುಯಿರಳು ನೆನಹುಬಿಡದು ಸುಗುಣಸುಂದರ
ಬಗೆಯೊಳೆನ್ನ ಮರೆಯಬಹುದೆ ನಿಗಮಗೋಚರ ೧

ಕಣ್ಣಿನಿಂದ ನಿನ್ನ ನೊಡಿಧನ್ಯನಾಗುವೆ
ನಿನ್ನ ಚರಣಕೆನ್ನ ಶಿರದಿ ಮುನ್ನಬಾಗುವೆ ೨

ನಿತ್ಯ ತೃಪ್ತನಿನಗೆ ನಾನೇ ಭೃತ್ಯನಾಗುವೆ
ನೃತ್ಯಗೈದು ಪಾಡಿಕೃತಕೃತ್ಯನಾಗುವೆ ೩

ಶ್ರೀನಿವಾಸ ನಿನ್ನ ದಾಸನಾನೇನಲ್ಲವೆ
ಮಾನಪ್ರಾಣಗಳಿಗೆ ಧೊರೆಯು ನೀನೇಯಲ್ಲವೆ ೪

ಶರಣ ಜನರ ಭರಣಗೈವ ಕರುಣಿಯಾರೆಲಾ
ಹರಿಣಹರಧರದೊಳಿರುವ ವರದವಿಠಲಾ ೫

## ೪೬

ಬಾರೊ ಮನೆಗೆ ಶ್ರೀದಾರನೆ ನಿಜಪರಿವಾರದೊಡನೆ
ಗುಣವಾರಿಧಿಯೆ ಪ

ಮಾರಜನಕಸುಕುಮಾರಾಂಗ ಪರಮೋ ।
ದಾರಾ ಕೃತಿಯನೀ ತೊರಿಸೆನೆಗೆ ೧

ಎಷ್ಟು ಜನ್ಮದ ತಪ ವೊಟ್ಟಾಗಿ ಸೇರಲು ।
ದೃಷ್ಟಿಸುವೆನೊ ಶ್ರೀಕೃಷ್ಣನಿನ್ನನು ೨

ಚೆನ್ನದ ಪೀಠದಿ ರನ್ನದ ಕಲಶದಿ ।
ಚೆನ್ನಾಗಿ ತೊಳೆಯುವೆ ನಿನ್ನಡಿಗಳ ೩

ಗಂಧವ ಹಚ್ಚಿ ಸುಗಂಧ ತುಳಸೀದಳ ।
ದಿಂದಾಲಂಕರಿಸುವೆ ಸುಂದರಾಂಗನೆ ೪

ಜಾಜಿಯು ಮೊದಲಾದ ಹೂಜಾತಿಗಳತಂದು ।
ಮೂಜಗದೊಡೆಯನನು ಪೂಜಿಸುವೆನೊ ೫

ಲೋಪವಿಲ್ಲದೆ ದಿವ್ಯ ಧೂಪವನರ್ಪಿಸಿ ।
ದೀಪಂಗಳನು ಬಹುದೀಪಿಸುವೆನು ೬

ಪಾಲು ಸಕ್ಕರೆ ಘೃತ ಮೇಲಾದ ಭೋಜ್ಯವ ।
ಮೇಳೈಸುವೆನು ಶ್ರೀಲೋಲನಿಗೆ ೭

ಕರ್ಪೂರ ವೀಳ್ಯವನರ್ಪಿಸಿ ಮೋದದಿ ।
ಕರ್ಪೂರದಾರತಿಗಳರ್ಪಿಸುವೆನು ೮

ಮಣಿದು ನಿನ್ನಂಘ್ರಿಗೆ ಹಣೆಯ ಚಾಚುತ ।
ಮನದಣಿಯುವಂದದಿನಾ ಕುಣಿದಾಡುವೆ ೯

ಸದಯ ನಿನ್ನಂಘ್ರಿಯ ಹೃದಯಾರ ವಿಂದದ ।
ಸದನದೊಳಿಂಬಿಟ್ಟು ಮುದಹೊಂದುವೆ ೧೦

ಶರಣಾಗತರನೆಲ್ಲ ಕರುಣದಿ ಸಲಹುವ । ವರದ ವಿಠಲ
ಪುಲಿ–ಗಿರಿ ಧಾಮನೆ ೧೧

೪೭

ಬಿಡಲಾರೇ ಬಿಡಲಾರೇ ಪ

ಕಡಲೊಳು ಪವಡಿಪ ಮೃಡನುತ ನಾಮನ ಅ.ಪ.

ಕಾಶಿಯೊಳಗೆ ವಿಶ್ವೇಶನು ಬೋಧಿಪ ।
ದಾಶರಥಿಯವರ ಸಾಸಿರನಾಮದ ೧

ಗೌರವದಿಂದಲಿ ಗೌರಿಯು ಜಪಿಸುವ ।
ಗೌರವೆನಿಪ ದುರಿತಾರಿಯ ನಾಮವ ೨

ಭಕ್ತರು ಸಕಲ ವಿರಕ್ತರು ನಿತ್ಯದಿ ।
ರಕ್ತಿಪಡುವ ಗುಣಯುಕ್ತನ ನಾಮವ ೩

ಇಷ್ಟದಿ ನೆನೆವರ ಕಷ್ಟವಳಿದುಮನ ।
ದಿಷ್ಟಕೊಡುವ ಪರಮೇಷ್ಠಿಯ ನಾಮವ ೪

ಚರಣವ ನಂಬಿದ ಶರಣರ । ಪೊರೆಯುವ ವರದ
ವಿಠ್ಠಲ ಧೊರೆ ವರದನ ನಾಮವ ೫

## ೪೮

ಭಜತಿ ಭುಜಗಶಯನಂ ಸದಾಹೃದಿ ಪ

ಸಜಲ ಜಲದಶಾರೀರ ಮುಕುಂಡಿತ ಭುಜಗಶೈಲ
ಶಿಖರಾಲಯಮನಿಶಂ ಅ.ಪ

ಶೇಷ ಪವನ ಸಂವಾದವದೇನ ವಿಶೇಷ
ಕರುಣಾಯಾತ್ರಾಗತಮೀಶ ೧

ರಾಮ ಲಕ್ಷಣಾರಾಧಿತಮಜಭವ ಕಾಮಜನಕ
ಮಕಳಂಕ ಚರಿತ್ರಂ ೨

ಪಾಂಡುತನಯ ಮಾಂಡವ್ಯಾರಾಧಿತ ಪುಂಡರೀಕ
ದಿವ್ಯಾದ್ರಿವಿಹಾರಂ ೩

ಚಂಡಕಿರಣರಥ ಮಂಡನಾಂಗಮಜ
ಮಂಡಜಾತಾವರವಾಹನ ಗಮನಂ ೪

ಪರಮ ಪುರುಷ ಮಖಿಳಾಗಮವೇದ್ಯಂ
ವರದ ವಿಠಲ ಮನುಚಿಂತಯದಾದ್ಯಂ ೫

## ೪೯




ಭಜನೆಯ ಮಾಡಬಾರದೆ-ಭಕ್ತಿಮೀರದೆ ಪ

ಭುಜಗಶಯನ ಗೋದ್ವಿಜಕುಲದೇವನ ಅ.ಪ

ಅಜಭವ ಮುಖಸುರ ವ್ರಜವಂದ್ಯನಪದ
ಭಜಕ ಸುಜನರಿಗೆ ನಿಜಸುಖದಾತನ ೧

ಪಂಕಜನೇತ್ರನ ಪರಮ ಪವಿತ್ರನ
ಶಂಕರನುತ ನಿಷ್ಕಲಂಕನ ೨

ಚರಣವ ನಂಬಿದ ಶರಣರ ಪೊರೆಯುವ
ವರದ ವಿಟಲ ಧೊರೆ ವರದನ ೩

## ೫೦

ಭಾವಯ ಭವಭಾವಿತ ಚರಣಂ ಭವಭಯಾಪರಿಹರಣಂ ಪ

ಭಾವನೋಚಿತ ಭಾಗ್ಯ ವಿತರಣ ಕೊವಿದಂನಿಜ
ಭಾವದಂ ಹೃದಿ ಅ.ಪ

ವ್ಯಾಘ್ರಭೂಮಿಧರಾಗ್ರ ವಿಹರಣ ಮಗ್ರಜನಶರಣ್ಯಂ
ಶೀಘ್ರಫಲದಮುದಗ್ರಪೌರುಷ ವಿಗ್ರಹಂ ಸುರಾಗ್ರಗಣ್ಯಂ ೧

ಕುಂಡಲೀ ಫಣ ಮಂಡಲಾತ್ಕೃತ ಮಂಡಜಾತಗಮನಂ
ಪುಂಡರೀಕ ಸುಮ ಮಂಡಿತ ಹಾರಮ ಖಂಡಿತ
ಹಿಮಕರ ಮಂಡಲ ವದನಂ ೨

ರಾಮಮಿನಕುಲ ಸೋಮಮಾಶ್ರಿತ ಪ್ರೇಮಮಾಂಜಿಭೀಮಂ
ಶ್ಯಾಮಜಲಧರ ಕೋಮಲಂ ಗುಣ ಧಾಮಮೀಸ ಪ್ರೇಮನಾಮಂ ೩

ನಂದನಂದನ ಮಿಂದಿರಾ ಹೃದಳಿಂದ ಲೋಲ ಮಿಳಿಂದಂ
ಕುಂದರದನ ಮಮಂದ ಕರುಣಾನಂದಿತಾ ಶಿಲಲೋಕವೃಂದಂ ೪

ಸಾರನಿಗಮಪಿಹಾರ ಕುಶಲಮುದಾರ ವರದ ವಿಠಲಂ
ಘೂರಮಾಕುಚಕೋರ ಕಾಂಚಿತ ಚಾರುಮುಕ್ತಹಾರ ಪಟಿಲಂ ೫

೫೧.

ಮಂದರಧರಗೋವಿಂದ ಮುಕುಂದ ಸುನಂದ
ವಂದ್ಯನೆ ಲಾಲಿಸೋ
ಕುಂದರದನ ಶರದಿಂದುವದನ ಮುಚುಕುಂದ
ವರದನೇ ಪಾಲಿಸೋ ಪ

ಸಾರಸಭವನುತ ಸಾರಚರಿತ ಸಂಸಾರ
ಪಯೋನಿಧಿ ಪಾರದನೆ
ವಾರಿಧಿಮದಹರ ವಾರಿಧಿನಿಭಶಾರೀರವಿಹಾರ ವಿಶಾರದನೆ ೧

ಶ್ರೀಶನಿಖಿಲ ಲೋಕೇಶಜನಕಭವ ಪಾಶವಿಮೋಚನ ಪಟುಚರಿತ
ಈಶವಿನುತ ಸರ್ವೇಶ ಪರಾತ್ಪರ ಕೇಶವ ಸದ್ಗುಣ ಗಣಭರಿತ ೨

ಧರೆಯೊಳು ಶ್ರೀ ಪುಲಿಗಿರಿಯೊಳು ನೆಲಸಿಹ
ಶರಣರ ಸಲಹುವ ಶ್ರೀಧರನೆ
ವರದ ವಿಠಲ ಸುಖಕರಣ ಕುಶಲ ಕರಿವರದ ಚಕ್ರಧರ ವರನೆ ೩

## ೫೨

ಮಟ್ಟುದೊರಿತು–ನಿನ್ನ ಗುಟ್ಟು ಹಾರಿತು ಪ

ಸಿಟ್ಟುಗೊಳ್ಳಬೇಡವೆನ್ನ ದೃಷ್ಟಿಯಿಂದ ನೋಡಿ ಕಂಡೆ
ಅಷ್ಟಸಿದ್ಧಿಗಳಿದ್ದರೂ ವೊಂದಿಷ್ಟುಕೊರತೆ ಕೃಷ್ಣನೆಂಬ ೧

ಹೇಯ ಗುಣವಿಲ್ಲ ಮುನಿ–ಗೇಯ ನಿನ್ನೊಳೆಂಬ ಜನರ
ಬಾಯ ಮುಚ್ಚಿಸುವೆನೆಂದತ್ಯಾಯಸಪಡುವನೆಂಬ ॥ಮಟ್ಟು॥ ೨

ಸತ್ಯಕಾಮನಹುದು ನೀನು ಸತ್ಯಸಂಕಲ್ಪನು ನಿನಗೆ
ಮಿಥ್ಯಾವಚನವಿಲ್ಲವೆಂಬೊಂದಿ
ದತ್ಯಧಿಕ–ಕೊರತೆಯೆಂಬ ॥ಮಟ್ಟು॥ ೩

ಜ್ಞಾನವಂತನೆಂದು ಬಹುಮಾನವಂತನಾದರೂ ಅ
ಜ್ಞಾನ ಶೂನ್ಯನೆಂಬ ದೊಡ್ಡ ಹಾನಿಯೊಂದಿರುವದೆಂಬ ೪

ಎಲ್ಲ ವಸ್ತುಗಳುಂಟು ನಿನಗೆ ಪುಲ್ಲನಾಭ ನಿನ್ನ ಬಳಿಯೋ
ಳಿಲ್ಲವೆಂಬ ಶಬ್ದಮಾತ್ರವಿಲ್ಲವೆಂಬ ಮಾತು ಬಂದಿಹ ೫

ಪಾಪವೆಂಬ ಕತ್ತಲೆಗೆ ದೀಪನಾಗಿದ್ದರು ಜನರ
ಪಾಪಗಳ ನಪಹರಿಪ ದೀಪನಾ ಬಿಡದು ಎಂಬ ॥ಮಟ್ಟು॥ ೬

ಜ್ಯೋತಿಗಳಿಗೆಲ್ಲ ಪರಂಜ್ಯೋತಿಯಾಗಿರುವ ನಿನಗೆ ಆ
ಜ್ಯೋತಿಗಳೆತ್ತಿದಾರತೀ ಪ್ರೀತಿಯೆಂದು ಜನರು ಪೇಳ್ವ ॥ಮಟ್ಟು॥ ೭

ಹಾನಿವೃದ್ಧಿ ಶೋಕಮೋಹ ಜ್ಞಾನ ನಿನ್ನೊಳಿಲ್ಲವೆಂಬ
ಹೀನವಾಕ್ಯವ ಪೇಳ್ವರೆಲ್ಲ ಮಾನನಿಧಿಗಳೆಂತೆಂಬ ॥ಮಟ್ಟು॥ ೮

ನಿತ್ಯ ತೃಪ್ತನಾದರೂ ನಿಜ–ಭೃತ್ಯರನ್ನು ಪಾಲಿಸುವ
ನಿತ್ಯ ಕರ್ಮದಲ್ಲಿ ಕೃತಕೃತ್ಯನು ನೀನಲ್ಲವೆಂಬ ೯

ಕಷ್ಟಪಡಬೇಡವೆನ್ನೊ-ಳೆಷ್ಟು ದುರ್ಗುಣಂಗಳಿಹ
ವಷ್ಟನು ಪೊಪ್ಪಿಸಿ ನಿನಗಿಷ್ಟನಾಗಬೇಕೆಂಬ ॥ಮಟ್ಟು॥ ೧೦

ಕ್ಷೀರದಧಿನವನೀತ-ಚೋರನಾಗಿರಲಿ ಗೋಪೀ
ಜಾರನಾಗಿರಲಿ ಸಂಸಾರವೈರಿಯು ನೀನೆಂಬ ॥ಮಟ್ಟು॥ ೧೧

ಕೊರತೆಯೆಂಬಾಜನರಿಗೆಲ್ಲ-ವರವನಿತ್ತು ಪೊರೆವೆನೆಂಬ
ಸ್ಥಿರವಾಗಿ ಶ್ರೀ ವ್ಯಾಘ್ರ ಗಿರಿಯೊಳಿರುವ
ವರದವಿಠಲನೆಂಬ ॥ಮಟ್ಟು॥ ೧೨

೫೩

ಮನವೇ ಚಿಂತಿಸು ಹರಿಯ-ಮುರಾರಿಯ ಪ

ಮನವೆ ಚಿಂತಿಸು ಮಾಯಾ ಮನುಜಾಕಾರವ ತಾಳ್ದ
ಸನಕಾದಿ ಸನ್ಮುನಿ ವಿನುತಪದ ವನಜಾತ
ಯುಗಳನು-ಮನವೇ ಅ.ಪ.

ಸ್ಮರವಿರಿಂಚಿನಯ ಪಿತನ-ಗೌರೀವರ-ಪುರಹೂತರಿಗೆ ತಾತನೆ
ರತಿದೇವಿ-ಸರಸತಿಯರ ಮಾವನ-ಶ್ರೀರಮಣನ
ಸರಸಿಜಾಸನಿಗೆ ಕರುಣೀಸುವೇದವ ಗಿರಿಯ ನೆಗೆಹಿ
ವಿಶ್ವಂಭರೆಯ ದಾಡೆಯೊಳೆತ್ತಿ
ತರಳಗಭಯವನಿತ್ತು ಮೂರಡಿ ಧರೆಯ ಬೇಡುತ
ತರಿದುನೃಪರನು ದುರುಳ ರಾವಣಹರಣ ನೀಲಾಂ-
ಬರನ ಯದುವರ ತುರಗವಾಹನ ೧

ನಿಗಮಾಂತ ಗೋಚರನ-ನಿತ್ಯಾನಂದ-ಸುಗುಣಗಣಾರ್ಣವನ
ಸಜ್ಜರಿಗೆ-ಸುಗತಿಯಪಾಲಿಪನ ಸುರಪಾಲನ
ನಿಗಮಚೋರನ ಕೊಂದು ನಗವ ಬೆನ್ನೊಳು ಪೊತ್ತು
ಜಗವನುದ್ಧರಿಸಿ ನರಮೃಗದರೂಪವ ತಾಳಿ

ಜಗವ ನಳೆದನ ಭೃಗುಜ ಶಾಖಾ ಮೃಗವ ವಧಿಸಿ ಹಲ
ನೇಗಿಲನು ಪಿಡಿದುಗುರು ಕೊನೆಯಿಂ
ನಗುವನೆ ನೆಗಹಿದ-ನಿಗಮನುತ ಕಲಿಯುಗದ ವೈರಿಯ ೨

ಪುಲಿಯ ಸಂಹರಿಸಿದನ-ಮಾಂಡವ್ಯಗೆ-ಒಲಿದು
ಪೂಜೆಯಕೊಂಬನ
ಕುಂಭಜ ಶಾಪ-ಕಲುಷವ ಕಳೆದನ-ವ್ಯಾಘ್ರಾಚಲ
ದಲಿನಿಂತು ಭಕ್ತರ ಸಲಹುವ ಕಾರುಣ್ಯನಿಲಯ
ಸಜ್ಜನ ಮನೋನಿಲಯ ಶ್ರೀನಿವಾಸನ
ಜಲಜಬಾಂಧವ ಕುಲಪವಿತ್ರನ ಜಲಜನೇತ್ರನ
ಜಲಜ ಗಾತ್ರನ ವಿಲಸಿತಾಂಬುಜ
ಮಾಲಭಕ್ತರಿಗೊಲಿವ ಶ್ರೀವರದಾರ್ಯ ವಿಠಲನ ೩

## ೫೪

ಮನೆಗೆ ಬಾರೋ ರಂಗ-ಮನಸಿಜನಯ್ಯನೆ
ಕಣ್ಣಿನೊಳಗೂ ನಿನ್ನನೆನಹು ಬಿಡದುಯನ್ನ ಪ

ಮನೆಗೆ ಬಾರೋ ರಂಗ-ಮನೆಗೆ ಬಾರೋ ಕೃಷ್ಣ
ಮನೆಗೆ ಬಾರೋ ರಾಮ ಅ.ಪ

ಮನೆಗೆ ಬಂದರೆನಿನ್ನ ಮಹಿಮೆಯ ಪಾಡುತ
ಮನದಣಿವಂದದಿ ಕುಣಿದೇನೊ ರಂಗಯ್ಯ ೧

ಮನೆಯು ನಿನ್ನದು ಯನ್ನ ತನುವು ನಿನ್ನುದು ಮುನ್ನ
ಧನವು ನಿನ್ನದುಯನ್ನ ಘನವು ನಿನ್ನದು ರನ್ನ ೨

ದರಹಸಿತಾನನ-ಸರಸಿಜನಯನ
ವರದವಿಠಲ ಪುಲಿಗಿರಿವರಸದನ ೩

## ೫೫

ಮರೆತಿರಲಾರೇ–ಮನಸಾರೇ ಹರೇ ಪ

ಮರೆತಿರಲಾರೆನಾಮ ಹಿತ ಚಾರಿತ್ರನ
ಸರಸಿಜ ಪತ್ರನೇತ್ರನ ಅ.ಪ.

ಬಗೆ ಬಗೆರತಿಯಲ್ಲಿ ಜಗವನ್ನುಮೋಹಿಪ
ಸುಗುಣನ ಜಗತ್ಪ್ರಾಣನ ೧

ಚೇತನರಿಗೆ ಸುಖದಾತನ
ದುಃಖ ವಿಘಾತನ ಲಕ್ಷ್ಮೀನಾಥನ ೨

ದಾಸರ ಹೃದಯ ನಿವಾಸನ
ದೋಷನಿರಾಸನ ಶ್ರೀನಿವಾಸನ ೩

ವೆಂಕಟರಮಣನ ಕಿಂಕರಶರಣನ
ಸಂಕಟಹರ ನಿಷ್ಕಲಂಕನ ೪

ಮಾನಿನಿಯ ಅಭಿಮಾನವ ಕಾಯ್ದನ
ದೀನರ ಹರ್ಷನಿಧಾನನ ೫

ರಾಮನ ದೈತ್ಯವಿರಾಮನ ಪಾವನ
ನಾಮನ ಹೃದಯಾರಾಮನ ೬

ಧರೆಯೊಳುತ್ತಮ ಪುಲಿಗಿರಿಯೊಳು ನೆಲಸಿಹ
ವರದ ವಿಠಲವರದನ ದೇವನ ೭

## ೫೬

ಮಳೆಯ ಪಾಲಿಸ್ಯಯ್ಯ-ಮಂಗಳ-ನಿಳಯ ಲಾಲಿಸಯ್ಯ ಪ

ಇಳೆಯೊಳು ಮಳೆಯನು ತಳೆಯದೆ ತೃಣಗಳು ಬೆಳೆಯದೆ
ಗೋವುಗಳಳಿವುವಯ್ಯಾ ಅ.ಪ.

ಗೋವಿಪ್ರರ ಕುಲವ-ಕಾಯುವ-ದೇವನು
ನೀನಲ್ಲವೆಮೇವುಗಳಿಲ್ಲದೆ ಗೋವುಗಳೆಲ್ಲವು
ಸಾವುವುನಿನ್ನುಳಿದಾವನು ಕಾವನು ೧

ಕೆರೆಯೊಳು ನೀರಿಲ್ಲಾ-ಭಾವಿಗಳೊರತೆಯ ಸೊರಿಲ್ಲಾ
ತುರುಗಳು ಜೀವನದಿರವನು ಕಾಣದೆ
ಹರಣವ ಬಿಡುವುವು ಕರುಣದಿ ಬೇಗನೆ ೨

ಬಲರಿಪುಖಾತಿಯಲಿ ಬಾಧಿಸೆ ಜಲಮಯ ರೀತಿಯಲಿ
ಚಲಿಸದೆ ಕರದೊಳಾಚಲವನು
ಕೊಡೆವಿಡಿದುಳುಹಿದೆ ಗೋವ್ಗಳ ಬಳಗವ ನೀಗಳುಂ ೩

ಜಲನಿಧಿಕೃತ ಶಯನ ಶಾರದ ಜಲರುಹದಳನಯನ
ಜಲಧೀದಿತಿ ಜಲಚರಮಾರುತಿ ಜಲಜಕರಗಳಿಂ ಜಲದಾಗರದಿಂ ೪

ದಾರಿಯಜನರೆಲ್ಲ-ಬಹುಬಾಯಾರಿ ಬರುವರಲ್ಲಾ
ದೂರದಿಂತಂದಿಹ ನೀರನು ಲೋಭದಿ ನಾರಿಯರೆಲ್ಲ
ವಿಚಾರಿಸುತಿರ್ಪರು ೫

ಬೆಳಿದಿಹ ಸಸ್ಯಗಳು ಬಿಸಲಿನ ಝಳದಲಿ ಬಾಡಿಹವು
ನಳಿನನಯನ ನಿನ್ನೊಲುಮೆಯ ತೋರಿಸಿ
ಘಳಿಲನೆ ಪೈರುಗಳುಳಿಯುವ ತೆರೆದೊಳು ೬

ಕರುಣಾನಿಧಿಯೆಂದುನಿನ್ನನು ಶರಣುಹೊಕ್ಕೆನಿಂದೂ
ಶರಣಾಭರಣ ಪುಲಿಗಿರಿಯೊಳು ನೆಲಸಿಹ
ವರದ ವಿಠಲದೊರೆವರದ ದಯಾನಿಧೆ ೭

## ೫೭

ಮಾಮವ ಮೃಗರಿಪು ಗಿರಿರಮಣ-ಮಹಿತ ಗುಣಾಭರಣ ಪ

ಕಾಮ ಕಲುಷಭವ ಭೀಮಜಲಧಿಗತ ತಾಮಸಾತ್ಮಕಂ
ದುರಿತಚರಿತ ಮಹಿ ಮಾಮ ಅ.ಪ.

ನಿಟಿಲನಯನ ಮಕುಟ ಲಸಿತ ವದನ ನೀರಾ-ಪೂರಾ
ನೀಲ ಜಲದ ಮದಹೇಳನ ಸುಭಗಶರೀರ
ಕುಟಿಲದನುಜ ಕುಲಶಿಖರಿ ಕುಲಿಶಧರ ಕುಂದ ಕುಟ್ಮಲ
ಸಮಾನ ಶುಭರದನ ೧

ವದನ ವಿಜಿತ ಶರದಮೃತಕಿರಣ ಸುಕುಮಾರಾಕಾರಾ
ವತ್ಸಲ ಸಿತ ಶುಭಲಕ್ಷಣ ಲಕ್ಷ್ಮೀಧಾರಾ
ಸದಯ ಹೃದಯ ಪರಿತೋಷಿತ ನತಜನ ಸಾಮಗಾನರತ
ಸತತ ಶುಭ ಚರಿತ॥ಮಾಮವ॥ ೨

ಸಕಲದಿವಿಜ ನುತ ಚರಣ ಕಮಲ ನಿರಪಾಯ-ಮೇಯ
ಸಂತತಾರ್ತಾದರ ಚಕ್ರ ವಿಬುಧಗೇಯ
ಪ್ರಕಟ ಮಹಿಮ ಮಾಂಡವ್ಯ ಮನೋರಥ ಪಾರಿಜಾತ
ದುರಿತಾರಿ ವರದನುತ ॥ಮಾಮವ॥ ೩

## ೫೮

ಮಾಮವದೇವ–ಮಹಾನುಭಾವ–ಶ್ರೀಮನೋಹರ
ನಿರಾಮಯ ಚಿನ್ಮಯ ರಾಮರಮ್ಯ– ಗುಣಧಾಮ ತಾವಕಂ ಪ

ಪಂಕಜನೇತ್ರ ಪರಮ ಪವಿತ್ರ ಶಂಖಚಕ್ರಧರ
ಕಿಂಕರಾರ್ತಿಹರ ಪಂಕಜಾಲಯಾಲಂಕೃತ ಗಾತ್ರ ೧

ನಿಲಾಂಬುದಾಭ ನೀರಜನಾಭ ಬಾಲ ಭಕ್ತಪರಿಪಾಲ
ಹೇಮಮಯ । ಚೇಲನವ್ಯವನ ಮಾಲ ಸುಶೋಭ ೨

ಕರುಣಾಲವಾಲ–ಖಳಕುಲಕಾಲ
ಹರಿಣಹರಣಧರವರ ಶಿಖರಾಲಯ ವರದವಿಠಲ
ಸುಖಕರ ಕಮಲಾಲಯ ೩

## ೫೯

ಮುತ್ತು ಬಂದಿದೆ–ದಿವ್ಯ ಮುತ್ತು ಕೊಳ್ಳಿರೋ ಪ

ಮುತ್ತು ಬಂದಿಹುದೀಗನೀವೆತ್ತಿರೊಳ್ಳಿರೆಲ್ಲಬಂದು
ಉತ್ತಮವ್ಯಾಘ್ರಾದ್ರಿಪುರುಷೋತ್ತಮನೆಂಬುವ ದಿವ್ಯ ೧

ಲೆಕ್ಕವಿಲ್ಲದ ಹಣವಿತ್ತರು ಸಿಕ್ಕದದುರ್ಲಭ ಮುತ್ತು
ರೊಕ್ಕವಿಲ್ಲದೆ ಭಕ್ತರಿಗೆ ಪುಕ್ಕಟೆಯಲಿ ಸಿಕ್ಕುವಂಥ ೨

ಧನವಂತಗೆ ದೊರಕುವುದಲ್ಲ ಜನರ ಕೈಗೆ ಸಿಕ್ಕುವದಲ್ಲ
ಮನದಲ್ಲಿ ಧ್ಯಾನಮಾಳ್ಪಮುನಿಗಳ ಸ್ವಾಧೀನವಾದ ೩

ಕ್ಷೀರಪಾರಾವಾರದಲ್ಲಿ–ತೋರಿ ಮೆರೆವ ಮುತ್ತು
ಶ್ರೀರಮಾಮನೋಹರನುದಾರ ವರದ ವಿಠಲನೆಂಬ ೪

## ೬೦

ಯನಗೆ ನಾನೇ ಸರಿ–ನಿನಗೆನೀನೆ ಹರಿ
ಎಣಿಗಾಣೆ ನೀರ್ವರ್ಗೆ ವನಜನಯನ ಪ

ಧರೆಯನಾಳುವ ಸಿರಿಯರಸ ನೀನು
ಈ ಧರೆಯೊಳು ನಿರ್ಭಾಗ್ಯರೆರೆಯ ನಾನು ೧

ಪರಮೇಷ್ಠಿಯನ್ನು ಪಡೆದ ಪರಮ ನೀನು
ಬಲು ದುರಿತಂಗಳಪ್ಪಿದ ದುರುಳನು ನಾನು ೨

ಪುಣ್ಯವಂತರ ಹೃದಯ ಗಣ್ಯ ನೀನು
ಕೃತಪುಣ್ಯ ಹೀನರಿಗಗ್ರಗಣ್ಯ ನಾನು ೩

ಪತಿತಪಾವನ ನೀನು ಪತಿತ ನಾನು
ಸದ್ಗತಿದಾತ ನೀನು ನಿರ್ಗತಿಕನಾನು ೪

ವರವ್ಯಾಘ್ರಗಿರಿಯ ವರದ ವಿಠಲನು ನೀನು
ನಿಜ ಶರಣರ ಚರಣ ಧೂಳೀಪಟಲನಾನು ೫

## ೬೧

ಯಾಕೆ ಕಷ್ಟ ಪಡುವೆ ನೀನು
ಲೋಕನಾಯಕ ಸಾಕು ನಿನ್ನ ಮಾಯಾ ಜೋಕೆಯಿಂದ
ಸಲಹು ನಮ್ಮ ಪ

ಸಿರಿಯೆ ಪಟ್ಟದರಸಿ ನಿನಗೆ ಕಿರಿಯಮಡದಿ ಧರಣಿಯಾಗೆ
ಹಿರಿಯ ಮಗನು ಸರ್ವ ಜನರೊಳಿರುತ ಕಾಮಿಸುವನು ಜಗವ ೧

ಮಗನು ಜಗವ ನಿರ್ಮಿಸುವನು ಮಗುಳೆ ಲಯವಗೈವ
ಮೊಮ್ಮಗನು
ನಿನ್ನದಾಸಿಯಾ–ಜಗವ ಮೋಹಿಸುತ್ತಲಿರುವಳು ೨

ನೀರೊಳಿರುತ ಮೋರೆ ಮುಚ್ಚಿಕೊರೆ ಮಸೆದು ಕಂಬದಿಂದ
ಹಾರಿಯೆಳೆದು ಧಾರಿಣಿಯ ಧೀರ ನೃಪರನೆಲ್ಲಕೊಂದು ೩

ಊರುಬಿಟ್ಟು ಸಾರಿ ವನವ ಜಾರನಾಗಿ ಭಂಗಪಡಿಸಿ
ನಾರಿಯರನು ದಾರತೇಜಯೇರಿಮೆರೆದು ಬಾರಿ ಬಾರಿ ೪

ಪರಮಪದವನಗಲಿ ಚಂಡ ಕಿರಣರಥವ ನುಳಿದು ಕ್ಷೀರ
ಶರಧಿಯನ್ನು ಬಿಟ್ಟು ವ್ಯಾಘ್ರಗಿರಿಯೊಳಿರುವ ವರದ ವಿಠಲ ೫

## ೬೨

ಯಾಕೆ ಕಳವಳವೋ–ಮಾನಸ ನಿನಗ್ಯಾಕೆ ಕಳವಳವೋ ಪ

ಶ್ರೀಕಳತ್ರನು ಜಗದೇಕ ನಾಯಕ ನಿರಲ್ಯಾಕೆ ಅ.ಪ.

ಹೊಟ್ಟೆಯೊಳಿರಲನ್ನ ವಿಟ್ಟು ಕಾಪಾಡಿದ
ಸೃಷ್ಟಿಪಾಲಕ ಪರಮೇಷ್ಠಿಜನಕ ನಿರೆ ೧

ಬಾಲನಾಗಿರೆ ಮೊಲೆಪಾಲ ನಿರ್ಮಿಸಿ ಪರಿ
ಪಾಲಿಸಿದವ ಸಿರಿಲೋಲನಲ್ಲವೇ ೨

ಲೋಪವಿಲ್ಲದೆ ಕಾಯ್ವ ಶ್ರೀಪತಿ ಪುಲಿಗಿರಿ
ಭೂಪವರದ ವಿಠ್ಠಲಾ ಪದ್ರಕ್ಷಕ ನಿರಲ್ಯಾಕೆ ಕಳವಳವೋ ೩

## ೬೩

ಯಾಕೆ ಕೃಪೆ ಬಾರದೋ-ಲೋಕರಕ್ಷಕ ನಿನಗ್ಯಾಕೇ ಪ

ಲೋಕ ರಕ್ಷಕ ದುಷ್ಟಕಾಕ ಶಿಕ್ಷಕ ನಿನಗ್ಯಾಕೇ ಅ.ಪ.

ಪಕ್ಷಿವಾಹನನೆಸಿ ಲಕ್ಷಿಸದಿರಲು ಲೋಕದಿ
ಲಕ್ಷಣವಲ್ಲವೊ ಶುಭ ಲಕ್ಷಣ ಮೂರುತಿ ನಿನಗ್ಯಾಕೆ ಕೃಪೆ ೧

ಕುಕ್ಷಿಯೊಳೀ ಜಗವನಿಟ್ಟು ರಕ್ಷಿಸುವ ಲಕ್ಷ್ಮೀಪತಿ
ದಕ್ಷಿಣಶೇಷಾದ್ರಿವಾಸ ರಕ್ಷಿಸುವ ನಿನಗ್ಯಾಕೇಕೃಪೆ ೨

ವಾಸವ ಸನ್ನುತ ಶ್ರೀನಿವಾಸ ನಿನ್ನ ದಾಸನೊಳು
ದೋಷವೆಣಿಸದೆ ಕಾಯೊದೋಷರಹಿತನೆ ನಿನಗ್ಯಾಕೇ ೩

ಸೃಷ್ಟೀಶ ನಿನ್ನ ಶುಭ ದೃಷ್ಟಿಯಿಂದ ನೋಡಿಯನ್ನ
ಕಷ್ಟವ ಬಿಡಿಸಿ ಮನದಿಷ್ಟವ ಪಾಲಿಸು ೪

ವಾರಣ ವರದ ಭವ ತಾರಣ ಚರಣಗುಣ
ಪೂರಣ ವರದ ವಿಠಲ ಕಾರುಣಿಕರರಸನಿನಗೆ ೫

## ೬೪

ರಾಮನ ನೆನ ಮನವೇ-ಹೃದಯಾ-ರಾಮನನೆನೆ ಮನವೇ ಪ

ರಾಮನ ಜಗದಭಿರಾಮನ ಮೇಘಶ್ಯಾಮನ
ಸದ್ಗುಣ ಧಾಮನಾ ಸೀತಾ ಅ.ಪ.

ದಶರಥ ನಂದನನಾ-ಧರಣಿಯೊಳಸುರರ ಕೊಂದವನ
ಪಶುಪತಿ ಚಾಪವ ಖಂಡಿಸಿಮುದದಿಂ
ವಸುಮತಿ ಸುತೆಯಂ ಒಲಿದೊಡಗೂಡಿದ-ರಾಮನ ೧

ತಂದೆಯ ಮಾತಿನಲಿ–ವನಕೈತಂದು ಸರಾಗದಲಿ
ಬಂದ ವಿರಾಧನ ಕೊಂದು ನಿಶಾಚರಿ
ಯಂದವಳಿದು ಖಳವೃಂದವ ಸವರಿದ ೨

ಸೀತೆಯನರಸುತಲಿ–ಕಬಂಧನ ಮಾತನು ಸರಿಸುತಲಿ
ವಾತನಮಗನೊಳು ಪ್ರೀತಿಯಿಟ್ಟು ಪುರುಹೂತನ
ಸುತನಂ ಘಾತಿಸಿ ದಾತನ–ರಾಮನ ೩

ತರಣಿ ತನಯನಿಂದ–ಕಪಿಗಳ ಕರೆಸಿ ವಿಲಾಸದಿಂದ
ತರುಣಿಯನರಸಲು ಮರುತನ ಮಗನಿಗೆ
ಬೆರಳುಂಗುರವನು ಗುರುತಾಗಿತ್ತನ–ರಾಮನ ೪

ಧರಣಿಜೆಯನು ಕಂಡು–ವನವನು ಮುರಿದು
ಗುರುತು ಕೊಂಡು
ಅರಿಪುರವನು ಸುಟ್ಟುರುಹಿದ ವಾನರ–
ವರನಿಗೆ ಸೃಷ್ಟಿಪಪದವಿತ್ತಾತನ–ರಾಮನ ೫

ಶರನಿಧಿಯನು ಕಟ್ಟಿ–ಶತ್ರುನಿಕರವನು ಹುಡಿಗುಟ್ಟಿ
ಶರಣನ ಲಂಕೆಗೆ ಧೊರೆಯನು ಮಾಡಿ
ಸಿರಿಯನಯೋಧ್ಯಗೆ ಕರೆತಂದಾತನ–ರಾಮನ ೬

ಧರಣಿಯಪಾಲಿಸುತ–ಧರ್ಮದ
ಸರಣಿಯ ಲಾಲಿಸುತ
ಶರಣಾಭರಣ ಪುಲಿಗಿರಿಯೊಳು ನೆಲೆಸಿದ
ವರದವಿಠ್ಠಲ ಧೊರೆ ಪರಮೋದಾರನ–ರಾಮನ ೭

## ೬೫

ರಾಮಭಜೇ ತೇ ಪದಯುಗಳಂ-ಸಿತಾರಾಮಭಜೇತೇ
ಪದಯುಗಳಂ ಪ

ರಾಮಸುಂದರ ಘನ ಶ್ಯಾಮರಘೂದ್ವಹ ಅ.ಪ.

ದಶರಥ ಹೃದಯಾನಂದಕರಂ ತ್ರಿದಶಗಣಚಿತ್ತಾಮೋದಕರಂ ೧

ಪೂರಿತ ಕೌಶಿಕಯಜನಂ ಸಂತಾರಿತಗೌತಮ ಲಲನಾಂ ೨

ಖಂಡಿತ ಶಂಕರ ಚಾಪಂ ಪರಿ-ದಂಡಿತ ಭಾರ್ಗವ ಕೋಪಂ ೩

ಸ್ವೀಕೃತ ಜಾನಕಿ ಹೃದಯಂ-ದೂರೀಕೃತ ಪಾತಕ ನಿಚಯಂ ೪

ಪಾಲಿತಮಾತಾಪಿತೃವಚನಂ-ಸಂಲಾಲಿತ
ಮುನಿಜನ ಸ್ತುತಿರಚನಂ ೫

ಭರತ ಸಮರ್ಪಿತ ನಿಜರಾಜ್ಯಂ ಮುನಿವರ
ಭಾರದ್ವಾಜಾರ್ಪಿತ ಭೋಜ್ಯಂ ೬

ದಂಡಕಾರಣ್ಯಪಾವನ ಚರಣಂ ಉದ್ದಂಡ
ವಿರಾಧಪಾತಕ ಹರಣಂ ೭

ಕುಂಭಜಾರ್ಪಿತ ಶರಕೋದಂಡಂ ಸಂರಂಭ
ನಿರ್ಜಿತರಾಕ್ಷಸಷಂಡಂ ೮

ಪಂಚವಟೀತಟ ಕೃತವಾಸಂ ದೃಗಂಚಲ
ಧೃತಜಗದುಲ್ಲಾಸಂ ೯

ಶೂರ್ಪನಖೀವಚನಾಲೋಲಂ ಸಹಜಾರ್ಪಿತ
ವಿವಿಧಾಯುಧಜಾಲಂ ೧೦

ರೂಪನಿರ್ಜಿತ ಸುಮ ಬಾಣಾಂಗಂ ವಿರೂಪಿತದುಷ್ಟ
ಶೂರ್ಪನಖಾಂಗಂ ೧೧

ಖರತರ ಖರದೂಷಣಕಾಲಂ ಸುರ
ನರವರಮುನಿಗಣ ಪರಿಪಾಲಂ ೧೨

ಮಾಯಾಮೃಗಾರ್ಪಿತ ಬಾಣವರಂ–
ಜಟಾಯುಸಂಪಾದಿತ ಲೋಕವರಂ ೧೩

ರಾವಣಹೃತ ನಿಜ ಪತ್ನೀಕಂ ಲೋಕಾವನಗತ ಕೋಪೋದ್ರೇಕಂ ೧೪

ಸಾಧಿತಶಬರೀ ಮೋಕ್ಷಕರಂ–ಕಬಂಧ
ಬಂಧನ ಮೋಚನ ಚತುರಂ ೧೫

ವಾತತನೂಭವ ಕೃತಸ್ತೋತ್ರಂ–ಪಂಪಾತಟನಿರ್ಮಿತ ಸುಕ್ಷೇತ್ರಂ ೧೬

ಶಿಕ್ಷಿತ ಸಂಕ್ರಂದನ ತನುಜಂ–ಸಂರಕ್ಷಿತ ಚಂಡ ಕಿರಣ ತನುಜಂ ೧೭

ಸೀತಾಲೋಕನ ಕೃತಕಾಮಂ–ನಿಜಧೂತಾಮೋದನ ಸುಪ್ರೇಮಂ ೧೮

ನಿಜಕರಭೂಷಣ ದಾತಾರಂ–ಧುರವಿಜ
ಯವನಾಲಯ ಪರಿವಾರಂ ೧೯

ಧೂತಾಹೃತ ಶುಭದೃಷ್ಟಾಂತಂ–ವಿಜ್ಞಾತನಿಜಸ್ತ್ರೀ ವೃತ್ತಾಂತಂ ೨೦

ಭೀಷಣ ಜಲನಿಧಿ ಬಂಧಕರಂ–ವಿಭೀಷಣ ಸಂರಕ್ಷಣ ಚತುರಂ ೨೧

ಶೋಷಿತ ರಾವಣ ಜಲದಿಂ–ಸಂತೋಷಿತ ದೈವತ ಪರಿಧಿಂ ೨೨

ಸೀತಾಸಮಾಶ್ರಿತ ವಾಮಾಂಕಂಪರಿಭೂತ ಪಾತಕ
ನಿಜ ನಾಮಾಂಕಂ ೨೩

ಸ್ವೀಕೃತ ಸಾಕೇತವಾಸಂ-ಅಂಗೀಕೃತ ಮಾನುಷ್ಯ ವಿಲಾಸಂ ೨೪

ವರವ್ಯಾಘ್ರಭೂಧರ ಕಲ್ಪತರುಂ-ಶ್ರೀ ವರದ
ವಿಠಲಮತಿಶಯರುಚಿರಂ ೨೫

## ೬೬

ವಂದೇಹಂ ಕಮಲಾದ್ರಿನಿವಾಸಂ-ಪಲ್ಲವೀಶಂ-ಇಂದೀವರಭಾಸಂ ಪ

ಬೃಂದಾವನ ಪರಿಶೀಲನಮನುಗತ ಬೃಂದಾರಕ
ಗಣಾನಂದ ವಿಲಾಸಂ ಅ.ಪ

ಅಷ್ಟತೀರ್ಥಲಸದಷ್ಟು ಶೈಲ ಪರಿ ಶಿಷ್ಟಶಿಖರಿವಿಹಾರಂ
ಅಷ್ಟಮೂರ್ತಿಪರಮೇಷ್ಟಿಸಮರ್ಚಿತ-
ಮಷ್ಟಸಿದ್ಧಿದಾತಾರಮುದಾರಂ ೧

ಅಂಬುಜಭವಪಿತ ಮಂಬುಜ ಪತ್ರ ವಿಡಂಬಿನಯನ ಯುಗಳಂ
ಜಂಭನಿಸೂದನ ಡಂಭರಹಿತ ಘಟ ಸಂಭವನುತ
ಚರಣಾಂಬುಜಯುಗಳಂ ೨

ನಂದ ಗೋಕುಲಾನಂದ ಕಾರಣ ನಂದೋಪವರ ಕರುಣಂ
ಮಂದಹಾಸ ವಿಜಿತೇಂದು ಕಿರಣಮತಿ-
ಸುಂದರಾಂಗಮಾನಂದ ವಿತರಣಂ ೩

ಕಲಮಧುರಸ್ವನ ಚಲಿತಹೃದಯ ಗೋಕುಲ
ಮೋಹನ ವೇಣುನಿನಾದಂ
ಚಲುವಲಯ ಕ್ವಣ ವಿಲಸಿತಪಲ್ಲವ
ಲಲನಾಜನಸಂಮಿಳಿತವಿನೋದಂ ೪

ಧರಣೀಭರ ಪರಿಹರಣೋಚಿತವರ ಕರುಣಾಯತನಿಜವೇಷಂ
ಹರಿಣಾರಿಮಹೀಧರಣಾಲಯ ಶ್ರೀ ವರದ
ವಿಠಲಾ ನತಪದ ಶರಣ ಸುಪೋಷಂ ೫

೬೭

ವಂದೇಹಂ ವ್ಯಾಘ್ರಾದ್ರಿ-ನಿವಾಸಂ ವೆಂಕಟೇಶಂ
ನಿರ್ಮಲ ವಿಧುಹಾಸಂ ಪ

ವೃಂದಾರಕಗಣ ವಂದಿತ ಪದ ಮರವಿಂದನಯನ
ಮಾನಂದ ವಿಲಾಸಂ ಅ.ಪ.

ಶ್ರೀ ವೇದಪುಷ್ಕರಣೀ ತಟ ಶ್ರೀ ಕರೋದ್ಯಾನ ವಿಹಾರಂ
ಪಾವನ ವೃದ್ಧಿ ವಿಮಾನಾಂತರ ಪದ್ಮಾಸನ ಕೃತ ನಿಜಪರಿಚಾರಂ ೧

ಸಕಲ ಲೋಕ ಸಂರಕ್ಷಣ ಶೀಲನ
ಸಂಪದಮಾಶ್ರಿತ ಸುರಭೂಜಂ
ಅಕುಟಿಲ ಭಕ್ತಿಮಾಂಡವ್ಯಮುನೀಂದ್ರ ಆಕಲಿತ
ನಿಜ ಸಂಸ್ತುತಿ ಭಾಜಂ ೨

ಸಾರಸಭವ ಸಂಕ್ರಂದನಮುಖ ತ್ರಿದಶಾಧಿಪಜನ ಪರಿವಾರಂ
ವಾರಜನಿಲಯಾ ವಾಸಮಕುರಿಂತ
ವರದ ವಿಠಲ ಮುಕ್ತಿ ಸುಗುಣಮುದಾರಂ ೩

೬೮

ವೆಂಕಟಾಚಲವಾಸ-ಪಂಕಜಪ್ರಿಯ ಭಾಸ
ಶಂಕರಾರ್ಚಿತ ಚರಣ ಪಂಕಜಾಸನ ಪಿತ
ಪಂಕಜಲೋಚನ-ಕಿಂಕರ ಜನ ಶರಣ ಪ

ಪರಮಾತ್ಮ ನಿನ್ನ ಶ್ರೀಪದಸೇವಕನಾಗಿ ಪರರನುಸರಿಸುವನೆ
ಸಿರಿ ರಮಣನೆ ನಿನ್ನ ಕರುಣೆಯುಳ್ಳವ ಪರ ಸಿರಿಯ ಬಯಸುವನೆ ೧

ಧರಣೀಯನಾಳುವ ಧೊರೆಯ ಕುಮಾರನು
ತಿರುಕೆಯಬೇಡುವನೆ
ಸುರತರುಪಿನತಂಪು ನೆರಳೊಳು ಕುಳಿತುತಾ ಗರಿಕೆಯನರಸುವನೆ ೨

ಸಾರ ನಿಗಮ ವಿಚಾರವುಳ್ಳವ ನಿಸ್ಸಾರದಿ ಬೆರೆಯುವನೆ
ವಾರಿಧಿಲಂಘಿಪ ಧೀರನು ಕೊಳಚೆಯ ನೀರಿಗೆ ಜರಿಯುವನೆ ೩

ಕ್ಷೀರಾಬ್ಧಿಮಥಿಸಿದ ಶೂರನಿನ್ನವನಿಗೆ ನೀರುಮಜ್ಜಿಗೆ ಗಣನೆ
ನಾರಸಿಂಹನ ಪದ ಸಾರಿದವನು ಮದವಾರಣಕ್ಕಂಜುವನೆ ೪

ಗರುಡಗಮನ ನಿನ್ನ ಶರಣನಾದವನಿಗೆ ತರಳನ ಹಾವಳಿಯೆ
ನರಕಾಂತಕ ನಿನ್ನ ಸ್ಮರಿಸುವನರಗೆ ದುರಿತಂಗಳಟ್ಟುಳಿಯೆ ೫

ಹೊಳೆಯೊಳು ನೆನೆಯದ ಬಲುಗಟ್ಟಿಕಲ್ಲುತಾಮಳೆ
ಯೊಳುನೆನೆಯುವುದೆ
ಇಳೆಯೊಳು ಪುಲಿಗಿರಿ ನಿಳಯನ ದಾಸರ
ಬಲುಹುಕುಂದಕವಹುದೆ ೬

ಇಷ್ಟದಿ ಮನೆಯೊಳು ಮೃಷ್ಟಾನ್ನವುಂಡವ ಪಿಷ್ಟವ ಬಯಸುವನೆ
ಸೃಷ್ಟೀಶನಿನ್ನೊಳಗಿಟ್ಟು ದುರ್ದೈವದ ದೃಷ್ಟಿಯನರಸುವನೆ ೭

ನಿಗಮಗೋಚರಕೇಳು ಜಗವ ತೂಗುವ
ನಿಗೆಮಗುವತಿ ಘನವಹುದೆ
ಜಗದಘಹರಣಯನ್ನ ಘವನೀಗಲು ನಿನ್ನ ಬಗೆಗೆ
ದುರ್ಘಟವಹುದೆ ೮

ಪರಮಾತ್ಮ ಪರಿಪೂರ್ಣ ಪರವಸ್ತು ನೀನೆಂದು
ಮೊರೆಹೊಕ್ಕೆ ಕಾಯೊ ಯನ್ನ
ವರಸುಗಣಾಕರ ವರದವಿಠಲ ಪುಲಿಗಿರಿ ದೊರೆ ಸುಪ್ರಸನ್ನಾ ೯

೬೯

ಶೇಷಾದ್ರಿಯನು ನೋಡಿರೊ–ಸೇವಕ ಪರಿ–
ತೋಷಾದ್ರಿಯಿದು ಕಾಣಿರೋ ಪ

ಶೇಷಾದ್ರಿಯನು ನೋಡಿ–ದೋಷಾದ್ರಿಹುಡಿಮಾಡಿ
ಶೇಷಾದ್ರೀಶನ ಪರಿತೋಷದಿಂ ಪಾಡಿ ಅ.ಪ.

ಚಿನ್ನದ ಗಿರಿಯಂದದಿ ರಂಜಿಸುವುದು ಬಣ್ಣದೊಳತಿದೂರದಿ
ಸಣ್ಣದಾದರು ಗಿರಿ ರನ್ನವ ಪೊಲುವ–
ದರ್ಣವಶಯನನ ಕಣ್ಣಿಲಿ ಕಾಣಿಪ ೧

ಬಗೆಬಗೆ ವೃಕ್ಷಗಳು–ಬನಂಗಳು–ಬಗೆಬಗೆ ಪಕ್ಷಿಗಳು
ಬಗೆಬಗೆಮೃಗಗಳು ಸೊಗಸಿನೊಳಿರೆಬಹು
ಬಗೆಬಗೆ ಧಾತುಗಳಿಗೆ ನೆಲೆಯಾಗಿಹ ೨

ಯುಗಗಳ ಸಂಖ್ಯೆಯೊಳು–ನಾಮಂಗಳು–
ಯುಗಳದ್ವಯಮೆನಲು
ಯುಗಮೊದಲೊಳಗೆ ಪನ್ನಗಗಿರಿಯೆನೆ ತ್ರೇತಾ ಯುಗದಲ್ಲಿ
ಹೇಮದ ನಗವೆಂಬ ಪೆಸರಿನ ೩

ದ್ವಾಪರಯುಗದೊಳಗೆ–ವೆಂಕಟನಾಮ– ವೀಪರ್ವತಕ್ಕೊದಗೆ
ಶ್ರೀ ಪುಲಿಗಿರಿಯೆಂಬ ರೂಪವೀಯುಗದೊಳು
ಶ್ರೀಪತಿಯಿತ್ತನಿರೂಪದೊಳೊಪ್ಪುವ ೪

ದೂರದಿ ಶೋಭಿಸುವ ದುರ್ಜನರಿಗೆ-ದೂರನಮಂದಿರವ
ಚಾರು ವಿಮಾನ ಪ್ರಾಕಾರವ ತೋರಿಪ ವಾರಿಜಾಸನ ಪಿತ
ವರದ ವಿಠಲ ನಿಹ ೫

## ೭೦

ಶೌರಿ ನಂದನ ಪರಿವಾರಟಂದನ-ಸರಿಯಾರೋ ಹರಿನಿನಗೆ ಪ

ನಿನಗೆ ಸರಿಯಾರೋ ಶ್ರೀಧರನೆ ಅ.ಪ.

ನೋಟ ಮಾತ್ರದಿ ಜಗತ್ ಕೋಟಿ ನಿರ್ಮಿಸಿ ಪರಿ
ಪಾಟಿಯಿಲ್ಲದ ಸೂತ್ರ ನಾಟಕಧಾರಿ ॥ಸರಿ॥ ೧

ಬಗೆಬಗೆ ರತಿಯಲಿ ಜವನು ಮೋಹಿಪ
ನಿಗಮಾಂತ ಗೋಚರ ನಗಧರ ಹರಿ-ಸರಿ ಯಾರೋ ೨

ಸುರವರ ಪೂಜೆಯ-ನರಕೆ ಮಾಡದೆ ಬಂದ
ಶಿರಿಯ ಮೋಹಿಸುತಿರ್ಪ ವರದ ವಿಠಲ ॥ಸರಿ॥ ೩

## ೭೧

ಶ್ರೀ ವ್ಯಾಘ್ರಗಿರಿವಾಸ-ಶ್ರೀ ಶ್ರೀನಿವಾಸ
ದಿವ್ಯ ಸೂರಿ ಸಮಾಜ ಸೇವ್ಯ ಪಾದಾಬ್ಜ ಪ

ಕಮಲಸಂಭವ ಜನಕ ಕಮಲಾಪ್ತಕುಲತಿಲಕ
ಕಮಲ ಸನ್ನಿಭಚರಣ ಕಲುಷಗಣ ಹರಣ
ಕಮನೀಯ ಗುಣಹಾರ-ಕಲ್ಯಾಣಗುಣ ಪೂರ
ಕಮಲಾ ಮನೋಹರ ಕಲಿತಶೃಂಗಾರ ೧

ಲೋಕ ಮೋಹನ ರೂಪ ಲೋಕರಕ್ಷಣ ಚಾಪ
ಶೋಕಮೋಹವಿದೂರ ಸುಕೃತಿಪರಿವಾರ
ನಾಕನಿಳಯ ಸಮಾಜ ನಮಿತ ಪಾದಾಂಭೋಜ
ಪಾಕರಿಪು ಮಣಿನೀಲ ಪದ್ಮಾನುಕೂಲ ೨

ಮಾಂಡವ್ಯ ಮುನಿಸೇವ್ಯ ಮಾನಸಾಂಬುಜ ಭವ್ಯ
ಪಾಂಡುಸುತ ಪರಿಪಾಲ ಪಾವನ ಸುಶೀಲ
ಭಾಂಡಜಾರ್ತಿಚ್ಛೇದ ಭಾಗವತ ಸನ್ಮೋದ
ಗಾಂಡೀವಿ ಸುಶ್ಯಾಲ-ಗಾನರಸಲೋಲ ೩

ತವಚರಣ ಪಂಕಜಂ-ತೃಪ್ತಜನ ಸುರಕುಜಂ
ಭವಜಲಧಿತಾರಣಂ ಭವತುಮಮ ಶರಣಂ
ತವನಾಮ ಕೀರ್ತನಂ ತಾಪಪರಿಮೋಚನಂ
ಶ್ರವಣಯೋರ್ದೇಹಿಮಮ-ಶಮಿತಾಘಮಹಿಮಾ ೪

ಸಕಲ ಲೋಕ ಶರಣ್ಯ ಸರ್ವದೇವ ವರೇಣ್ಯಾ
ನಿಖಿಲ ಭೂತವಾಸ-ನಿರ್ಮಲಸುವೇಷ
ಅಕಲಂಕ ಚರಿತ-ನಿತ್ಯಾನಂದ ಗುಣ ಭರಿತ
ಶಿಖರಿಷವಿಹರಣ ಕುಶಲ-ಶ್ರೀವರದವಿಠಲ ೫

## ೭೨

ಶ್ರೀನಿಳಯನನು ಕೊಂಡಾಡು-ಮಾನಸ
ಶುಭಸಂಧಾನನ ನೋಡು ಪ

ಸಾರವಿಲ್ಲದಿಹ ಸಂಸಾರದಿ ಬಲು ಘೋರ
ತಾಪಗಳು ತೋರಿದಾಗ
ಭೂರಿ ಸೌಖ್ಯಗಳ ಬೀರುತಿರ್ಪ ಕಾರುಣೀಕನ್ನು ವಿಚಾರ ಮಾಡು ೧

ಸೋಹಮೆಂಬ ಘನ ಮೋಹಾಂಧತೆಯಲ್ಲಿ
ದೇಹಿಗಳ್ಗೆ ಕಡು ದ್ರೋಹವ ಗೈವ
ಬಾಹಿರಂಗೆ ಯಮ ಬಾಧೆಯಲ್ಲಿ ತ್ರಾಹಿ
ತ್ರಾಹಿಯನೆ ತಾಳ್ವರೇನು ೨

ಸಾಪರಾಧಿಗಳ ಕಾಪಾಡುವ ಧೊರೆ ಶ್ರೀಪುಲಿ
ಬೆಟ್ಟದ ಭೂಪನೇಸರಿ
ಆಪದ್ರಕ್ಷಕನ ಶ್ರೀಪಾದಗಳನು ಜ್ಞಾಪಕಗೊಂಡೆನು ತಾಪಗೂಡಿ ೩

## ೭೩

ಶ್ರೀಕರ ಮಾಗಿಹ ಗೋಕುಲದಲಿಕರುಣಾಕರ
ಕೃಷ್ಣನು ನೆಲಸಿರಲು
ನಾಕದ ಸಿರಿಯ ನಿರಾಕರಿಸುವ ಸಿರಿತಾಹರ್ಷದೊಳು ೧

ರಾವಣನನುಜೆಯು ರಾಘವ ದೇವನ ಲಾವಣ್ಯಕೆ
ಮೋಹಿಸಿ ಮನದಿ
ಭಾವಜನಸ್ತ್ರದ ಬಾಧೆಯಿಂದ ಪತಿ ಭಾವದಿ ನೋಡುತ ಭರದಿ ೨

ಕಾಮಿಸಿ ಕಾಡಲು ಕಾಕುತ್ಸ್ಥನು ಬಲರಾಮ ಸಹಜನವತಾರದಲಿ
ಕಾಮಿತವಹದೆನೆ ಕಾಮಿನಿ ರಾಧಾ ನಾಮದಿ ಜನಿಸಿರೆ ಗೋಕುಲದಿ ೩

ಒಂದಾನೊಂದಿನ ನಂದಾದಿಗಳಾ ಸಂದಾನ್ವಿತಮತಿ ವೃತ್ತಿಯಲಿ
ಒಂದಾಗಿ ಧರಾ ವೃಂದಾರಕರನುವಿಂದಾರಾಧಿಪ ಭಕ್ತಿಯಲಿ ೪

ಬಂದರು ವರಕಾಳಿಂದಿಯ ತೀರದಿ ನಂದನದಂತಿಹ ವನದೆಡೆಗೆ
ಬಂಧುಗಳೊಂದಿಗೆ ಭಂಡಿಯನೇರಿ
ಮುಕುಂದನ ಧ್ಯಾನಿಸುತಡಿಗಡಿಗೆ ೫

ಅಲ್ಲಿಗೆ ಭೂಸುರರೆಲ್ಲ ಬರಲು ಮಿತಿಯಿಲ್ಲದೆ
ಗೋಧನ ದಾನದಲ್ಲಿ
ಬಲ್ಲಿದ ಭೋಜನದಲ್ಲಿ ದಣಿಸಿ ಸುಖದಲ್ಲಿರುತಿರಲಾಸಮಯದಲಿ ೬

ಅಸ್ತಮಹೀಧರ ಮಸ್ತಕವನು ಸುಜನ ಸ್ತುತದಿನಕರ ನೈದಿರಲು
ನಿಸ್ತುಲತಮದಿ ಸಮಸ್ತರದೃಷ್ಟಿಗಳಸ್ತಗೊಳಿಸೆ ಜನಭಯಗೊಳಲು ೭

ನಂದನು ತನ್ನಯ ನಂದನನಂಜುವನೆಂದು
ರಾಧೆಯತಾನೋಡಿ
ಕಂದನ ನೀನೇ ಮಂದಿರಕೈದಿಸು ಎಂದರೆ ಬಂದಳು ನಗೆಗೂಡಿ ೮

ಕಂದ ಬಾರೋ ಗೋವಿಂದ ಬಾ ಯದುನಂದನ
ಬಾ ಕಮಲಾಸನನ
ತಂದೆ ಬಾರೋನಿಜಮಂದಿರದೊಳಗಾ ನಂದವ
ತೊರುವೆ ಶಶಿವದನಾ ೯

ಆಡಿಸುವೆನು ನೀನಾಡುವಾಟಗಳ ನೋಡಿಸುವೆನು
ನೀನೊಲಿದುದನು
ಬೇಡಿದುದೆಲ್ಲವ ನೀಡುವೆ ಸಂಶಯ
ಬೇಡನಿನ್ನನೆ ಕೂಡಿಹೆನು ೧೦

ರಾಧೆಯನುಡಿಗಳನಾದರಿಸುತ ಮಧುಸೂದನ
ತನ್ನಯಮನದೊಳಗೆ
ಮೋದ ಪಡಿಸಲನುವಾದನು ಭಕ್ತಾಮೋದ
ಚರಿತ್ರನು ಕಾಮಿನಿಗೆ ೧೧

ಮುತ್ತನಿತ್ತು ಬಲುಮುದ್ದಿಸಿ ಬಾಲಕನೆತ್ತಿಕೊಂಡು
ಬಲು ಸಡಗರದಿ
ವೃತ್ತಕುಚಗಳಿಂದೊತ್ತಿಮನೊಭವನರ್ಥಿಗೆ ಸೊಕ್ಕುವ ಕಾತರದಿ ೧೨

ವರಪುಲಿಗಿರಿದೊರೆ ವರದ ವಿಠಲನು
ಕರುಣನಾದೊಡೀಗಲೇ ಬೆರೆದು
ಸ್ಮರಶರದಾರ್ತಿಯ ಪರಿಹರಿಸುವೆನೆಂಧರುಪದಿ
ಬರುತಿರ್ದಳು ನಲಿದು ೧೩

## ೭೪

ಶ್ರೀನಿವಾಸನಂಘ್ರಿ ಕಮಲ ಧ್ಯಾನಮಾಡಿರೋ
ಅನುಮಾನ ಬೇಡಿರೋ ಪ

ಹಮ್ಮನುಳಿದು ಬೊಮ್ಮ ಪಿತನ ನೆಮ್ಮಿ ಭಜಿಸಿರೋ
ದುಷ್ಕರ್ಮತ್ಯಜಿಸಿರೋ ೧

ಹೆಣ್ಣು ಮಣ್ಣು ಹೊನ್ನು ಸ್ಥಿರವಿದೆನ್ನ ಬೇಡಿರೋ
ನಿಜವನ್ನು ನೋಡಿರೋ ೨

ಈತ ಜಗನ್ನಾಥ ಸೌಖ್ಯದಾತ ಕಾಣಿರೋ
ಪ್ರಖ್ಯಾತ ಕೇಳಿರೋ ೩

ಕಾಟಕರ್ಮ ಲೂಟಿಗೈವ ತೋಟಗಾರನಾ
ಈಸಾಟಿಗಾಣೆನಾ ೪

ಶಿಲೆಗೆ ದಿವ್ಯ ಲಲನಾ ರೂಪ ವೊಲಿದು ಕೊಟ್ಟನಾ
ಶಾಪವಳಿದು ಬಿಟ್ಟನಾ ೫

ಮಾನಿನಿಯಾ ಮಾನ ಜೋಪಾನ ಗೈದನಾ
ಸ್ವಾಧೀನನಾದನ ೬

ಪಿಡಿದ ಮುನಿಯ ಬಿಡಿಸಿ ಪುಲಿಯ
ಬಡಿದ ಧೀರನಾ ಕೈಪಿಡಿಗೆ ಬಾರನಾ ೭

ಮರ್ತ್ಯರಿವನ ಭಕ್ತಿ ಯಲ್ಲಿ ರಕ್ತಿಪಡು–
ವರು ಭಕ್ತಿ ಮುಕ್ತಿ ಪಡೆವರು ೮

ಶರಣಜನರ ಪೊರೆದ ಧೊರೆಯು
ವರದವಿಠ್ಠಲನೆ–ಶ್ರೀಧರಣೀ ಜಟಿಲನೇ ೯

## ೭೫

ಶ್ರೀನಿವಾಸನಮಲನಾಮನ ಸೊಗಸಿನಿಂದ
ಗಾನಮಾಳ್ಪ ಧೀರನಾವನೋ ಪ

ತಾಳತಂಬೂರಿಗಳನು ಮೇಳವಿಸಿ ಸರಾಗದಿಂದ ೧

ಹಿಂದೆ ಮೃದಂಗದಿಂದ ಸಂಗಡಿಸಿ ಸುಲಲಿತವಾಗಿ ೨

ಗುಂಭವಾದ್ಯವನ್ನು ಪರಮ ಸಂಭ್ರಮದಲ್ಲಿ ಬಾರಿಸುತ್ತ ೩

ಜತೆಗೆ ಸೇರಿದವರ ಕೂಡಿ ಶ್ರುತಿ ಲಯಗಳಿಂದ ಪಾಡಿ ೪

ಪರಮಪುರುಷ ವ್ಯಾಘ್ರಗಿರಿಯ ವರದ ವಿಠಲನೆಂದು ಮುದದಿ ೫

## ೭೬

ಶ್ರೀನಿವಾಸ ನಿನ್ನ ಪಾದ ಧ್ಯಾನವ ಪಾಲಿಸಿ ಎನ್ನ
ಮಾನಸಾನಂದಿಸೋ ಶತ ಭಾನುತೇಜನೇ ಪ

ಸಾನುರಾಗದಿಂದ ನಿನ್ನ ಧ್ಯಾನಿಪಜನರ ಭವಕಾನನಾದ
ಹನ ಚಿತ್ರಭಾನು ದನುಜಾರಿ ಹರಿ ಅ.ಪ

ಇಂದಿರಾರಮಣ ನಿನ್ನ ಸುಂದರ ಚರಣಕೆ ನಾಂ ವಂದನೆ
ಮಾಡುವೆನಯ್ಯ ಇಂದುವದನಾ

ಇಂದುಧರ ನುತ ಮುಚುಕುಂದವರದನೆ ಗುಣ ಬಂಧುರಾ
ಶ್ರೀ ಪುಲಿಗಿರಿ ಮಂದಿರ ಮಂದರಧರ ೧

ಇಷ್ಟು ದಿನ ನಿನ್ನ ಮನ ಮುಟ್ಟಿಭಜಿಸದೆ ಬಲು
ದುಷ್ಟಮನುಜರ ಕೂಡಿ ಭ್ರಷ್ಟನಾದೆನು
ಇಷ್ಟಫಲ ದಾಯಕ ತ್ರಿವಿಷ್ಟಪಾಧಿಪಾನುಭವ್ಯ ಅಷ್ಟಸಿದ್ಧಿಪ್ರದ
ನಿನ್ನ ಗಟ್ಟಿಯಾಗಿ ನಂಬಿದೆನು ೨

ಲೋಕಪತಿ ಪಿನಾಕಿಯನ್ನು ವೃಕನೆಂಬ ಭೀಕರಾಸುರನು
ಉರಿಹಸ್ತ ಬೇಡಲು
ಆ ಕಪಾಲಿಯಿತ್ತು ಅವಿವೇಕದಿಂದಲೋಡುತ್ತಿರೆ
ಲೋಕಮೋಹಿನಿಯ ರೂಪು ಸ್ವೀಕರಿಸಿ ಶಿವನಕಾಯ್ದೆ ೩

ಆಡಿಸೋ ನಿನ್ನವರೊಳು ಪಾಡಿಸೋ ನಿನ್ನಯ
ಕೀರ್ತಿ ನೋಡಿಸೋ ನಿನ್ನಯಮೂರ್ತಿ ಬೇಡಿಸದಿರು
ಆಡಿಸದೆ ಭವವೆಂಬ ಕಾಡಿನೊಳ್ಕಟಾಕ್ಷದಿಂದ ನೊಡಿ
ನಿನ್ನ ನಾಡಿನೊಳಗಾಡಿಸೋ ಮುರಾರಿಹರಿ ೪

ವಾಸುಕಿ ಶಯನ ಪೀತ ವಸನ ದಿವ್ಯ ಭೂಷಣ
ವಿಭೂಷಿತ ಲಲಿತ ಶುಭ ವೇಷವಿಪುಲ
ಭಾಸಮಾನ ವ್ಯಾಘ್ರಶೈಲಾವಾಸ ಶ್ರೀನಿವಾಸ ಭಕ್ತಪೋಷಣ
ದುರಿತಗಣ ಶೋಷಣ ಶ್ರೀವರದವಿಠಲ ೫

## ೭೭

ಶ್ರೀನಿವಾಸನ ಸೇವೆ ಗೈಯುವ ಜಾಣರೆಲ್ಲರು ಬನ್ನಿರೈ ಪ

ಧ್ಯಾನಲಭ್ಯನ ಕಾಣಲಿಚ್ಛಿಪ ಮಾನಿಪರ ಕರತನ್ನಿರೈ ಅ.ಪ.

ಪರಮಪದ ದೊಳಗಿರದೆ- ವೆಂಕಟಗಿರಿಯೊಳಿರ್ದನು ಪೂರ್ವದಿ
ಭರದಿ ವಿಪ್ರಗೆ ವರವನಿತ್ತೀ ಗಿರಿಗೆ ಬಂದನು ಪ್ರೇಮದಿ ೧

ದೂರವಲ್ಲ ವಿಚಾರಿಸಲು ಹರಿಣಾರಿ ಭೂಧರಮಿಲ್ಲಿಗೆ
ಚಾರುಮೂರ್ತಿಯ ಚರಣಸೇವೆಗೆ ಸಾರುವೆವು ನಾವಲ್ಲಿಗೇ ೨

ಚರಣ ಸೇವಕರನ್ನು ಮರೆಯದೆ ಪೊರೆಯು ವನು ಮೋದದಿ
ಪರಮ ಪುಲಿಗಿರಿವಾಸ ವೆಂಕಟ ವರದವಿಠಲನೆಲೋಕದಿ ೩

## ೭೮

ಶ್ರೀನಿವಾಸ ಸುಗುಣೈಕ ನಿಧೆ ಶ್ರೀಮಾನಸಹಂಸ ದಯಾಜಲಧೆ ಪ

ತೋಯಸನ್ನಿಭಕಾಯ-ಮನೋಜನಿಕಾಯ
ಮಾಪಮಧುರಾಲಾಪ
ತೋಯಜಾಕ್ಷ ಪೃಥುಳಾಯತಪಕ್ಷ
ನಿಧಾಯಹೃದಿಧ್ಯಾಯಾಮಿಹರೆ ೧

ವಿಗ್ರಹ ಮಖಿಳಶುಭಗ್ರಹಣಂ ಮದನುಗ್ರ
ಹಾರ್ಥಮದಿ ತಿಷ್ಠವಿಭೋ
ಉಗ್ರಮುಖವಿಬುಧಾಗ್ರ್ಯಪೂಜಿತ ಸಮಗ್ರ
ಸಮರ್ಚ್ಯಾಂ ಸ್ವೀಕುರುಭೋ ೨

ಪಾದ್ಯಾರ್ಘ್ಯಾಚಮನಾದ್ಯಮಖಿಳ ಜಗ-
ದಾದ್ಯಕಲ್ಪಿತಂ ಭವದರ್ಥಂ
ಹೃದ್ಯಸುರಭಿಸಂಪದ್ಯುತ ಮುತ್ತಮ ಸದ್ಯಂಬುನಿಮೇಜ್ಯ
ಸುಖೋಷ್ಣಮಿದಂ ೩

ನಿಸ್ತುಲಕಾಂಚನವಸ್ತ್ರಮಲಂಕುರು ಕಸ್ತೂರಿತಿಲಕಂ ಸುಮುಖೋ
ಕೌಸ್ತುಭರತ್ನ ಮಜಸ್ತುತಮಂಡನ ಮಸ್ತುತನೌಗುಣ ಭೂಷಣತೇ ೪

ಕುಂದಬಕುಳ ಕುರುವಿಂದ ಮಹೋತ್ಪಲ
ಮಂದಾರಕಾ ಮಾಲ್ಯಾಕಲಿತಂ
ಗದ ಬಂಧುರ ಸುಗಂದಿ ತುಳಸಿ ಕಾಬೃಂದ
ಮಲಂಕುರುಸನ್ನಿಹಿತಂ ೫

ಗಂಧರ್ವಾಮರ ವಂದಿತ ಮಲಯಾ
ಗಂಧಲೇಪನ ಮಾಕಲಯಾ
ಗಂಧವಾಹನುತ ಗಂಧೀವತೀಗುಣ ಬಂಧುರ
ಧೂಪಂ ಜಿಘ್ರಹರೇ ೬

ತಾಪತ್ರಯ ಪರಿತಾಪನಿವಾರಣಂ-
ತಾಪಸಮಾನಸದೀಪ ಹರೇ
ಸೋಪಬಾರ ಘೃತದೀಪಮತೀಂದ್ರಿಯ
ರೂಪಾಲೋಕಯ ಶ್ರೀನೃಹರೇ ೭

ಮಂತ್ರರೂಪ ನ್ಮಂತ್ರವಿದಾಂವರ
ಮಂತ್ರತಂತ್ರ ಯಂತ್ರಣಮೂರ್ತೇ
ಮಂತ್ರಪೂತಮುಖ ಯಾತ್ರಾಧಾರ
ಸುಮಂತ್ರಪುಷ್ಪಂ ಸ್ವೀಕುರುಹೇ ೮

ಛತ್ರಮಿದಂ ಭುವನತ್ರಯ ನಾಥ
ವಿಚಿತ್ರದಂತ ಚಾಮರಯುಗಳಂ
ಶ್ರೋತ್ರಮಿತ್ರ ತೋರ್‍ಯತ್ರಿಕಮಾಕಲಯಾತ್ರ
ಭೋಗಾಮಧಿರಾಜ ಕಳಂ ೯

ಮಧುಪರ್ಕಾರ್ಹಣ ಮಧರೀಕೃತ ಮಧುಮಧುರಿಮ
ಪಾಯಸಮತಿಹೃದ್ಯಂ
ಅಧಿಕ ಪಯೋಘೃತದಧಿಸೂಪಾನ್ವಿತ
ಮಧುನಾಸ್ವೀಕುರು ನೈವೇದ್ಯಂ ೧೦

ಬಿಂಭಾಧರ ಮಿಧು ಬಿಂಬವದನ
ಶಿಶಿರಾಂಬುಪಿಬಾಮಲ ಘನಸಾರಂ
ತಾಂಬೂಲಂ ಜಗದಂಬಾಕರ ಕಲಿತಂ
ಬಹುಮನ್ವಸ ಕರ್ಪೂರಂ ೧೧

ತಾರಾಧಿಪಕುಮುದಾರಿ ನಿಭಾಲಂಕಾರ ನಿಭೃತ
ಪರಿವಾರ ವಿಭೋ
ನೀರಾಜನಮತಿ ತಾರಾಯಿತ
ಕರ್ಪೂರಾರ್ತಿಕಮಂಗೀಕುರುಭೋ ೧೨

ಕುಕ್ಷಿಭುವನ ಸಂರಕ್ಷಿತ ಸೇವಕ ಪಕ್ಷಪ್ರದ ಕ್ಷಿಣಮನುವಾರಂ
ಪಕ್ಷಿಗಮನನಿಜ ವಕ್ಷೋಧೃತ ಶುಭಲಕ್ಷಕರೋಮ ನಮಸ್ಕಾರಂ ೧೩

ಸಾಗರತನಯಾಯಾಗವಿಹಿತ ಭೂಭಾಗದೇಯ ನೀಳಾ ಸಹಿತಂ
ಭೋಗಿಶಯನ ಮನುರಾಗ ಪರಿಷ್ಕೃತ ಮಾಗಮಗೋಚರ
ಕುರುಲಸಿತಂ ೧೪

ಆರಾಧನಮ ಪಜಾಯತಮುಪಚಾರಮಿಷೇಣ ಮಯಾ ಚರಿತಂ
ನಾರಾಯಣ ಚರಣಾರಾಧನಮಿತಿ ಕಾರುಣ್ಯೇನ ಕ್ಷಮಸ್ವೇದಂ ೧೫

ಚರಣಾಗತ ಜನಭರಣಾಲಂಕೃತ ಹರಿಣಾರ್ಯದ್ರಿ ನಿಕೇತನ ತೇ
ಚರಣಾರಾಧನ ಕರಣಾಂಚಿತಮಿತಿ ವರದ ವಿಠಲಗೀತಂ ತನುತೇ ೧೬

## ೭೯

ಶ್ರೀನಿವಾಸ ಮುನಿಮಾನಸ ಹಂಸ ಮಹಾನು ಭಾವ ದೇವ ಪ

ಗಾನಲೊಲ ಶರಣಾನು ಕೂಲ ಖಗ ಯಾನ ವಾಸುದೇವ ಅ.ಪ.

ಸೃಷ್ಟಿಕರ್ತ ಸಂತುಷ್ಟಹೃದಯ ಪರಮೇಷ್ಠಿಜನ್ಮಮಾಲಾ
ಅಷ್ಟಭೂತಿದರಕಷ್ಟಹರಣ ವಿಬುಧೇಷ್ಟ ದಿವ್ಯಲೀಲಾ ೧

ದೇವ ದೇವ ಭೂದೇವ ವಂದ್ಯ ವಸುದೇವ ಜಲಧಿಸೋಮ
ದೇವ ವೈರಿ ವನದಾವ ಸುಂದರೀ ಭಾವ ಜನಿತ ಕಾಮ ೨

ರಾಮ ರಾಮ ಕರುಣ ಮಹೋದಧೆ ಶ್ರೀ ಮನೋಭಿರಾಮ
ರಾಮಣೀಯ ಸುಗುಣ ಧಾಮ ಪುಣ್ಯತಮನಾಮ ಪೂರ್ಣಕಾಮ ೩

ಕಿಂಕರ ಜನಗತ ಸಂಕಟಹರ ಧೃತ ಶಂಖಚಕ್ರ ಪದ್ಮ
ಪಂಕಜಲೋಚನ ಪಂಕವಿಮೋಚನ ಪಂಕಜಹಿತ ಸದ್ಮಾ ೪

ದಿವ್ಯರೂಪಸುರಸೇವ್ಯ ಚರಣ ಮುನಿ ಭಾವ್ಯಮಾನಚರಿತ
ಅವ್ಯಯಾತ್ಮಬಹು ಭವ್ಯ ಸುಗುಣ ಮಾಂಡವ್ಯ ಪುಣ್ಯಭರಿತ ೫

ಪಾಹಿಮಾಮನಘದೇಹಿ ಭಕ್ತಿಮಪಿಮೇ ಹಿತೋಸಿ ನಿತ್ಯಂ
ಕಾಹಿಮೇಗತಿರ್ಮಾಹಿಸತ್ಯ ತಾಂಬ್ರೂಹಿ ದೇವ ಸತ್ಯಂ ೬

ಚರಣಯುಗಳ ಮಿಹ ಶರಣಮೇಹಿ ಭವ
ತರಣಿ ಧಿಷಣಯಾಹಂ
ಕರುಣಯಾವ ಶ್ರೀ ವರದ ವಿಠಲ ಸುಖಕರಣ ವಿಗತಮೋಹಂ ೭

## ೮೦

ಶ್ರೀನಿವಾಸ–ಶ್ರೀಮನೋಲ್ಲಾಸ–ಶ್ರೀನಿವಾಸ ಪ

ಶ್ರೀನಿವಾಸ ಶುಭಮಾಮವ ಗಾನಲೋಲಿತ ಸನ್ಮಾನಿತಲೀಲಾ ಅ.ಪ.

ದೀಪಿತ ಭವದಾವ–ದೇವದೇವ
ದೇವ ದೇವ ವಸುದೇವತನಯ ಭೂದೇವ
ನಿವಹಸಂಭಾವಿತಭಾವ ೧

ರಾಮ ರಾಮರಘುವಂಶಲಲಾಮ ರಾಮ ರಾಮ
ರಮ್ಯ ಗುಣಧಾಮ ಮುನಿಜನ ಪ್ರೇಮ
ದನುಜ ಸಂಗ್ರಾಮ ಭೀಮ ೨

ಕಂಜನಾಭಕಲಾಂಬುಧಾಭ ಕಂಜನಾಭ ರಿಪು
ಭಂಜನಾತ್ತ ವರ ಕಂಜ ಚಕ್ರವಿಧು ಮಂಜುಳ ವಕ್ತ್ರ ೩

ಸುಂದರಾಂಗ ಸುಕೃತಾಂತರಂಗ ಸುರಸುಂದರೀ ನಿಚಯ
ನಂದಗೋಕುಲಾನಂದ ಮುಕುಂದ ೪

ಭವ್ಯರೂಪ ಭಕ್ತಾಲಯ ದೀಪ
ಭವ್ಯರೂಪಧೃತ ದಿವ್ಯಚಾಪಸುರ ಭವ್ಯಮಹಿಮ
ಮಾಂಡವ್ಯ ಸುಸೇವ್ಯ ೫

ವ್ಯಾಘ್ರಶೈಲಾವಾಸ ಸುಶೀಲಾ ಶೈಲ ಶಿಖರಾಗ್ರಲೋಲ
ದೇವಾಗ್ರಗಣ್ಯ ಭಕ್ತಾಗ್ರ್ಯಶರಣ್ಯ ೬

ದುರಿತದೂರಾ–ದುಃಖಾಭ್ರಸಮೀರಾ
ದುರಿತದೂರ ಫಣಿಗಿರಿವಿಹಾರ ಶ್ರೀವರದ ವಿಠಲಾ ೭

## ೮೧

ಶ್ರೀನಿವಾಸ ಪಾಹಿಮಾಂ–ಶ್ರೀಯಮಯನ್ಮನೋರಮಾಂ ಪ

ದೀನಲೋಲ ಕಾಮನ–ಧೀರಮುನಿವಿಭಾವನ ೧

ಪೂರ್ಣಚಂದ್ರಾನನ–ಪುಣ್ಯವೃಕ್ಷಕಾನನ ೨

ಸೇವಕಾನಂದನ–ದೇವಕೀನಂದನ ೩

ಶಂಖಚಕ್ರ ರಂಜನ–ಕಿಂಕರಾರ್ತಿಭಂಜನ ೪

ದೂರಕೋಟಿ ಸುಮದರ-ಶ್ರೀರಮಾಮನೋಹರ ೫

ದೂರಿತಾಘ ಸಂಕುಲ-ದುಷ್ಟಕುಲಾನಲ ೬

ಪುಂಡರೀಕ ಲೋಚನ-ಚಂಡ ಪಾಪಮೋಚನ ೭

ಭವ ಭಯೋತ್ತಾರಣ-ಭವ್ಯ ಸುಗುಣ ಪೂರಣ ೮

ವ್ಯಾಘ್ರಾದ್ರಿ ನಾಯಕ-ವ್ಯಕ್ತ ಸೌಖ್ಯದಾಯಕ ೯

ತವಪದಾಂಬೋರುಹಂ ಭವತು ಹೃತ್ಸುಖಾವಹಂ ೧೦

ವರದ ವಿಠಲ ಶ್ರೀಧರ-ಶರಣ ಜನ ದಯಾಕರ ೧೧

## ೮೨

ಶ್ರೀನಿವಾಸ ಶ್ರೀ ವಾಸ ಪ

ಭಜಿಸಿದೆ ನಿನ್ನನು, ತ್ಯಜಿಸಿದಿರೆನ್ನನು
ಭಜಕಾಮರತರು ಕುಜನ ವಿದೂರ ಅ.ಪ.

ತಂದೆ ತಾಯಿನಿಜ ಬಂಧುಸಹೋದರ
ನಂದನಾಪ್ತನೀನೆಂದು ನಂಬಿದೆ ೧

ನಿನ್ನ ಮರೆತು ಬಹು ಜನ್ಮ ಜನ್ಮದೊಳು
ಖಿನ್ನನಾಗಿ ನಿಜವನ್ನೆ ಕಾಣದೆ ೨

ಕರುಣದಿಂದ ನಿಜ ಚರಣಸೇವಕರ
ಪೊರೆವ ವ್ಯಾಘ್ರಗಿರಿ ವರದವಿಠಲ ೩

## ೮೩




ಶ್ರೀನಿವಾಸ ಪಾಹಿಮಾಂ ಸದಾ–ಶ್ರಿತಜನಮೋದ
ಮೌನಿಜನಜಾತಕಾಂಬೋದ ಪ

ಸಾನುರಾಗ ಯುಗಮುನಿ–ಮಾನಿತಾವರಾರವಿಂದ
ಭಾನುಕೋಟಿ ತೇಜ
ಸಾಮಗಾನ ಲೋಲ ಶ್ರೀಮುಕುಂದ ಅ.ಪ.

ವಾರಿಜಾಸನಾರ್ಚಿತ ಪ್ರಭೋ–ವಂದಾರುಜನ
ಪಾರಿಜಾತ ಧೃತಕೌಸ್ತುಭ
ಶಾರದೇಂದೀವರನೇತ್ರ ಶ್ಯಾಮಳನೀರದ ಗಾತ್ರ
ಸಾರ ಸನ್ಮಣಿ ಕೇಯೂರ ಹಾರ–ಭೂಷಿಸುಪವಿತ್ರ ೧

ಸರ್ವಲೊಕಪಾಲಕೇಶ್ವರ–ಸೇವಿತಸುಪರ್ವಗಣಸದ್ಗುಣಾಕರ
ಶರ್ವ ಸುರಪತಿಮುಖ್ಯ ಸರ್ವದೇವವರವರ್ಯ
ಗರ್ವಿತದೈತ್ಯಾಂಧಃಸೂರ್ಯ–ಪರ್ವತಾಧಿರಾಜಧೈರ್ಯ ೨

ಸೃಷ್ಟಿರಕ್ಷಣಾಂತಕಾರಕ–ಸರ್ವಾತ್ಮಕ–ಶಿಷ್ಟದೇವ ದ್ವಿಜರಕ್ಷಕ
ಅಷ್ಟಸಿದ್ಧಿಪ್ರದಾ ಸರ್ವೋತ್ಕೃಷ್ಟ ಕಷ್ಟನಿವಾರಣ
ಅಷ್ಟಮೂರ್ತಿ ಪ್ರಿಯ ಸರ್ವಾಭೀಷ್ಟದ ಗೋಪಾಲಕೃಷ್ಣ ೩

ಶ್ರೀಕರ ಶೃಂಗಾರ ಶೇಖರ–ಶ್ರೀಕರಗೃಹ–ಶ್ರೀಕರ
ಧಾರಿತ ...
ಪಾಕವೈರಿಮಣಿನೀಲ ಪಾವನ ಸುಗುಣ ಶೀಲ
ಶೋಕಮೋಹಸುವಿವೇಕ ನಿತ್ಯೋದಾರ ಶೂರ ೪

ಮಾರಜನಕ ಮಂಗಳಾಕಾರ ಮಾರಶತಕೋಟಿ ಸುಂದರ
ಸಾರವಸ್ತುಚಯಪರಿ ಪೂರವ್ಯಾಘ್ರಾದ್ರಿ ವಿಹಾರ
ಧೀರ ವರದ ವಿಠಲ ಸುರಾಸುರಾರ್ಚಿತಾಂಘ್ರಿಕಮಲ ೫

## ೮೪

ಶ್ರೀನಿವಾಸ ತವಚರಣ ಸರೊರುಹ–ಮಾನತೋಸ್ಮಿ ಸತತಂ
ಸಾನುರಾಗ ಮನಸಾವಚನಾ ಶಿರಸಾನುಕೂಲ
ಫಲದಂ ಶುಭಚರಿತಂ ಪ

ವಾಸವ ಸನ್ನುತ ವಾಸುಕಿ ಶಯನ
ಶ್ರೀಶವಾಸ ಹಿರಣ್ಮಯವಾಸ ಸಮಸ್ತ
ವಾಸತರುಣಿಶತ ಬಾಸಸುಮನೋಲ್ಲಾಸ ವಿಜಿತ ರೊಷ
ವಾಸರೇಶ ಶತ ಭಾಸುರ ಭೂಷಣ
ಭೂಷಿತಾಂಗವಿಶೇಷಕರುಣಮೃದುಭಾಷಣ
ಸಜ್ಜನ ಪೋಷಣ ನಿರ್ಜಿತ ದೂಷಣ
ಭವಜಲಶೋಷಣ ಪೂಷಣ ೧

ಪುಂಡರೀಕಾಸನ ಖಂಡಪರಶು ಆಖಂಡಲಮುಖ
ಸುರಮಂಡಲಸೇವಿತ
ಚಂಡನಿಶಾಚರ ಮಂಡಲ ಖಂಡನ ಪಂಡಿತರಣ ಶೌಂಡ
ಪುಂಡರೀಕ ನಯನಾಂಡಜವಾಹನ
ಖಂಡಿತಕೇಶ ಕೋದಂಡ ಕೃತಾರ್ಚನ
ಪುಂಡರೀಕಗಿರಿ ಮಂಡನ ಹಿಮಕರಮಂಡಲ
ಸನ್ನಿಭಕುಂಡಲಾಭರಣ ೨

ವಾರಿದ ನೀಲ ಶರೀರ ಧರಾರಧೀರ
ಸುಮಂದರಧಾರಣ ಚತುರುತಲಾಗ್ರವಿ
ದಾರಿತ ಶೂರ ಹಿರಣ್ಯಕ ವೀರನರ
ಮೃಗೇಂದ್ರಾ ವಾರಿಜನಿಲಯಾವರ
ಕರುಣಾಕರ ಮಾರಜನಕ ಸುರವಾರವಂದ್ಯಪದ ಸಾರಸುಗುಣ
ಪರಿ ಜಲದಿ ಗಂಭೀರ ವ್ಯಾಘ್ರಗಿರಿವರದ ವಿಠಲಹರಿ ೩

## ೮೫

ಶ್ರೀನಿವಾಸ ಪದ ಧ್ಯಾನಕರೋರೆ ಸಾನುರಾಗ
ಯತಮಾನಸ ಮೇರೆ ಪ

ಮದಪರಿಪೂರಿತ ಹೃದಯ ಸುನೋರೆ ಸದಯ
ಹೃದಯಪರಿಪದ ಮಿಳನಾರೆ ೧

ಕಾಮಕ್ರೊಧ ವುಪರಾಮ ಕರೋರೆ ರಾಮನಾಮ
ಜಪಕಾಮುಕರೋರೆ ೨

ದೇಹಗೇಹಧನ ಮೋಹನ ಲೇರೆ ಶ್ರೀಹರಿ ಸ್ಮರಣ ಕಾಂಹಿ ಚಲೇರೆ ೩

ಪುತ್ರ ಮಿತ್ರ ಬಹು ಶತ್ರುಕುಮಾರವೃತ್ರ ವೈರೀಸುತ ಮಿತ್ರನಗಾರೆ ೪

ಭಂಗ ಕರಣ ಜನಸಂಗ ನಕೊರೆ ಮಂಗಳಾಂಗ
ನರಸಿಂಹ ಭಜೊರೆ ೫

ಸೂಕ್ಷ್ಮಬುದ್ಧಿ ನಿರಪೇಕ್ಷಭಲಾರೆ ಮೋಕ್ಷದಾತ
ಕಮಲಾಕ್ಷಕುಲಾರೆ ೬

ದಾಸಲೋಕ ಸಹವಾಸ ಕರೊರೆ ವಾಸುದೇವ
ನಿಜ ದಾಸಕು ಹೊರೆ ೭

ಶ್ರೀ ಪುಲಿಗಿರಿವರ ಭೂಪಮುರಾರೆ-ಶ್ರೀಪತಿಘನ
ಚಿದ್ರೂಪಕ ಹೋರೆ ೮

ಪರಮ ಪುರುಷ ನರಹರಿ ಕರುಣೀರೆ-
ವರದವಿಠಲ ಕರಿವರ ಧಣೀರೆ ೯

## ೮೬

ಶ್ರೀ ಶ್ರೀನಿವಾಸ-ಶ್ರೀ ಭೂವಿಲಾಸ-ಶ್ರೀತಜನಪೋಷ
-ಪಾಹಿಸುವೇಷ ಪ

ಅಚ್ಯುತಮಾನ ಮದಚ್ಯುತವಿ ಪಶ್ಚಿನ್ಮನೋರಥ ನಿಶ್ಚಿತ ಪಾಹಿ ೧

ಅಂತರಹಿತ ನಿತ್ಯಾನಂತ ಮಹಿಮ
ದುರಂತವಿಕ್ರಮ ದನುಜಾಂತಕ ಪಾಹಿ ೨

ಗೋವಿಂದ ನತಸುಮ ನೋವೃಂದ ದಳಿತ ತಮೋವೃಂದ
ಪೋಷಿತ ಗೋಬೃಂದ ಪಾಹಿ ೩

ಕೇಶವ ಸಕಲ ಲೋಕೇಶ ಗೌರೀಶ ವಾಗೀಶಸನ್ನುತ
ಕೋಶಮಾಂಪಾಹಿ ೪

ನಾರಾಯಣ ಭಕ್ತ ಪರಾಯಣ ಪರಿವಾರಾಯಿತ
ಸುರವಾರಮಾಂಪಾಹಿ ೫

ಮಂದರಧರ ಮುಚುಕುಂದವರದ ಆನಂದ ಸದನ
ಗೋವಿಂದಮಾಂಪಾಹಿ ೬

ವಿಷ್ಣೋಸುಜನವರ್ಧಿಷ್ಣೋಸಂತೋಷಿತಜಿಷ್ಣು
ಸುರಜೀಷ್ಣೋಮಾಂಪಾಹಿ ೭

ಮಧುಸೂದನ ದುರ್ಮದಭೇದನ ಬಹುವಿದಭೇದನ
ನುತ ಬುಧಜನಪಾಹಿ ೮

ಆಕ್ರಮನುಪಿತ ನಿಜಕ್ರಮ ಜಿತವಿಶ್ವಶಕ್ರಸಹಜ ತ್ರಿವಿಕ್ರಮ ಪಾಹಿ ೯

ವಾಮನ ದೈತ್ಯ ವಿರಾಮ ನಮಿತ
ಸುರಕಾಮನ ಮುನಿಜನಪ್ರೇಮಮಾಂಪಾಹಿ ೧೦

ಶ್ರೀಧರ ಕರಧೃತ ಭೂಧರ ಚಕ್ರಗದಾಧರ
ಕೌಸ್ತುಭಕಂದರ ಪಾಹಿ ೧೧

ನಾಕೇಶವಂದ್ಯ ಹೃಷೀಕೇಶ ಮುನಿ ಹೃದಯಾಕಾಶ
ಗೋಚರರಾಕೆಂದು ಪಾಹಿ ೧೨

ಪದ್ಮನಾಭ ನತಪದ್ಮಜಮಾನಸ ಪದ್ಮಗೋಚರ
ಪದಪದ್ಮಮಾಂಪಾಹಿಂ ೧೩

ದಾಮೋದರ ಸುಜನಾಮೋದನ ಧೃತ ಕೌಮೋದಕ
ಜಿತಕಾಮಮಾಂಪಾಹಿ ೧೪

ದೊಷರಹಿತಗುಣ ಭೂಷಣ ನತಜನಪೋಷ-
ಸಂತೋಷಿತ ಶೇಷಮಾಂಪಾಹಿ ೧೫

ವಾಸುಕಿ ಶಯನ ವಿಕಾಶ ಕಮಲನಯ-
ನಾಸುರದಮನ ಶರಾಸನ ಪಾಹಿ ೧೬

ದುಷ್ಟಮರ್ದನ ಜಗದಿಷ್ಟವರ್ದನಸುರ ಕಷ್ಟಕೃಂತನ-
ಪರಿತುಷ್ಟಮಾಂಪಾಹಿ ೧೭

ವರದ ವಿಠಲವ್ಯಾಘ್ರಧರಣೀಧರಾಗ್ರ
ವಿಹರಣ ಸಕಲ ಗುಣಾಭರಣಮಾಂಪಾಹಿ ೧೮

## ೮೭

ಶ್ರೀನಿವಾಸ ನಿನ್ನ ನಂಬಿದ ದಾಸನ
ಶ್ರೀನಿವಾಸುಕಿಶಯ ಕಾಯೋ ಯನ್ನನು ಪ

ರೂಪರಹಿತ ಬಹುರೂಪಧರಿಸಿಹ ಶ್ರೀಪತಿಯೆನ್ನನು
ನೀಪರಿಪಾಲಿಸು ೧

ಕಾಲರೂಪ ಬಹು ಲೀಲೆಯತೋರುವ
ಮೂಲಪುರುಷಸುರ ಪಾಲಕ ಶ್ರೀಹರಿ ೨

ಶಕ್ತಿಗಳನು ಅವ್ಯಕ್ತದೊಳಿರಿಸಿ ಸಮಸ್ತವಸ್ತುವ ಸುವ್ಯಕ್ತಪಡಿಸಿದ ೩

ಕಲ್ಪಕೋಟಿ ನಿನಗಲ್ಪಕಾಲ ಪರಿಕಲ್ಪಿತಸುರನರ ಕಲ್ಪಭೋಜಹರಿ ೪

ಖಂಡಪರಶು ಆಖಂಡಲಾದಿಸುರ ಮಂಡಲಸೇವಿತ
ಪುಂಡರೀಕಪದ ೫

ಮಂದರಧರ ಗೋವಿಂದ ಮುಕುಂದ ಸನಂದನಾದಿ-
ಮುನಿಬೃಂದಸುವಂದಿತ ೬

ಸಾರಸುಗುಣ ಪರಿವಾರ ಸಜ್ಜನಾಧಾರ ಧೀರವರದ ವಿಠಲಹರಿ ೭

## ೮೮

ಶ್ರೀನಿವಾಸ ಸಲಹೋ ನಮ್ಮ ಶ್ರೀನಿಧಾನ ಚರಣನೆ ಪ

ಧ್ಯಾನ ನಿರತಮೌನಿಜನರ ಮಾನಸಾಬ್ಜಹಂಸನೆ ಅ.ಪ.

ನಕ್ರಮುಖದಿ ಸಿಕ್ಕಿದಿಭನನಕ್ಕರಿಂದ ಪೊರೆದನೆ
ಚಕ್ರಧರ ತ್ರಿವಿಕ್ರಮಾದಿ ಚಕ್ರಭೋಗಿ ಶಯನನೇ ೧

ಬಿಟ್ಟು ನಿನ್ನ ಭ್ರಷ್ಟನಾಗಿ ಕೆಟ್ಟೆಜನ್ಮ ಜನ್ಮದೆ
ಹುಟ್ಟಿ ಹುಟ್ಟಿ ಕಷ್ಟಪಟ್ಟೆ ಕೃಷ್ಣ ನಿನ್ನ ನಂಬಿದೆ ೨

ಶರಣ ಜನರ ಪೊರೆವನೆಂಬ ಬಿರುದು ಧರಿಪನಲ್ಲೆಲಾ
ಹರಿಣ ಹರಣಧರದೊಳಿರುವ ಕರುಣಿ ವರದ ವಿಠಲ ೩

## ೮೯

ಶ್ರೀವಾಸಾನತಮಾಕಲಯಾಚ್ಯುತ ಶ್ರೀವಾಸುಕಿಶಯ
ಮಾಮನಿಶಂಹೃದಾ ಪ

ಪುಂಡರೀಕನಯನಾಂಡಜವಾಹನ–ಕುಂಡಲಶಯ
ಮಾಂಡವ್ಯಸೇವ್ಯಪದ ೧

ಪುಂಡರೀಕ ಸುಮಂಡಿತಾಂಗಪದ ಪುಂಡರೀಕ
ಶ್ರಿತ ಪಾಂಡುತನಯ ಭೋ ೨

ನಂದಗೋಪವರ ನಂದನ ಸುಮನೋನಂದನ ಮುನಿಜನ
ವಂದಿತ ಪದಯುಗ ೩

ಧರ್ಮತನಯ ಸಹಧರ್ಮಚಾರಿಣಿ ವರ್ಮಪಾಲ
ಸದ್ಧರ್ಮಶೀಲಹರಿ ೪

ವ್ಯಾಘ್ರನಾಮ ದೈತ್ಯಾಗ್ರನಿಗ್ರಹಣೋತ್ರಸೇನ ತನಯಾಗ್ರವಿದಾರಣ ೫

ಬಾಲಭಕ್ತ ಪರಿಪಾಲಹೇಮಮಯ ಚೇಲವಿಧೃತ
ವನಮಾಲನರಹರೆ ೬

ಮಾರಜನಕ ಸುರವಾರವಂದ್ಯ ಮಂದಾರಹಾರ
ಸುಕುಮಾರ ಶರೀರ ೭

ಮಂದರಧರ ಪೂರ್ಣೇಂದುವದನ ಗೋವಿಂದಮುಕುಂದ
ಸನಂದವಂದಿತ ೮

ಖಂಡಪರಶು ಕೊದಂಡವೇತಂಡ ಹಸ್ತಭುಜದಂಡರಘೂದ್ವಹ ೯

ಅಂಬರೀಷವರದಂಬುಜಾಸನಾ
ಲಂಬಮಾನಚರಣಾಂಬುಜಕೇಶವ ೧೦

ಸಾರವಸ್ತುಪರಿಪೂರವ್ಯಾಘ್ರನಗ
ಪಾರಿಜಾತವರದಾರ್ಯವಿಠಲ ಶ್ರೀ ೧೧

## ೯೦

ಶ್ರೀ ವೆಂಕಟೇಶ ಪಾಹಿ–ತಾವಕ ಭಕ್ತಿಂದೇಹಿ ಪ

ವಾರಿಜನೇತ್ರಾ–ವಾರಿದಗಾತ್ರಾ
ನಾರದಸನ್ನುತ ಪಾತ್ರ ನರಮಿತ್ರ ಸುಚರಿತ್ರ ೧

ಅಂಡಜಯಾನ–ಕುಂಡಲಿ ಶಯನ । ಖಂಡಪರಶು
ಪರಿಪಾಲನ ಮುನಿಲಾಲನ ಸುರಖೇಲನ ೨

ವೆಂಕಟರಮಣ ಪಂಕಜಚರಣ
ಸಂಕಟಮೊಚನಕಾರಣ ಭವತಾರಣ ಗುಣಪೂರಣ ೩

ದಶರಥ ಬಾಲಾ ದಶಮುಖ ಕಾಲ
ದಶಶತ ಲೋಚನ ಪಾಲಾ–ಭೂಪಾಲಾ–ಸುರಮುನಿಲೋಲ ೪

ನಂದ ಕುಮಾರ–ನವನೀತ ಚೋರ
ಬೃಂದಾವನ ವಿಹಾರ–ಬಹುದಾರಾ–ಧುರಧೀರ ೫

ಅಜನುತ ಪಾದ-ಅಪಹೃತ ಖೇದ
ಸುಜನಕಲುಷ ನಿರ್ಭೇದ ನುತದೇವ ಸುರಮೋದ ೬

ವರವ್ಯಾಘ್ರಾಚಲವಿಹರಣ ಶೀಲ
ವರದ ವಿಠಲ ಗೋಪಾಲ-ಶ್ರೀ ಲೋಲ-ಬಹು ಲೀಲಾ ೭

## ೯೧

ಶ್ರೀ ವೆಂಕಟೇಶಮಾಂ ಪಾಲಯ ಸುಗುಣಾಲಯ ಪ

ದೇವ ದೇವ ಶಿಖಾಮಣಿ ಸೇವಕ ಸುಚಿಂತಾಮಣಿ ಅ.ಪ.

ಕಮಲಲೋಚನ ಭಕ್ತ ಶಮಲ ಲೋಚನ ಶಕ್ತ
ವಿಮಲ ಚರಿತಪೂರ ಕಮನೀಯಶರೀರ ೧

ಧೀರ ದಶರಥಕುಮಾರಾ ಬುಧಜನವಿಹಾರ
ವೀರಹರಿ ಪರಿವಾರ ಕ್ರೂರಾಸುರವಿದಾರ ೨

ಸರಸಿಜಾಸನನುತ ಸುರಮುನಿಸೇವಿತ
ಹರಿಣಾರಿಧರಾಗಾರ ವರದ ವಿಠಲಾಕಾರ ೩

## ೯೨

ಸರ್ವಾಂತರ್ಯಾಮಿ-ನೀನೇಸರಿ-ಸರ್ವಜ್ಞನು ಸ್ವಾಮೀ ಪ

ಸರ್ವಕಾರಣ ಸರ್ವಾಧಾರನು ಸರ್ವಶರಿರೇಕ ಸರ್ವನಿಮಾಯಕ ಅ.ಪ.

ಹರಿತನಯನಿಗಂದೂ ಸ್ವಶಕ್ತಿಯ ಹರಿಕೊಡುವನು ಬಂದು
ಹರಿತನುಜನಿಗದು ಹರಿಯದು ಯೆನ್ನುತಹರಿಸುತನನು
ಗುರಿಮಾಡಿದೆ ಹರಿ ೧

ದ್ರೋಣನಸುತ ಬಂದು ನಿಶಿಯೊಳುಮನೆ
ಕಾಣಿಸುವನು ಎಂದೂ
ಪ್ರಾಣಪದಕರನು ಕಾಣದಂತೆ ಬಲುಜಾಣತನದಿ
ಸಪ್ರಾಣರಮಾಡಿದೆ ೨

ಮರುತನ ಸುತನೆಂದು ಧೃತರಾಷ್ಟನು ಕರದಪ್ಪುವನೆಂದು
ಭರದಿಂ ಲೋಹದೊಳೆರಕದ ಭೀಮನ ವಿರಚಿಸಿ
ಶರಣನಹರಣವನುಳಹಿದೆ ೩

ಶೈಲದ ಗುಹೆಯೊಳಗೆ-ಮಲಗಿದ್ದನೃ ಪಾಲನ ಖತಿಯೊಳಗೆ
ಕಾಲಯವನನಂ ಕಾಲನ ಕಾಣಿಸಿ ಮೇಲೆ
ಶರಧಿಯೊಳಾಲಯ ಮಾಡಿದೆ ೪

ಪರಮ ಋಷಿಯನಂದು-ತಾಪಿಡಿಯಲು
ದುರುಳ ಪುಲಿಯು ಬಂದು
ಕರದಖಡುಗದಿಂ-ಹರಿಯನು ಖಂಡಿಸಿ ಶರಣನ
ಸಲಹಿದ ವರದವಿಠಲಹರಿ ೫

## ೯೩

ಸಲಹೊ ಶ್ರೀನಿವಾಸ-ಸುದ್ಗುಣ-ನಿಲಯವೆಂಕಟೇಶ
ಒಲಿದು ಸಕಲಗೋಕುಲವನು ಸಲಹಿದ
ಜಲಜಾಂಬಕ ನೀನಲಸದೆ ಯೆನ್ನನು ಪ

ವಾತವುಮಿತಿಮೀರಿ ಪಿತ್ತವ್ರಾತದೊಡನೆ ಸೇರಿ
ಧಾತುಗಳೆಲ್ಲ ವಿಘಾತಿಸಿ ಕಫಸಂಘಾತವು
ಹೆಚ್ಚಿದ ಹೇತುವನೋಡಿ ೧

ಶ್ವಾಸನಿರೋಧದಲಿ ಸೇರಿದ-ಕಾಸಗಳುದರದಲಿ
ಕೇಶರಂಧ್ರದವಕಾಶದೊಳೊರ್ಧ್ವ ಶ್ವಾಸ
ಹೆಚ್ಚಿ ಬಲು ಘಾಸಿಪಡಿಸುತಿದೆ ೨

ಕಾಯದ ಬಲವೆಲ್ಲಾ-ಕದಲುತ-ಮಾಯವಾದವಲ್ಲ
ದಾಯತಪ್ಪಿ ದುರ್ವಾಯುವಿಂದ ತಲೆನೋಯುತ
ದೇಹದೊಳಾಯಸ ಹೆಚ್ಚಿತು ೩

ನಿದ್ರೆ ಬಾರದಯ್ಯಾ-ನಿಶಿಯೊಳ-ಗೆದ್ದಿರಬೇಕಯ್ಯಾ
ಮದ್ದು ತಿಂದವನ ಬುದ್ಧಿಯಂತೆ ಮೈಗುದ್ದಿಕೊಂಡು
ಬಿದ್ದಾದ್ದಾಡಿಸುತಿದೆ ೪

ಅನ್ನವರೊಚಕವು ಆಪ್ತರೊಳನ್ಯತೆಗೊಚರವು
ಮುನ್ನವೈದ್ಯರುಗಳನ್ನು ಕಾಣೆ ನೀ ಕಣ್ಣತೆರದುನೊಡೆನ್ನ ಕಟಾಕ್ಷದಿ ೫

ರೋಗವುಘನವಯ್ಯಾ-ರೋದನೆ-ಯಾಗಿಹುದೆನಗಯ್ಯಾ
ನೀಗಲಾಡು ಈ ರೋಗವನ್ನು ಭವ-ರೋಗವೈದ್ಯ
ನೀನೇ ಗತಿಯೆಂದಿಗು ೬

ಪರಮ ಪುರುಷ ನಿನ್ನ-ಚರಣವ ಮರಹೊಕ್ಕಿಹೆಮುನ್ನ
ಶರಣಾಭರಣ ಪುಲಿಗಿರಿಯೊಳು ನೆಲಸಿಹ
ವರದ ವಿಠಲ ದೊರೆ ವರದಯಾನಿಧೇ ೭

## ೯೪

ಸುರಾಸುರಾರ್ಚಿತ ಸರೋಜಲೋಚನ
ಸರಾಗದಿಂದೆನ್ನ ನೀಕ್ಷಿಸೈ
ಪರಾಪರೇಶನೆ ಪರಾತ್ಪರನೆ ನೀ-ಪರಾಕು ಮಾಡದೆ ಪಾಲಿಸೈ ಪ

ವಿರಾಜಮಾನ ಸುವೀರಾಜವಾಹನ ವಿರಾಟ್ಪುರುಷ ವಿಶ್ವಂಭರ
ಕರಾರವಿಂದದಿ ಕರಾದಿಗಳ ಪಿಡಿದರಾತಿ ಮರ್ದನ ಧುರಂಧರ ೧

ಧರಾಧರಣಿಪಟು ಧರಾಧರಾಧಿಪ ಧುರಾವಹನ ದುರ್ಧರ್ಷಣ
ಧರಾಮರರ ಬಹು ಪರಾಭವವ ಬಲು ಸರಾಗದಲಿ ನಿರ್ವಾಪಣ ೨

ಜರಾಮರಣಗಳ ನಿರಾಕರಿಸಿ ವಸುಂಧರಾ ಭರಣ ಗುಣಭೂಷಣ
ಸುರಾರಿ ಮರ್ದನ ಶರಾಸನಾಂಚಿತ ಕರಾನಿಹಿತ ಮಣಿಕಂಕಣ ೩

ಶಿರೀಷ ಕುಸುಮದ ಸರೀಸುಕೋಮಲ ಶರೀರ ನಿನ್ನದು ಈಪರಿ
ಸಿರಿಯು ದರದೊಳೇ ಶಿರಿಯ ಧರಿಸಿಹ
ಪರಿಯದೆಂತುಟೋ ಕೇಳ್ಹರಿ ೪

ಪಯೋಧಿತನಯಾ ವಯೋ ಸುರೂಪನೆ
ಧಯಾನಿಧಿಯೇಧರ್ಮಾತ್ಮನೆ
ದಯಾರಸದಿ ಹೃತ್ಪಯೋಜ ಮಧ್ಯದಿ
ನಿಯಾಮಿಸುವ ನಿರ್ಮಾಯನೆ ೫

ವರೇಣ್ಯಸಜ್ಜನ ಶರಣ್ಯಪುಲಿಗಿರಿಯರಣ್ಯಮಧ್ಯ ವಿರಾಜಿತ
ಹಿರಣ್ಯಯಾಂಬರ ಹಿರಣ್ಯಕಾಂತಕ ಹಿರಣ್ಯಗರ್ಭಸುಪೂಜಿತ ೬

ವ್ಯಾಘ್ರನೆಂಬುವತ್ಯುಗ್ರದೈತ್ಯನಂ ನಿಗ್ರಹಗೈದ ಮಹಾತ್ಮನೆ
ಶೀಘ್ರದಿ ಭಕ್ತಾನುಗ್ರಹಮಾಳ್ಪಸುರಾಗ್ರಗಣ್ಯ ಪುಣ್ಯಾತ್ಮನೆ ೭

ಸುರರು ನರರು ನಿನ್ಹಿರಿಮೆಯನರಿಯದೆ
ನಿರುತವು ಸನ್ನುತಿಗೈವರೆ
ಪರಮ ಪುರುಷ ಸುಖಕರ ನೀನೆನ್ನುತ
ಪರಿಪರಿ ನಿನ್ನನೆ ಪೊಗಳ್ವರೆ ೮

ಮೂಜಗ ಮಾಡುವ ಪೂಜೆಯಿಂದ ನೀ
ನೀಜಗದಲ್ಲಿ ಒಲಿದಿರ್ಪೆಯ
ಮೂಜಗ ಪೂಜಿಪ ವ್ಯಾಜದಿಂದ ನಿಜಪೂಜೆಯ
ನೀ ಕೈಗೊಂಬೆಯ ೯

ನಿಜಪರದೊಲುನೀ ನಜಭವಮುಖಸುರವ್ರಜ–
ಗೋಚರನಾಗಿಲ್ಲವೈ

ಸುಜನರ ಪೊರೆಯುವ ನಿಜಮತಿಯಿಂದಲಿ
ತ್ರಿಜಗಕ್ಕೆ ಗೋಚರನಾಗಿಹೈ ೧೦

ನಿತ್ಯತೃಪ್ತನೀನತ್ಯುತ್ತಮ ನಿಜ ಭೃತ್ಯನಮರ್ತ್ಯನು ಮೋದದಿ
ನಿತ್ಯದಿ ನಿನ್ನತ್ಯುತ್ತಮ ಪದದೊಳು ಭಕ್ತಿಯ ಪಾಲಿಸು ನೇಮದಿ ೧೧

ಧರಣಿಯೊಳುರುತರ ಮೆರೆಯುವ
ಫಣಿಭೂಧರದೊಳು ನಿರುತವು ಭಕ್ತರ
ಕರುಣದಿ ಪೊರೆಯುವ ಧೊರೆ ಸಿರಿವಲ್ಲಭವರದ
ವಿಠಲ ಕರುಣಾಕರ ೧೨

## ೯೫

ಸೇವೇ ಶ್ರೀರಮಣಂ–ಸದಾ–ಸೇವಕಾರ್ತಿಹರಣಂ ಪ

ಪಾವಕ ಶತರುಚಿ ರುಚಿರಾಭರಣಂ ಪಾವನವ್ಯಾಘ್ರಾಚಲವಿಹರಣಂ ಅ.ಪ.

ಪುಂಡರೀಕಾಯತ ನೇತ್ರಂ ಮಂಡಿತ ಖಗಪತಿ ಪತ್ರಂ
ಖಂಡಪರಶುಕೃತ ಸನ್ನುತಿ ಪಾತ್ರಂ ಚಂಡಕಿರಣ
ಶತ ಸನ್ನಿಭಗಾತ್ರಂ ೧

ಕುಲಿಶಧರಾತ್ಮಜಮಿತ್ರಂ–ಸುಲಲಿತ ಕರಧೃತ ಗೋತ್ರಂ
ಕಲಿತರಥಾಂಗಧರಾಸಿತನುತ್ರಂ ಕಲಿಮಲಖಂಡನ
ನಿಜ ಚಾರಿತ್ರಂ ೨

ಭಾವಿತ ಜನ ಮಂದಾರಂ–ಭಾವಜ–ಜನಕ ಮುದಾರಂ
ಸೇವಕ ರಕ್ಷಣ ಧೃತ ಶರೀರಂ ದೇವ
ಸಮೂಹಾಕಲಿತ ವಿಹಾರಂ ೩

ಶಂಕರ ಹೃದಯಧ್ಯೇಯಂ ಕಿಂಕರ ಜನ ಸಮುದಾಯಂ
ಪಂಕಜ ನಿಲಯಾಲಿಂಗಿತ ಕಾಯಂ ಸಂಕಟಮೋಚಕ
ನಿಜನಾಮಧೇಯಂ ೪

ಪರಮ ಪುರುಷಮನವದ್ಯಂ ಸರಸಗುಣಾಕರ ಮಾದ್ಯಂ
ವರಯೋಗಿ ಜನಹೃದಯಾರಾಧ್ಯಂ-ವರದ
ವಿಠಲ ಮಖಿಳಾಗಮ ಬೋಧ್ಯಂ ೫

## ೯೬

ಹಣ್ಣುಬಂದಿದೆ-ಜನರು-ಹಣ್ಣಕೊಳ್ಳಿರೊ
ಗಣ್ಯಮಾಗಿ ಬಣ್ಣಿಸುತ್ತ ಪುಣ್ಯವಂತರುಣ್ಣತಿರುವ ಪ

ಬೀಜವಿಲ್ಲದಾ-ಬೆಳೆದ ಭೂಜವಲ್ಲದ ಬೀಜಭೂಜಗಳಿಗೆ ತಾನೇ
ಬೀಜವಾಗಿ ಮೆರೆಯುತಿರುವ ೧

ಹುಟ್ಟಿ ಬೆಳೆಯದಾ-ಜನರು-ಮುಟ್ಟಿತೊಳೆಯದಾ
ಎಷ್ಟುದಿವಸವಿಟ್ಟಿರಲು ಕೊಳೆತು ಕೆಟ್ಟು ಹೋಗದ ೨

ಬೆಲೆಗೆ ಬಾರದಾ-ತನ್ನ-ನೆಲೆಯ ತೊರದ
ಒಲಿದವರಿಗೆ ಸುಲಭವಾಗಿ ಹಲವು ವಿಧದಿ ಹೊಳೆಯುತಿರುವ ೩

ಅರಿಯದವರಿಗೆ-ರುಚಿಯ-ನರಿತಜನರಿಗೆ
ಅರಿತ ಮೇಲೆ ನಿರುತ ವಿರುತ ಸರಸಮಧುರ ಭರಿತ ಬರಿತ ೪

ಸಿರಿಮನೋಹರ-ವ್ಯಾಘ್ರ-ಗಿರಿಯ ಮಂದಿರ
ಶರಣ ಜನರ ಪೊರೆವ ನಮ್ಮ ವರದ ವಿಠಲನೆಂಬದಿವ್ಯ ೫

## ೯೭

ಹರಿನೀಲ ಸದೃಶ ನೀಲ ಕನಕ ಚೇಲ ಲೀಲಯಾ
ಪುಲಿಶೈಲರಚಿತಲೀಲರಮಾಲೋಲ ಪಾಲಯಾ ಪ

ಶರದಿಂದುವದನ-ಕುಂದರದನ ನಂದ ನಂದನಾ
ಅರವಿಂದ ನಯನ ಸಿಂಧುಶಯನ ವಂದಿ ಚಂದನಾ ೧

ಯದುರಾಜಕಲ್ಪಭೂಜದೇವ ರಾಜಪೂಜಿತ
ಕರಿರಾಜರಾಜ ರಾಜ ಸಮ ವಿರಾಜ ರಾಜಿತ ೨

ಘನದುರಿತ ಪಟುಲಹರಣ ಚಟುಲಚರಣ ಪಾಟಲಾ
ಕರಿವರದ ವಿಮಲ ಚರಿತ ವಿಪುಲ ವರದ ವಿಠಲ ೩

## ೯೮

ಹರಿ ಕೃಪೆಯಿಂದಲಿ ದೊರೆದಿತು ಯನಗೀ ಶಿರಿಕರ ತಂಬೂರಿ ಪ

ನರಹರಿ ನಾಮ ಸ್ಮರಣೆಯಗೈಯುವಾ ನರಂಗೆ ಸಹಕಾರಿ ಅ.ಪ.

ತಾಪತ್ರಯವನು ಲೊಪಗೈವ ಸುಖ ರೂಪಿನ ತಂಬೂರಿ
ಶ್ರೀಪತಿ ಭಕ್ತಿನಿರೂಪಣದಿಂದಖಿಲಾಪತ್ಪರಿಹಾರಿ ೧

ವಾಸುದೇವ ನಿಜದಾಸರು ಪಿಡಿಯುವ ಭಾಸುರ ತಂಬೂರಿ
ವಾಸುಕಿ ಶಯನ ವಿಲಾಸದ ಕೀರ್ತಿವಿಕಾಸದ ಜಯಭೇರಿ ೨

ಅಂಬುಜಭವನ ಕುಟುಂಬಿನಿಯ ಕರಾಲಂಬನ ತಂಬೂರಿ
ತುಂಬುರನಾರದ ರಂಬುರುಹಾಕ್ಷನ ಹಂಬಲಿಗನುಸಾರಿ ೩

ಗಂಧರ್ವರ ಕರಪೊಂದಿ ಮೆರೆವ ಬಲು ಸುಂದರ ತಂಬೂರಿ
ಸುಂದರಿಯರ ನಲವಿಂದಲಿನುಡಿಸುವಾನಂದ ಸುಗುಣಧಾರಿ ೪

ಶ್ರುತಿಯುತ ಮಾಗಲು ಮತಿಯುತರಿಗೆ ಸಮ್ಮತವಹತಂಬೂರಿ
ಶ್ರುತಿಹೀನತೆಯಿಂದ ತಿಶಯಮಾಗದು ಕೃತಿಶತವನುಸಾರಿ ೫

ಲೋಕದಜನರಿಗನೇಕ ಸುಕೃತ ಪರಿಪಾಕದ ತಂಬೂರಿ
ಈ ಕಲಿದೋಷ ನಿರಾಕರಣೆಗೆ ಬಹು ಭೀಕರ ಮುಖಧಾರಿ ೬

ಧರೆಯೊಳು ಪುಲಿಗಿರಿ ವರದ ವಿಠಲನ ಬಿರಿದಿನ ತಂಬೂರಿ
ದುರಿತವೆಂಬ ಮದಕರಿಯನು ಸೀಳುವ ಹರ್ಯಕಾರಿ ೭

## ೯೯

ಹರಿಯೆ ಯನ್ನ ಧೊರೆಯೆ ನಿನ್ನಮರೆಯ ಹೊಕ್ಕೆನೊ
ಮರೆಯದೆನ್ನ ಪೊರೆಯೊ ವ್ಯಾಘ್ರಗಿರಿಯೊಳಿರುವ
ಸಿರಿಯರಮಣ ಪ

ಸಕಲ ಲೋಕಗಳನುನೀನೇ ಸೃಜಿಸುವಾತನು
ಸುಖದಿ ಪ್ರಾಣಿಗಳನು ನೀನೆ ಸಲಹುವಾತಾನು
ಪ್ರಕಟವಾದ ಜಗವ ನೀನೆ-ಪ್ರಳಯಗೈವನು
ನಿಖಿಲ ಜೀವಸಾಕ್ಷಿಯಾಗಿ ನಿತ್ಯನೀನೆನಿಯಮಿಸುವನು ೧

ಸ್ಥೂಲಸೂಕ್ಷ್ಮರೂಪನೀನೆ ಮೂಲಪುರುಷನು
ಲೀಲೆಯನ್ನು ಪ್ರಕಟಗೈವ ಕಾಲರುಪನು
ನೀಲ ಲೋಹಿತಾದಿ ವಿಬುಧಜಾಲ ವಂದ್ಯನು
ಪಾಲಿತಾಖಿಲಾಂಡ ರಮಾಲೋಲ ಸುಗುಣಜಾಲ ಶ್ರೀ ೨

ಪರಮ ಪುರುಷ ಪಂಕಜಾಕ್ಷ–ಪತಿತ ಪಾವನ
ಶರಧಿಶಯನ ಸಕಲಲೋಕ ಸಂವಿಭಾವನ
ವರಗುಣಾಢ್ಯ ವಿಗತ ಮಾಯ ವಿಶ್ವ ಮೋಹನ
ದುರಿತ ಗಜಮೃಗಾಧಿರಾಜವರದ ವಿಠಲ ವಿಹಗಯಾನ ೩

## ಲಕ್ಷ್ಮೀದೇವಿ

### ೧೦೦

ನಂಬಿದೆ ನಿನ್ನ ಪಾದಾಂಬುಜಯುಗಳವ– ಶಂಬರಾರಿ ಜನನಿ ಪ

ಬೆಂಬಿಡದೆನ್ನಹೃದಂಬುಜದೊಳಗವಲಂಬಿಸಿ–
ಸಲಹುಮದಂಬೆ ಸನಾತನಿ ಅ.ಪ

ಅಂಬುಜಮುಖಿ....ಚಿಕುರೆ ಶರ ದಂಬುಜದಳನಯನೆ
ಕಂಬುಕಂಠಿಕನಕಾಂಬರೆ ಮದಕರಿ ಕುಂಭಪಯೋಧರೆ
ಬಿಂಬಫಲಾಧರೆ ೧

ಕರ್ಣದೊಳೆಸೆವಸು ವರ್ಣವಿಡಿದ ಪೊಸರನ್ನದೊಡವೆಗಳ
ಮನ್ನಿಸುವಂತಿದೆ ಪೂರ್ಣಕಟಾಕ್ಷವು ಕನ್ನಡಿಕದಪಿನ
ರನ್ನೆ ಗುಣಾರ್ಣವೆ ೨

ಮಾಲತಿಮಲ್ಲಿಗೆ ಮಾಲೆಯಿಂದೊಪ್ಪುವ ನೀಲಭುಜಗವೇಣಿ
ಲೀಲೆಯಂದ ಶಾರ್ದೂಲ ಮಹೀಂದ್ರದೊಳಾಲಯ
ಗೈದಲಮೇಲಮಂಗಾಮಣಿ ೩

### ೧೦೧

ಪಾಲಿಸೆನ್ನಪರಿ ಪಾಲನಶೀಲೆ ಪಾಲಿತಸುರನರ ಜಾಲಸುಶೀಲೆ ಪ

ಕ್ಷೀರ ಶರಧಿ ಸುಕುಮಾರಿಣಿ ಲಕ್ಷೀ
ವಾರಿಜಮುಖಿಸಿತವಾರಿರುಹಾಕ್ಷಿ ೧

ಅಂಬೆ ಭುವನ ಕುಟುಂಬೆ ರಮಾಂಬೆ
ನಂಬಿಭಜಿಸುವುದು ಡಾಂಬಿಕಮೆಂಬೆ ೨

ಯುಕ್ತಿಯು ಶಕ್ತಿವಿರಕ್ತಿಗಳಿಲ್ಲ ಉಕ್ತಿಮಾತ್ರದಿಂದ ಭಕ್ತಿಕೊಡೆಲ್ಲ ೩

ಜಯಕರುಣಾಲಯೆ ಜಯಮಣಿವಲಯೆ
ಜಯನಿಸ್ತುಲಯೆ ಜಡಮತಿ ಗೊಲಿಯೆ ೪

ದರೆಯೊಳುತ್ತಮ ಪುಲಿಗಿರಿ ಯೊಳಿರುವನೆ
ಶರಣರ ಪೊರೆಯುವ ವರದ ವಿಠಲನೆ ೫

## ೧೦೨

ಸಾರಸದಳ ನಯನೆ–ಸಲಹೆಮ್ಮನು ತೋರುವ ಜಗದಯನೆ ಪ

ಕ್ಷೀರ ಶರಧಿ ಸುಕುಮಾರಿಣಿ ಹರಿ ಸಹ
ಚಾರಿಣಿ ಭುವನ ವಿದಾರಿಣಿ ರುಕ್ಮಿಣಿ ಅ.ಪ.

ಮಂದಹಾಸ ವಿಜಿತೇಂದು ಕಿರಣೆ
ಗಜ ಮಂದಗಮನೆ ಸಂಕ್ರಂದನ ವಂದಿತೆ ೧

ನೀರಜಸಮಪಾಣಿ ನೀ ಲಾಲಿಸು ಕೀರಮಧುರ ವಾಣಿ
ತಾರಹಾರ ಶೃಂಗಾರತರಂಗಿಣಿ–
ಮಾರಜನನಿ ಕಂಸಾರಿಯ ರಾಣಿ ೨

ನೀಲಭುಜಗವೇಣಿ–ನೀನೇಗತಿ ಪಾಲಿಸು ಕಲ್ಯಾಣಿ
ಲೀಲೆಯಿಂದ ವನಮಾಲಿಯುರದಿ ನಿತ್ಯಾಲಯಗೈದಿಹ
ಬಾಲೆ ವರದ ವಿಠಲ ರಮಣಿ ೩

# ಅನುಬಂಧಗಳು

೧. ಕಠಿಣ ಶಬ್ದಗಳ ಅರ್ಥ

೨. ಟಿಪ್ಪಣಿಗಳು

೩. ಅಂಕಿತನಾಮಸೂಚಿ

೪. ಕೀರ್ತನೆಗಳ ಅಕಾರಾದಿ

# ಅನುಬಂಧ–೧

## ಕಠಿಣ ಶಬ್ದಗಳ ಅರ್ಥ

### ಮುದ್ದುಮೋಹನವಿಠಲದಾಸರು

**ಅ**

ಅಂಗಜ = ಮನ್ಮಥ
ಅಂಭ್ರಣಿ = ಲಕ್ಷ್ಮೀದೇವಿ
ಅಮರೇಶ = ಇಂದ್ರ

**ಆ**

ಆಗಾಮಿ = ಮುಂಬರುವ

**ಊ**

ಊರ್ಧ್ವಪುಂಡ್ರ = ಉದ್ದನಾಗಿ ಧರಿಸುವ ವೈಷ್ಣವ ಚಿನ್ಹೆಗಳು

**ಕ**

ಕಂದುಗೂರಳ = ನೀಲಕಂಠ, ಶಿವ
ಕರ್ಣಿಕೆ = ಕಮಲದ ಮಧ್ಯಭಾಗ
ಕಮಲಾಸನ = ಬ್ರಹ್ಮ
ಕಾಕು = ನೀಚ
ಕುಂಭಿಣಿ = ಭೂಮಿ

**ಜ**

ಜಾಯೆ = ಪತ್ನಿ
ಜಿಹ್ವಾ = ನಾಲಿಗೆ

**ದ**

ದಾತಾ = ದಾತಾರ : ಒಡೆಯ

**ನ**

ನಾಕಜ = ದೇವತೆಗಳು

**ಪ**

ಪಂಚಬಾಣ = ಮನ್ಮಥ. ಪದ್ಮಸಂಭವ,
ಪದ್ಮಸಂಭವ = ಬ್ರಹ್ಮ
ಪರಮೇಷ್ಠಿ = ಬ್ರಹ್ಮ
ಪಾರ್ಥಸಖ = ಅರ್ಜುನನ ಮಿತ್ರ, ಶ್ರೀಕೃಷ್ಣ
ಪ್ರಣವ = ಓಂಕಾರ

**ಬ**

ಬನ್ನ = ಕಷ್ಟ

**ಮ**

ಮಾ = ಲಕ್ಷ್ಮೀದೇವಿ
ಮಿಡುಕಿಸು = ಸಂಕಟಪಡಿಸು, ಭಯಪಡಿಸು

**ವ**

ವಾನರ = ಕಪಿ, ಹನುಮ

**ಶ**

ಶಂಬರಾರಿ = ಮನ್ಮಥ

**ಸ**

ಸಂಚಿತ = ಕೂಡಿಟ್ಟ

**ಹ**

ಹಾಟಕ = ಚಿನ್ನ

## ತಂದೆ ಮುದ್ದುಮೋಹನ ವಿಠಲದಾಸರು

**ಅ**

ಅಜ = ಬ್ರಹ್ಮ
ಅಧೋಲೋಕ = ಪಾತಾಳ

**ಉ**

ಉಪಕೃತಿ = ಉಪಕಾರ
ಉರಗಾಧಿನಾಥ = ಆದಿಶೇಷ

**ಕ**

ಕದ್ರುಜ = ಶೇಷದೇವ
ಕಾರೊಡೆಯ = ಕಪ್ಪಾದವ (?) ಕೃಷ್ಣ
ಕೃದ್ಧ = ಕೋಪಿಷ್ಠ, ಕೋಪಗೊಂಡ

**ತ**

ತಾರ್ಕ್ಷ್ಯತುರಂಗ= ಗರಡವಾಹನ, ವಿಷ್ಣು
ಬನ್ನ = ಕಷ್ಟ
ದಿತಿಜಾರಿ = ದೈತ್ಯರಶತ್ರು, ವಿಷ್ಣು
ದುರಿತಾರಿ = ಪಾಪಗಳ ಶತ್ರು (ಭಗವಂತ)
ದುಷ್ಕೃತ = ಕೆಟ್ಟಕೆಲಸ
ದ್ವಿಜರಾಜ = ಗರುಡ

**ನ**

ನಾಕ = ಸ್ವರ್ಗ
ನಿಸ್ತುಲ = ಅಸಮಾನ

**ಪ**

ಪುಸಿ = ಸುಳ್ಳು
ಪ್ರತ್ಯಹ = ಪ್ರತಿದಿನ, ದಿನಾಲು

**ಮ**

ಮಧುವೈರಿ = ವಿಷ್ಣು
ಮಾತುಳಾಂತಕ = ಸೋದರ ಮಾವನನ್ನುಕೊಂದ ಕೃಷ್ಣ
ಮೃಡ = ರುದ್ರ
ಮ್ಲೇಂಛ = ಅನಾಗರಿಕ

**ರ**

ರತಿ = ಆಸಕ್ತಿ, ಹಂಬಲ

**ವ**

ವಿದಾರಿ = ಕತ್ತರಿಸುವವನು
ವ್ರಾತ = ಗುಂಪು, ಸಮೂಹ

**ಸ**

ಸಕ್ತಿ = ಆಸಕ್ತಿ, ಶ್ರದ್ಧೆ

## ಬಾಗೇಪಲ್ಲಿ ಶೇಷದಾಸರು

ಅ

ಅಂಜಲಿ = ಜೋಡಿಸಿದ ಕೈಗಳು
ಅಘ = ಪಾಪ
ಅಜನರಾಣಿ = ಬ್ರಹ್ಮನ ರಾಣಿ, ಸರಸ್ವತಿ
ಅಣುಗ = ಸೇವಕ
ಅರ್ಭಕ = ಮಗು

ಆ

ಆಣಿ = ಶ್ರೇಷ್ಠವಾದ
ಆಪನ್ನ = ಆಪತ್ತಿಗೆ ಗುರಿಯಾದವ

ಉ

ಉದಧಿಶಯನ= ಕ್ಷೀರ ಸಮುದ್ರಶಯನ
ಉಡುರಾಜ = ಚಂದ್ರ

ಕ

ಕಂದರ = ಕೊರಳು, ಕುತ್ತಿಗೆ
ಕಂಜಲೋಚನ= ಕಮಲದಂತೆ ಕಣ್ಣುಳ್ಳ
ಕಂಬು = ಶಂಖ
ಕಳತ್ರ = ಪತ್ನಿ, ಹೆಂಡತಿ
ಕಾಲಾಹಿವೇಣಿ= ಕಾಳಸರ್ಪದಂತೆ ಜಡೆಯುಳ್ಳವಳು
ಕುಂಜರ = ಆನೆ, ಗಜೇಂದ್ರ
ಕುಂಭಿಣಿ = ಭೂದೇವಿ
ಕೂಲ = ತೀರ

ಗ

ಗಾತ್ರ = ದೇಹ

ಘ

ಘಾಸಿ = ತೊಂದರೆ, ಹಿಂಸೆ, ಆಯಾಸ, ದಣಿವು

ನ

ನವನೀತ = ಬೆಣ್ಣೆ

ಪ

ಪವನಾತ್ಮ = ವಾಯುದೇವನಿಗೆ ಆತ್ಮನಾಗಿರುವವನು
ಪೀನವಕ್ಷ = ತುಂಬಿದ ಎದೆಯುಳ್ಳವ
ಪೊಳಲು = ಪಟ್ಟಣ

ಫ

ಫಾಲ = ಹಣೆ
ಫುಲ್ಲನಾಭ = ಕಮಲನಾಭ

ಬ

ಬಾ಼ರಿ = ಏತದ ಬಾವಿಯ ಇಳಿಜಾರು

ಭ

ಭಾಸುರ = ಸುಂದರ
ಭುಜಂಗ = ಸರ್ಪ, ಶೇಷ
ಭುಜಗವೇಣಿ = ಹಾವಿನಂತೆ ಜಡೆಯುಳ್ಳವಳು
ಭ್ರಮರ = ದುಂಬಿ

**ಮ**

ಮದನ ಕದನ= ಕಾಮಕೇಳಿ
ಮದಮುಖ = ಮತ್ತರಾದವರಲ್ಲಿ ಮುಖ್ಯನಾದ
ಮದಮುಖರು= ದೈತ್ಯರು
ಮಾರ = ಮನ್ಮಥ
ಮೃಗಮದ = ಕಸ್ತೂರಿ

**ವ**

ವಾಸವ ಮುಖ= ಇಂದ್ರನೇ ಮೊದಲಾದ

**ಶ**

ಶೌರಿ = ಕೃಷ್ಣ
ಶ್ರಿತಜನ = ಆಶ್ರಿತ ಜನ

**ಸ**

ಸುಮಶರಪಿತ = ಕಾಮನ ತಂದೆ ಕೃಷ್ಣ
ಸುಮ್ಮಾನ = ಸುಮನ = ದೇವತೆ
ಸುರೇಶರು = ದೇವತೆಗಳಲ್ಲಿ ಮುಖ್ಯರಾದವರು

**ಹ**

ಹರಿಣಾಕ್ಷಿ = ಜಿಂಕೆಯಂತೆ ಕಣ್ಣುಳ್ಳವಳು

## ಕೃಷ್ಣ ವಿಠಲದಾಸರು

**ಅ /ಆ**

ಅಂಬಕ = ಕಣ್ಣು
ಅಘ = ಪಾಪ
ಅಜಗರ = ಸರ್ಪ,ಶೇಷ
ಅತುಳ = ಅಸಮಾನ
ಅರ್ಣವ = ಸಮುದ್ರ
ಅನವದ್ಯ = ನಿರ್ದೋಷವಾದ
ಅನಿಶ = ಯಾವಾಗಲೂ
ಅರ = ದೋಷ
ಅರಿ = ಚಕ್ರ, ದೋಷ
ಅಲವ = ಬಹಳ
ಅಹಿಭೂಷಣ = ಶಿವ
ಆಖು = ಇಲಿ
ಆತತ = ಹರಡಿದ, ವಿಶಾಲವಾದ

**ಇ /ಈ**

ಇಕ್ಷುಚಾಪ = ಮನ್ಮಥ
ಇಭವರದ = ಗಜೇಂದ್ರವರದ
ಈರ = ವಾಯು ದೇವರು

**ಓ**

ಓತಪ್ರೋತ = ಹಾಸುಹೊಕ್ಕಾಗಿ

**ಕ /ಖ**

ಕಂತು = ಮನ್ಮಥ
ಕಂಧರ = ಕೊರಳು
ಕಂಬು = ಶಂಖ
ಕಕ್ಕಸ = ಕಷ್ಟ, ಕಠಿಣ
ಕಾಕು = ನೀಚ, ವ್ಯಂಗ್ಯ
ಕುಂಡಲಗಿರಿ = ಶೇಷಗಿರಿ
ಕುಂಡಲಿ = ಸರ್ಪ
ಕುಂಭಿಣಿ = ಭೂಮಿ
ಕುಠಾರ = ಕೊಡಲಿ
ಕುತ್ತು = ವಿಪತ್ತು

ಕುತ್ಸಿತ = ತುಚ್ಛವಾದ
ಕುಲಿಶ = ವಜ್ರಾಯುಧ
ಕ್ರತು = ಯಜ್ಞ, ಯಾಗ
ಕ್ರೋಡ = ವರಾಹ
ಖರಾರಿ = ಕೃಷ್ಣ

**ಗ**

ಗದ್ದ = ಹೆಡ್ಡ
ಗೋಧರಾತಪತ್ರ = ಗೋವರ್ಧನ ಗಿರಿಯನ್ನು ಛತ್ರವಾಗಿ ಮಾಡಿಕೊಂಡವ–ಕೃಷ್ಣ
ಗೋಜ = ಶ್ರೀಹರಿ
ಗೋತತಿ = ವೇದಗಳ ಸಮೂಹ

**ಚ**

ಚಯ = ಸಮೂಹ

**ಜ**

ಜಂಭಾರಿ = ಇಂದ್ರ
ಜವ = ಬೇಗ
ಜಿಷ್ಣು = ಇಂದ್ರ , ಅರ್ಜುನ

**ತ**

ತಾರಕ = ಉದ್ಧಾರ ಮಾಡುವ
ತುಂಗ = ಶ್ರೇಷ್ಠ, ಎತ್ತರ
ತುಲ್ಯ = ಸಮಾನ
ತೊಂಡ = ಸೇವಕ, ಭಕ್ತ
ತ್ರ್ಯಕ್ಷ = ಮುಕ್ಕಣ್ಣ , ಶಿವ

**ದ**

ದಸ್ಯು = ಅನಾಗರಿಕ
ದುರಿತ = ಪಾಪ

**ನ**

ನಕ್ರ = ಮೊಸಳೆ
ನಗಚಾಪ = ರುದ್ರ
ನಗವೈರಿ = ಇಂದ್ರ
ನಾಕಋಷಿ = ನಾರದ
ನಿರ್ಜರ = ದೇವತೆ
ನಿರಯ = ನರಕ
ನೀರಜ = ಕಮಲ
ನ್ಯಾಸ = ಇಡಲ್ಪಟ್ಟುದು

**ಪ**

ಪಂಚಾನನ = ಸಿಂಹ
ಪರಾಕ್ಷರ = ಲಕ್ಷ್ಮಿಗಿಂತಸ್ವ ಉತ್ತಮನಾದ ಶ್ರೀಹರಿ
ಪಾಂಶು = ಧೂಳು
ಪಿನಾಕಿ = ಶಿವ
ಪೀಯೂಷ = ಅಮೃತ
ಪೂತ = ಪವಿತ್ರ
ಪೂರ್ವಜಾತರು = ದೈತ್ಯರು

**ಬ /ಭ**

ಬಿನಗು = ಹೀನ , ಕ್ಷುದ್ರ
ಭವ = ಸಂಸಾರಚಕ್ರ
ಭುಜಂಗ = ಸರ್ಪ, ನಾಗ
ಭಾಜನ = ಅರ್ಹ, ಪಾತ್ರ
ಭೂತಿಭೂರಿದ = ಕ್ಷೇಮ ಮತ್ತು ಹೆಚ್ಚಾಳಿಕೆ ಕೊಡುವವ
ಭೇಶ = ಚಂದ್ರ
ಭೃತ್ಯ = ಸೇವಕ

**ಮ**

ಮಣಿಮಂತ = ಒಬ್ಬದೈತ್ಯ
ಮಹಾಂತ = ಪೂಜ್ಯ
ಮಾಜು = ಮುಚ್ಚಿಡು, ಮರೆಮಾಡು
ಮಿಷಣ = ಮಿಸುನಿ, ಚಿನ್ನ
ಮೀನಾಂಕ = ಮನ್ಮಥ
ಮೋದಮುನಿ = ಮಧ್ವಾಚಾರ್ಯರು
ಮೈನಾಕಿ = ಪಾರ್ವತಿ
ಮೌಳಿ = ತಲೆ

**ರ**

ರಜ್ಜು = ಹಗ್ಗ
ರವಿಸುತ = ಯಮ
ರಾಕೇಂದು = ಪೂರ್ಣಚಂದ್ರ
ರಿಕ್ತ = ಬಡವ
ರುಜೆ = ರೋಗ

**ಲ**

ಲವ = ಸ್ವಲ್ಪ

**ವ**

ವಾಂಛಿತ = ಇಷ್ಟಪಟ್ಟ
ವಾಜಿವಕ್ತ್ರ = ಹಯವದನ
ವಾರವಧೂಗಣ = ದೇವದಾಸಿಯರ ಸಮೂಹ
ವಾರಾಸಿ = ಸಮುದ್ರ
ವಾರಿ = ನೀರು, ಸಮುದ್ರ
ವಾರಿಣಿ = ಹೆಣ್ಣಾನೆ
ವಾಸವ = ಇಂದ್ರ
ವಿಖನಸ = ಗರುಡ
ವಿತ್ತ = ಸಂಪತ್ತು
ವಿಧು = ಚಂದ್ರ
ವೆಗ್ಗಳ = ಹೆಚ್ಚು
ವೇಧ = ಬ್ರಹ್ಮ
ವ್ಯಾಳ = ಸರ್ಪ, ಶೇಷ
ವ್ರಾತ = ಸಮೂಹ
ವ್ರಾತ್ಯ = ನೀಚ, ಜಾತಿ ಬಾಹಿರ

**ಶ**

ಶಕ್ರ = ಇಂದ್ರ
ಶರ್ಕರಾಕ್ಷ = ಸೂಕ್ಷ್ಮಜ್ಞಾನಿ
ಶತಮೋದ = ಬ್ರಹ್ಮ
ಶಯ್ಯ = ಹಾಸುಗೆ
ಶಶ್ವದೇಕ = ಒಂದೇರೀತಿಯಾಗಿ
ಶಿಖಿ = ಅಗ್ನಿ
ಶೂಲಿ = ಶಿವ
ಶೃಗಾಲ = ಸೃಗಾಲವಾಸ ದೇವನೆಂಬ ದೈತ್ಯ
ಶ್ವಾನ = ನಾಯಿ
ಶ್ವಾಸ = ಉಸಿರು, ವಾಯುದೇವ

**ಸ**

ಸತ್ತಾ = ಇರುವಿಕೆ, ಅಸ್ತಿತ್ವ
ಸತ್ಯವತೀಸುತ = ವೇದವ್ಯಾಸ
ಸುಷ್ಠು = ಉತ್ತಮವಾದ
ಸೂರಿ = ಜ್ಞಾನಿ
ಸೋಮ = ಚಂದ್ರ

**ಹ**

ಹನನ = ನಾಶ
ಹರಣ = ನಾಶಕ, ದೇಹ
ಹಸ್ತಿವರದ = ಗಜೇಂದ್ರವರದ
ಹಾಟಕ = ಬಂಗಾರ, ಚಿನ್ನ

## ವರದ ವಿಠಲರು

ಅ

ಅಕ್ಕಜ = ಅಸೂಯೆ
ಅಮರತರು = ಕಲ್ಪವೃಕ್ಷ
ಅರಿದರ = ಚಕ್ರಶಂಖ

ಆ

ಅಘ = ಪಾಪ
ಆಖಂಡಲ = ಇಂದ್ರ

ಇ

ಇಭ = ಆನೆ

ಕ

ಕದಪು = ಕೆನ್ನೆ
ಕದ್ರುಸುತರು = ನಾಗಗಳು
ಕಳತ್ರ = ಹೆಂಡತಿ, ಪತ್ನಿ
ಕಾಯಜ = ಮನ್ಮಥ
ಕುಂದಕುಟ್ಮಲ = ಮಲ್ಲಿಗೆಮೊಗ್ಗು
ಕುಂದಮುಕುಳ = ಮಲ್ಲಿಗೆಮೊಗ್ಗು
ಕುಲಿಶ = ಬೆಟ್ಟ
ಕೇಣ = ಕೋಪ
ಕ್ಷಮೆ = ಭೂದೇವಿ

ಖ

ಖಂಡಪರಶು = ಶಿವ
ಖಗವರ = ಗರುಡ

ಗ

ಗೇಹ = ಮನೆ
ಗೋತ್ರ = ಬೆಟ್ಟ

ಜ

ಜಲಜಬಾಂಧವ = ಸೂರ್ಯ

ದ

ದರಹಸಿತ = ಮಂದಸ್ಮಿತ, ಮುಗುಳ್ನಗೆಯುಳ್ಳ
ದಾಮ = ಹಗ್ಗ
ದಿನೇಶ = ಸೂರ್ಯ
ದುರ್ಧರ್ಶನ = ಎದುರಿಲ್ಲದವ
ದ್ವಿರದ = ಆನೆ
ಧರಾಮರ = ಭೂಸುರ
ಧಾರಾಧರಾಭ = ನೀಲಮೇಘದಂತೆ ಕಾಂತಿಯುಳ್ಳ
ಧುರ = ಯುದ್ಧ

ನ

ನಕ್ರ = ಮೊಸಳೆ
ನರಪೌತ್ರ = ಅರ್ಜುನನ ಮೊಮ್ಮಗ ಪರೀಕ್ಷಿದ್ರಾಜ
ನವನೀತ = ಬೆಣ್ಣೆ
ನಿಗಳ = ಸಂಕೋಲೆ, ಸರಪಳಿ
ನಿಶಾಟದಲ್ಲಣ = ದೈತ್ಯರ ವೈರಿ
ನಿಸ್ತುಲ = ಅಸಮಾನ
ನೀಲಲೋಹಿತ = ಶಿವ

ಪ

ಪೃಥು = ಕುಂತೀದೇವಿ
ಪಾಕರಿಪು = ಇಂದ್ರ
ಪಾಟಿ = ಸಮಾನ
ಪಾರಾವಾರ = ಸಮುದ್ರ, ಸಾಗರ
ಪೀತದನುಜ = ಹಿರಣ್ಯಾಕ್ಷ / ಹಿರಣ್ಯಕಶಿಪು (?)

ಪುಂಡರೀಕ = ಕಮಲ
ಪುರುಹೂತ = ಇಂದ್ರ
ಪೂತೆ = ಪವಿತ್ರಳು

ಬ

ಬಲರಿಪು = ಇಂದ್ರ
ಬಿಂಬಫಲಾಧರೆ= ತೊಂಡೆಹಣ್ಣಿನಂತೆ ಕೆಳ ದುಟಿಯುಳ್ಳವಳು
ಭರಣ = ಪೋಷಣೆ
ಭರ್ಗ = ಶಿವ
ಭಾಗದೇಯ = ಭಾಗ್ಯ
ಭುಜಂಗ = ಶೇಷ
ಭೂಜ = ವೃಕ್ಷ

ಮ

ಮಕರಾಂಕ = ಮನ್ಮಥ
ಮಜ್ಜನ = ಸ್ನಾನ

ರ

ರಥಾಂಗ = ಚಕ್ರ

ವ

ವಾರಣ = ಆನೆ, ಗಜೇಂದ್ರ
ವಾರಣ ಮುಖ= ಗಜಾನನ
ವಾರಾಂಗನೆ = ದೇವದಾಸಿ
ವಾಸರೇಶ = ದಿನೇಶ, ಸೂರ್ಯ
ವಿಧೃತ
ಕೋದಂಡ = ಕೋದಂಡ ಪಾಣಿ, ರಾಮು
ವಿಹಂಗ ತುರಂಗ = ಗರುಡ ವಾಹನ
ವೀರಾಜ = ಗರುಡ

ಶ

ಶಂಬರಾರಿ = ಮನ್ಮಥ
ಶರ್ವ = ಶಿವ

ಸ

ಸಂಕ್ರಂದನ = ಇಂದ್ರ
ಸಲಿಲ = ನೀರು.

# ಅನುಬಂಧ–೨

## ಟಿಪ್ಪಣಿಗಳು

## ಮುದ್ದುಮೋಹನವಿಠಲರು

೧

ಇದು ಉಡುಪಿ ಕೃಷ್ಣನನ್ನು ಕುರಿತಾದ ಒಂದು ಉಗಾಭೋಗ, ದೃಢ ಭಕ್ತಿ ಜ್ಞಾನಾದಿಗಳನ್ನು ಕೊಟ್ಟು ರಕ್ಷಿಸೆಂದು ಆರ್ತರಾಗಿ ಕೃಷ್ಣನನ್ನು ಪ್ರಾರ್ಥಿಸಿದ್ದಾರೆ.

೨

"ಏಕೋನಾರಾಯಣಸೀತ್" ಎಂಬ ವೇದವಾಕ್ಯದಿಂದ ಕರೆಸಿಕೊಂಡವನಾಗಿದ್ದು ರಮಾಬ್ರಹ್ಮಾದಿಗಳಲ್ಲಿ ನಿಂತು ಜಗದ್ವ್ಯಾಪಾರ ನಡೆಸುವ ಶ್ರೀಹರಿಯು ತಮ್ಮನ್ನು ಅಂತ್ಯಂತ ಕೀಳಾಗಿ ಪರಿಗಣಿಸಿ ರಕ್ಷಿಸದೆ ಕೈಬಿಡುವುದು ನ್ಯಾಯವಲ್ಲವೆಂದೂ, ಲೌಕಿಕವನ್ನು ಬಿಡಿಸಿ ದರ್ಶನವನ್ನು ಹೃದಯ ಕಮಲದಲ್ಲಿ ಕೊಡೆಂದೂ ಶ್ರೀಹರಿಯನ್ನು ಈ ಉಗಾಭೋಗದಲ್ಲಿ ಪ್ರಾರ್ಥಿಸಿದ್ದಾರೆ.

೩

ಇದು ವಿಠಲನನ್ನು ಕುರಿತು ಸಾಮೂಹಿಕ ಭಜನೆ ಮಾಡಲು ಹೊಂದುವ ಒಂದು ಸ್ತೋತ್ರಪದ . ಯಾವಯಾವ ಸ್ಥಳಗಳಲ್ಲಿ ಯಾವಯಾವ ಸಂದರ್ಭಗಳಲ್ಲಿ ಯಾವಯಾವ ರೀತಿಯಲ್ಲಿ ವಿಠಲನನ್ನು ಭಜಿಸಬೇಕೆಂದು ಹೇಳಿದ್ದಾರೆ.

೪

ಇದು ತಿರುಪತಿ ಸ್ವಾಮಿ ಪುಷ್ಕರಣಿ ತೀರದಲ್ಲಿರುವ ಶ್ರೀನಿವಾಸನನ್ನು ಕುರಿತಾದ ಒಂದು ಸುಳಾದಿ. ಅನೇಕ ಲೌಕಿಕ ಬಂಧನಗಳನ್ನು ಬಿಡಿಸಿ ರಕ್ಷಿಸೆಂದು ಪ್ರರ್ಥಿಸಿದ್ದಾರೆ.

೫

ಪರಮಾತ್ಮನ ಪಾದಸ್ಮರಣೆಯಿತ್ತು ಕಾಪಾಡೆಂದು ಶ್ರೀಲಕ್ಷ್ಮೀದೇವಿಯನ್ನು ಪರಿಪರಿಯಾಗಿ ಪ್ರಾರ್ಥಿಸಿದ್ದಾರೆ.

೬

ಶ್ರೀರುದ್ರದೇವನ ರೂಪಾದಿಗಳನ್ನು ವರ್ಣಿಸಿ ಪರಮಾತ್ಮನನ್ನು ಕಾಣುವ ಮಾರ್ಗ ತೋರಿಸೆಂದು ಪ್ರಾರ್ಥಿಸಿದ್ದಾರೆ.

೭

ಇದು ಶ್ರೀ ಶ್ರೀಪಾದರಾಜರ ಸ್ತೋತ್ರ. ದಾಸಪಂಥದ ಆದ್ಯ ಪ್ರವರ್ತಕರೆಂದು ಪ್ರಸಿದ್ಧರಾದ ಶ್ರೀ ಶ್ರೀಪಾದರಾಜರ ಬೃಂದಾವನವು ಕೋಲಾರ ಜಿಲ್ಲೆಯ ಮುಳಬಾಗಲಿನ ಬಳಿ ನರಸಿಂಹ ತೀರ್ಥವೆಂಬಲ್ಲಿದೆ.

## ತಂದೆ ಮುದ್ದುಮೋಹನವಿಠಲರು

೧

ಶ್ರೀ ಲಕ್ಷ್ಮೀ ನಾರಾಯಣನನ್ನು ಅನೇಕ ಪರ್ಯಾಯ ನಾಮಗಳಿಂದ ಸ್ತೋತ್ರ ಮಾಡಿದ್ದಾರೆ.

೨

ಶ್ರೀ ಮನ್ನಾರಾಯಣನ ಅನೇಕ ರೂಪಗಳನ್ನೂ, ಮತ್ಸ್ಯಾದಿ ದಶಾವತಾರಗಳನ್ನೂ, ಇನ್ನೂ ಅನೇಕ ಅವತಾರಗಳನ್ನೂ ವರ್ಣಿಸಿ, ಸತ್ಸಂಗ, ದುಸ್ಸಂಗ ತ್ಯಾಗ, ಪಾಪನಾಶ, ಪುಣ್ಯವೃದ್ಧಿ, ದೇಹಾಭಿಮಾನ ತ್ಯಾಗ, ಸತ್ಕರ್ಮನಿಷ್ಠೆ, ಶ್ರೀಹರಿಯ ಪಾದಸೇವೆ, ಅಮಲ ಭಕ್ತಿ, ನಿಶ್ಚಲ ಬುದ್ಧಿ, ಅಸಮಾನ್ಯ ಸೇವಾ ಇತ್ಯಾದಿಗಳನ್ನು ಸದಾ ತಮಗೆ ಕೊಡೆಂದು ಪ್ರಾರ್ಥಿಸಿದ್ದಾರೆ.

ಇದು ಸಾಮೂಹಿಕ ಭಜನೆಗೆ ಉಪಯುಕ್ತವಾದ ಒಂದು ಕೃತಿ

೩

ಶ್ರೀ ರಾಮಕೃಷ್ಣಾದಿ ನಾಮಗಳ ಮಹಿಮೆಯನ್ನು ಹೇಳಿದ್ದಾರೆ.

೪

ಇದು ಚೂರ್ಣಿಕೆ ಎನ್ನುವ ಒಂದು ಪದ್ಯ_ಗದ್ಯ ಪ್ರಕಾರ ಅನೇಕ ಅಂತ್ಯಾಕ್ಷರ ಪ್ರಾಸಗಳಿಂದ ಕೂಡಿದ್ದು ಗಟ್ಟಿಯಾಗಿ ಹೇಳುವಾಗ ಕೇಳಲು ಬಹಳ ರಂಜಕವಾಗಿರುತ್ತದೆ.

ತಾವು ಎಲ್ಲಿ ಯಾವ ಕಾರ್ಯದಲ್ಲಿ ಮಗ್ನರಾಗಿದ್ದರೂ ಅವೆಲ್ಲವೂ ಶ್ರೀ ಹರಿಯ ಸೇವೆಯೆಂಬ ಜ್ಞಾನವನ್ನು ಕೊಟ್ಟು, ಅವನ ಉಪಕಾರಸ್ಮರಣೆಯನ್ನು ಯಾವ ಕಾಲಕ್ಕೂ ಮರೆಯದಂತೆ ಇಡೆಂದು ಪರಿಪರಿಯಾಗಿ ಪರಮಾತ್ಮನಲ್ಲಿ ಪ್ರಾರ್ಥನೆ ಸಲ್ಲಿಸಿದ್ದಾರೆ.

೫

ಶ್ರೀ ಹರಿನಾಮಸ್ಮರಣೆಯಲ್ಲಿ ತಮಗಿರುವ ನಿಷ್ಠೆಯನ್ನು ಸ್ಪಷ್ಟಪಡಿಸಿದ್ದಾರೆ.

೬

ರಾಣಿಬೆನ್ನೂರು ಸಮೀಪದ ಕದರುಮಂಡಲಗಿ ಕ್ಷೇತ್ರದಲ್ಲಿರುವ ಶ್ರೀಹನುಮನೇ ತಮಗೆ ಒಡೆಯನೆಂದು ಹೇಳಿಕೊಂಡಿದ್ದಾರೆ. ಕದರುಮಂಡಲಗಿಯಲ್ಲಿ ಶ್ರೀ ಕಾಂತೇಶನೆಂದು ಪ್ರಸಿದ್ಧನಾದ ಹನುಮನ ದೇವಸ್ಥಾನವಿದೆ.

೭

ತಮಗೆ ಎಂದೆಂದಿಗೂ ಅಹಂಕಾರ ಮಮಕಾರಗಳು ಬರದಿರಲೆಂದು ಪ್ರಾರ್ಥಿಸಿದ್ದಾರೆ.

೮

'ಪರಮಪ್ರಿಯ' ರೆಂದು ಬಿರುದಾಂಕಿತರಾದ ತಮ್ಮನ್ನು ಗುರುಗಳೆಂದು ತಿಳಿದವರಿಗೆ ಶ್ರೀಹರಿಯು ಒಲಿಯುವನೆಂದೂ, ತುಮಕೂರಿನ ಬಳಿ ಇರುವ 'ಕರಿಗಿರಿ' ಎಂದು ಪ್ರಸಿದ್ಧವಾಗಿ ಶ್ರೀ ಲಕ್ಷ್ಮೀನರಸಿಂಹ ಕ್ಷೇತ್ರವಾಗಿರುವ ದೇವರಾಯನದುರ್ಗದ ಯಾತ್ರೆ ಮಾಡದವನು ಸಂಸಾರದಲ್ಲಿ ಕಷ್ಟಪಡುವನೆಂದು ಹೇಳಿದ್ದಾರೆ.

೯

ತಾವು ಶ್ರೀವಿಠಲನ ದಾಸರೆಂದು ಹೇಳಿಕೊಂಡಿದ್ದಾರೆ.

೧೦

ಹರಿದಾಸರ ಸಂಗದಿಂದ ತಮಗೆ ಶ್ರೀಹರಿಯ ಸಂಗವಾಯಿತೆಂದು ಹೇಳಿಕೊಂಡಿದ್ದಾರೆ.

೧೧

ಕಲಿ, ಕಲಹಗಳ ವ್ಯಾಪ್ತಿಯನ್ನು ಹೇಳಿದ್ದಾರೆ.

೧೨

ಗುರುವಿನ ಮಹತ್ವವನ್ನು ಹೇಳಿದ್ದಾರೆ.

೧೩

ಶಿಷ್ಯೆಯನ್ನು ಉದ್ದೇಶಿಸಿ ಗುರುವಿನ ಮಹತ್ವವನ್ನು ತಿಳಿಯಪಡಿಸಿದ್ದಾರೆ.

೧೪

ಪರಮಾತ್ಮನ ಅನುಗ್ರಹಪಡೆಯಬೇಕಾದರೆ ಸಜ್ಜನರಿಗೆ ಶ್ರೀಹರಿಯೇ ಮೂರು ಲೋಕಕ್ಕೂ ಒಡೆಯ, ನಾವು ಮಾಡುವ ಕಾರ್ಯಗಳೆಲ್ಲವೂ ಅವನ ಸೇವೆ. ತಾಯಿ ತಂದೆ, ಹೆಂಡತಿ, ಮಕ್ಕಳು ಮೊದಲಾದವರೆಲ್ಲರೂ ಅವನ ಸೇವಕರು ಎಂಬ ಸತ್ಯದ ಅರಿವು ಇರಬೇಕೆಂದು ಹೇಳಿದ್ದಾರೆ.

೧೫

ಒಬ್ಬ ಪತಿವ್ರತಾಸ್ತ್ರೀಯು ಪರಮಾತ್ಮನನ್ನು ಪತ್ಯಂತರ್ಗತನನ್ನಾಗಿ ಭಾವಿಸಿ ಹೇಗೆ ಸೇವಿಸಬೇಕೆಂಬುದನ್ನು ತಿಳಿಸಿದ್ದಾರೆ.

## ಬಾಗೇಪಲ್ಲಿ ಶೇಷದಾಸರು

೧

ಸದ್ಬುದ್ಧಿ, ಭಕ್ತಿಪೂರ್ವಕ ಭಜನೆ, ಸ್ಮರಣೆ, ಜ್ಞಾನ ಇತ್ಯಾದಿಗಳನ್ನು ದಯಪಾಲಿಸಿ ಪಾಪ ಪರಿಹಾರ ಮಾಡೆಂದು ಶ್ರೀ ವಿಷ್ನೇಶ್ವರನಲ್ಲಿ ಪ್ರಾರ್ಥನೆ ಮಾಡಿದ್ದಾರೆ.

೨

ಉತ್ಸವ ಕಾಲದಲ್ಲಿ ಜರಗುವ ಅನೇಕ ಪ್ರಕ್ರಿಯೆಗಳನ್ನು ವಿವರಿಸುವುದರ ಮೂಲಕ ಒಂದು ರಥೋತ್ಸವವನ್ನು ವರ್ಣಿಸಿದ್ದಾರೆ.

೩

ಇದು ಸಾಧನಪುರ (?) ದಲ್ಲಿರುವ ಶ್ರೀನಿವಾಸ । ಕೃಷ್ಣರ ಸ್ತೋತ್ರ

೪

ಶ್ರೀ ಲಕ್ಷ್ಮೀದೇವಿಯು ಶ್ರೀ ಕೃಷ್ಣನಿಗೆ ಆರತಿ ಎತ್ತಿದ್ದನ್ನು ವರ್ಣಿಸಿದ್ದಾರೆ.

೫

ಭಗವಂತನಲ್ಲಿ ಸೌಭಾಗ್ಯಾದಿಗಳನ್ನು ಕೊಟ್ಟು ಕಷ್ಟಬಿಡಿಸೆಂದು ತಾವು ಬೇಡುವುದಿಲ್ಲ–ವೆಂದೂ, ಕೇವಲ ಸತ್ಸಂಗ, ಧ್ಯಾನಾದಿಗಳನ್ನು ಮಾತ್ರ ಕೊಟ್ಟು ರಕ್ಷಿಸಿ ಮಾನ್ಯನೆನಿಸೆಂದೂ ಪ್ರಾರ್ಥನೆ ಮಾಡಿದ್ದಾರೆ. ಅಷ್ಟಭೋಗಗಳು ಈ ಮುಂದಿನಂತೆ ಎರಡು ಪ್ರಕಾರಗಳಲ್ಲಿವೆ:

(೧) ಸುಗಂಧಂ ವನಿತಾ ವಸ್ತ್ರಂ ಗೀತಂ ತಾಂಬೂಲ ಭಕ್ಷಣಂ ಶಯ್ಯಾಚ ಭೂಷಣಂದಾನ ಮಷ್ಟಭೋಗಾ ಪ್ರಕೀರ್ತಿತಾ (ಸುಗಂಧದ್ರವ್ಯಗಳು, ಸ್ತ್ರೀ, ಉತ್ತಮ ಬಟ್ಟೆಗಳು, ಸಂಗೀತ, ತಾಂಬೂಲ, ಉತ್ತಮ ಹಾಸುಗೆ, ಆಭರಣಗಳು ಮತ್ತು ದಾನ ಮಾಡಲು ವಸ್ತುಗಳು)

(೨) ಮನೆ, ಹಾಸುಗೆ, ವಸ್ತ್ರ, ಆಭರಣ, ಸ್ತ್ರೀ, ಪುಷ್ಪ, ಗಂಧ ಮತ್ತು ತಾಂಬೂಲ.

೬

ಗಜೇಂದ್ರನ್ನು ಕಾಪಾಡಿದ ಶ್ರೀಪಿಷ್ಣುವನ್ನು ಸ್ತೋತ್ರ ಮಾಡಿದ್ದಾರೆ.

೭

ಭಗವಂತನ ಅಂಗಾಂಗಗಳನ್ನು ವರ್ಣಿಸಿ ದಯಮಾಡೆಂದು ಕೋರಿದ್ದಾರೆ.

೮

ಭಗವಂತನನ್ನು ಪರಿಪರಿಯಾಗಿ ಪ್ರಾರ್ಥಿಸಿ ಸಲಹೆಂದು ಕೋರಿದ್ದಾರೆ.

೯

ಜೀವನವು ಸಾರ್ಥಕವಾಗಬೇಕಾದರೆ ಎಂತಹದೇಹವಿರಬೇಕೆಂಬುದನ್ನು ನೀಷೇಧ ರೂಪದಲ್ಲಿ ವರ್ಣಿಸಿದ್ದಾರೆ.

೧೦

ಶ್ರೀ ರಾಮನ ರೂಪವನ್ನು ವರ್ಣಿಸಿ ಸ್ತೋತ್ರ ಮಾಡಿದ್ದಾರೆ. ಶ್ರೀ ವಿಷ್ಣುವಿನ ಎದೆಯ ಮೇಲಿರುವ ಶ್ರೀ ಲಕ್ಷ್ಮೀ ಸಾಂಕೇತಿಕವಾದ ಮಚ್ಚೆಯನ್ನು ಶ್ರೀವತ್ಸವೆನ್ನುತ್ತಾರೆ.

೧೧

ಭಕ್ತಜನರ ಕಾಟವನ್ನು ತಪ್ಪಿಸಿಕೊಳ್ಳಲು ದುರ್ಗಮವಾದ ಬೆಟ್ಟವನ್ನು ಸೇರಿದವನೆಂದು ವಿಡಂಬನ ಮಾಡಿ ಶ್ವೇತಾದ್ರಿ (ಬಿಳಿಗಿರಿ) ಯಲ್ಲಿರುವ ರಂಗನನ್ನುಸ್ತೋತ್ರ ಮಾಡಿ ಕಾಪಾಡೆಂದು ಕೇಳಿಕೊಂಡಿದ್ದಾರೆ.

೧೨

ಇದು ಒಂದು ರಥೋತ್ಸವವನ್ನು ವರ್ಣಿಸುವ ಪದ.

೧೩

ಶ್ರೀನಾರಾಯಣನು ಬಳೆಗಾರನಾಗಿ ಶ್ರೀ ಲಕ್ಷ್ಮೀದೇವಿಗೆ ಬಳೆ ತೊಡಿಸಿದ್ದು ಈ ಪದದಲ್ಲಿ ಚಿತ್ರಿತವಾಗಿದೆ. ಈ ಸಂಗ್ರಹಕ್ಕೆ ಆಕರಗಳಾದ ಹಸ್ತಪ್ರತಿಗಳಲ್ಲಿ ಸ್ವಲ್ಪ ಪಾಠಭೇದಗಳಿದ್ದು ಅವನ್ನು ಪದದ ಕೆಳಗೇ ಸೂಚಿಸಲಾಗಿದೆ.




೧೪

ಶ್ರೀ ರಾಮನ ಪರವಾದ ಈ ಪದದಲ್ಲಿ ದಶಾವತಾರಗಳ ವರ್ಣನೆ ಇದೆ. ಮೂಲ ಆಕರಗಳಲ್ಲಿ ಪಾಠಾಂತರಗಳಿದ್ದು, ಅವುಗಳನ್ನು ಪದದ ಕೆಳಗೇ ಸೂಚಿಸಲಾಗಿದೆ.

೧೫

ಧೀರನಾದ ಕೃಷ್ಣನು ನಾರಿಯರಿಗೆ ಹೆದರಿ ಬರದಿರುವುದಕ್ಕೆ ಕಾರಣಗಳನ್ನು ಊಹಿಸಿ ವಿಡಂಬನೆ ಮಾಡಿದ್ದಾರೆ.

೧೬

ಏತದ ಭಾವಿಯ ಇಳಿಜಾರಿಗೆ (ಬಾರಿಗೆ) ಬಿದ್ದವನಂತೆ ಸಮತೋಲನವನ್ನು ಕಳೆದುಕೊಂಡಿರುವವನಿಗೆ ದರ್ಶನ ಭಾಗ್ಯಕೊಡೆಂದು ಪ್ರಾರ್ಥಿಸಿದ್ದಾರೆ.

೧೭

ಹೊರಗಿರುವ ಶ್ರೀ ಹರಿಯು ಒಳಗೆ (ಅಂತರಂಗಕ್ಕೆ) ಏಕೆ ಬರುತ್ತಿಲ್ಲವೆಂದು ಪ್ರಶ್ನಿಸಿಕೊಂಡು, ದಶಾವತಾರಗಳನ್ನು ವರ್ಣಿಸಿ ಸ್ತೋತ್ರ ಮಾಡಿದ್ದಾರೆ. ಒಂದು ದಿನ ದಾಸರು ಮನೆಯೊಳಗೆ ಪೂಜೆಮಾಡುತ್ತಿದ್ದಾಗ ಮನೆಯ ಹೊರ ಬಾಗಿಲಿನ ಬಳಿ ಬಾಲರೂಪಿ ಶ್ರೀಕೃಷ್ಣನು ಬಂದು ನಿಂತಂತೆ ಕಂಡು ಅದೃಶ್ಯವಾದಾಗ ರಚಿತವಾದ ಪದವಿದೆಂದು ಅವರ ವಂಶಸ್ಥರಲ್ಲಿ ಐತಿಹ್ಯವಿದೆ.

೧೮

ಗುಣರೂಪಗಳನ್ನು ವರ್ಣಿಸುವುದರ ಮೂಲಕ ರಾಧಕೃಷ್ಣನನ್ನು ಸ್ತೋತ್ರ ಮಾಡಿದ್ದಾರೆ.

೧೯

ಒಬ್ಬಳು ತನ್ನ ಸಖಿಯರನ್ನು ಉದ್ದೇಶಿಸಿ ಶ್ರೀ ರಾಮನು ರಾವಣನ ಸಂಹಾರ ಮಾಡಿ ಸೀತಾ ಸಮೇತ ಅಯೋಧ್ಯಾಪಟ್ಟಣ ಪ್ರವೇಶ ಮಾಡುವುದನ್ನೂ, ಪಟ್ಟಾಭಿಷೇಕ ಮಾಡಿಕೊಳ್ಳುವುದನ್ನೂ ನೋಡಲು ಕಾತುರತೆಯಿಂದ ಕರೆಯುವ ಸನ್ನಿವೇಶ ಇಲ್ಲಿ ವರ್ಣಿತವಾಗಿದೆ.

೨೦

ಶ್ರೀ ಹರಿಗೆ ಶ್ರೀ ಲಕ್ಷ್ಮೀ ದೇವಿಯು ತಾಂಬೂಲವನ್ನು ಕೊಡುವ ಸನ್ನಿವೇಶ ಇಲ್ಲಿ ವರ್ಣಿತವಾಗಿದೆ.

೨೧

ಶ್ರೀ ಹರಿಗೆ ಶ್ರೀ ಲಕ್ಷ್ಮೀದೇವಿಯು ಹಾರಹಾಕುವ ಸನ್ನಿವೇಶ ಈ ಪದದಲ್ಲಿ ಚಿತ್ರಿತವಾಗಿದೆ.

೨೨

ರುಕ್ಮಿಣಿಯನ್ನು ಸಖಿಯರು ಹಸೆಗೆ ಕರೆಯುವ ಸನ್ನಿವೇಶ ಆಕೆಯ ಗುಣ ರೂಪಗಳನ್ನು ವಿವರಿಸುವುದರ ಮೂಲಕ ವರ್ಣಿತವಾಗಿದೆ.

೨೩

ಇದು ರುಕ್ಮಿಣಿಯ ಸ್ತೋತ್ರ ಈ ಪದದ ಎರಡನೆಯ ನುಡಿ ದೊರೆತಿಲ್ಲ.

೨೪

ಇದು ಶ್ರೀಲಕ್ಷ್ಮೀದೇವಿಯ ಮಹಿಮೆಯನ್ನು ವರ್ಣಿಸಿ ಮಾಡಿರುವ ಸ್ತೋತ್ರ. ಈ ಪದದಲ್ಲಿ ಉಲ್ಲೇಖಿಸಿರುವ 'ಶೆಟ್ಟಿಕೆರೆ' ಮತ್ತು 'ಮದಗೊಂಡನಪುರಿ' ಯಾವುವೆಂಬುದು ನಿರ್ದಿಷ್ಟವಾಗಿ ತಿಳಿದಿಲ್ಲ. ಶೆಟ್ಟಿಕೆರೆಯು ಬಾಗೇಪಲ್ಲಿಯ ಸಮೀಪದಲ್ಲಿರುಬಹುದಾದರೂ ಯಾವುದೋ ಊರನ್ನು ಪರ್ಯಾಯ ಪದದಿಂದ 'ಮದಗೊಂಡನ ಪುರಿ' ಎಂದಿರಬಹುದೆಂದು ತೋರುತ್ತದೆ. ದೊಡ್ಡಬಳ್ಳಾಪುರದ ಸಮೀಪದಲ್ಲಿ 'ಮದಗೊಂಡನ ಪುರಿ' ಎಂಬ ಒಂದು ಊರಿರುವ ಹಾಗಿದೆ.

೨೫

ಶ್ರೀ ಲಕ್ಷ್ಮೀಪರವಾದ ಈ ಪದವು ದಾಸರ ಅತ್ಯಂತ ಪ್ರಚಲಿತ ಹಾಗೂ ಜನಪ್ರಿಯ ಪದವಾಗಿದ್ದು, ಕೆಲವು ಕಡೆ ಮುದ್ರಿತವೂಆಗಿದೆ. ಆದರೆ ಪಾಠಗಳಲ್ಲಿ ವ್ಯತ್ಯಾಸವಿದ್ದು ಕೆಲವು ಕಡೆ ತಪ್ಪಾಗಿ 'ಶ್ರೀಶ ವಿಠಲ' ಮುದ್ರಿಕೆಯಲ್ಲೂ ಹೇಳುವುದು ಕಂಡುಬಂದಿದೆ. ಇಲ್ಲಿ ಕೊಟ್ಟಿರುವ ಪಾಠವು ಶ್ರೀ ಶೇಷದಾಸರ ನೇರ ಶಿಷ್ಯರಾದ ಶ್ರೀನಿಧಿಮೋಹನವಿಠಲಾಂಕಿತರಾದ ನಂದಗುಡಿ ಶ್ರೀ ಶ್ಯಾಮದಾಸರ ಹಸ್ತಪ್ರತಿಯ ಮೇಲೆ ಆಧಾರಿತವಾಗಿದ್ದು, ಈ ಪಾಠವನ್ನೇ ಅಧಿಕೃತ ಪಾಠವಾಗಿ ಪರಿಗಣಿಸಬೇಕು.

೨೬

ಇದು ಶ್ರೀ ಪ್ರಾಣದೇವನ ಸ್ತೋತ್ರ, ಅವನ ಹನುಮ, ಭೀಮ ಮತ್ತು ಮಧ್ವಾವತಾರಗಳು ಇಲ್ಲಿ ವರ್ಣಿತವಾಗಿವೆ.

## ೨೭

ಇದು ಬಾಗೇಪಲ್ಲಿ (ಭಾಗ್ಯಪುರಿ) ಸಮೀಪ ಹರಿಯುವ ಚಿತ್ರಾವತೀನದಿ ತೀರದಲ್ಲಿರುವ ಶ್ರೀ ಪ್ರಾಣದೇವರ ಸ್ತೋತ್ರ. ರಥ ಅಥವಾ ಪಲ್ಲಕ್ಕಿ ಉತ್ಸವಕ್ಕೆ ಸಂಬಂಧಿಸಿರುವಂತಿದೆ.

## ೨೮

ಈ ಪದವೂ ಸಹ ಬಾಗೇಪಲ್ಲಿ ಸಮೀಪದ ಚಿತ್ರಾವತೀನದಿ ತೀರದಲ್ಲಿರುವ ಶ್ರೀ ಪ್ರಾಣದೇವರ ಸ್ತೋತ್ರ.

## ೨೯

ಶ್ರೀ ಬ್ರಹ್ಮನ ರಾಣಿಯಾದ ಶ್ರೀ ಸರಸ್ವತಿಯನ್ನು ಸ್ತೋತ್ರಮಾಡಿ ಶ್ರೀಹರಿಯನ್ನು ತೋರಿಸೆಂದು ಕೋರಿದ್ದಾರೆ.

## ೩೦

ಇದು ಶ್ರೀ ಮಾರುತಿಯ ಸತಿಯಾದ ಶ್ರೀ ಭಾರತೀದೇವಿಯ ಸ್ತೋತ್ರ. ದ್ವೈತ ಸಿದ್ಧಾಂತದ ಒಂದು ಪ್ರಮುಖ ಪ್ರಮೇಯವಾಗಿದ್ದು ಪಂಚಭೇದವೆನಿಸಿಕೊಳ್ಳುವ ಜೀವ_ಈಶ, ಜೀವ_ಜಡ, ಜಡ–ಈಶ, ಜೀವ_ಜೀವ ಮತ್ತು ಜಡ_ಜಡ ಇವುಗಳಲ್ಲಿರುವ ಭೇದದ ಜ್ಞಾನವನ್ನೂ, ತಾರತಮ್ಯವೆಂಬ ಮತ್ತೊಂದು ಮುಖ್ಯ ಪ್ರಮೇಯದ ಎಂದರೆ ಜೀವ ಮತ್ತು ಜಡಗಳಲ್ಲಿ ಸಹ ತಮ್ಮತಮ್ಮೊಳಗೇ ಇರುವ ತರ–ತಮಗಳ ಜ್ಞಾನ–ಚಿಂತನೆಗಳನ್ನೂ ಕೊಟ್ಟು ಶ್ರೀ ಹರಿಯನ್ನು ತೋರಿ ಮುಕ್ತಿಗೆ ಮಾರ್ಗಮಾಡಿ ಕೊಡೆಂದು ಪ್ರಾರ್ಥಿಸಿದ್ದಾರೆ.

## ೩೧

ಇದು ಉಮೆಯ ಪತಿಯಾದ ಶ್ರೀ ರುದ್ರನಸ್ತೋತ್ರ. ಶ್ರೀಹರಿಯ ದಾಸನನ್ನಾಗಿಸಿ ಸಂತೋಷಗೊಳಿಸೆಂದು ಪ್ರಾರ್ಥಿಸಿದ್ದಾರೆ.

## ೩೨

ಇದು ಶ್ರೀ ವ್ಯಾಸತೀರ್ಥರ ಆಶ್ರಮ ಗುರುಗಳಾದ ಶ್ರೀ ಬ್ರಹ್ಮಣ್ಯತೀರ್ಥರ ಸ್ತೋತ್ರಪದ. ಇವರ ಬೃಂದಾವನವು ಚನ್ನಪಟ್ಟಣದ ಸಮೀಪದಲ್ಲಿ ಕಣ್ವನದಿಯ ತೀರದ ಅಬ್ಬೂರಿನಲ್ಲಿದೆ. ಅಬ್ಬೂರನ್ನು ಬ್ರಹ್ಮಣ್ಯಪುರವೆಂದೂ ಕರೆಯುತ್ತಾರೆ.

ಶ್ರೀ ವ್ಯಾಸರಾಜ ಮಠದ ಪರಂಪರೆಯು ಶ್ರೀ ಬ್ರಹ್ಮಣ್ಯತೀರ್ಥರು ಶ್ರೀ ಪುರುಷೋತ್ತಮತೀರ್ಥರ ಕರಸಂಜಾತರು. ಶ್ರೀ ವ್ಯಾಸತೀರ್ಥರು ಜನಿಸಿದಾಗ ಭೂಸ್ಪರ್ಶವಾಗದಂತೆ ಶಿಶುವನ್ನು ಚಿನ್ನದ ಹರಿವಾಣದಲ್ಲಿ ತರಿಸಿಕೊಂಡು ಕಣ್ವನದಿಯ ನೀರನಿಂದ ಶುದ್ಧಪಡಿಸಿ ತಾವೇ ಶಿಷ್ಯನನ್ನು ಸಾಕಿದರೆಂದು ಐತಿಹ್ಯವಿದೆ. ಇದರ ಉಲ್ಲೇಖ ಈ ಪದದಲ್ಲಿದೆ.

## ಕೃಷ್ಣ ವಿಠಲದಾಸರು

೧

ಶ್ರೀ ಗಣಪತಿಯನ್ನು ಶ್ರೀ ಹರಿಯ ನಾಭಿ ಪ್ರದೇಶದಲ್ಲಿರುವವನೆಂದೂ, ವಾಯುದೇವರ ಆವೇಶ ಉಳ್ಳವನೆಂದೂ, ಆಕಾಶ ತತ್ವಕ್ಕೆ ಅಭಿಮಾನಿ ದೇವತೆಯೆಂದೂ ಇನ್ನೂ ಅನೇಕ ರೀತಿಗಳಲ್ಲಿ ಸ್ತುತಿಸಿ ಮಂಗಳವೆಂದಿದ್ದಾರೆ.

೨

ರೂಪ, ಮಹಿಮೆಗಳನ್ನು ವರ್ಣಿಸಿ ವಿಘ್ನೇಶ್ವರನನ್ನು ಸ್ತುತಿಸಿದ್ದಾರೆ. ಚಾರುದೇಷ್ಣ ಎಂಬುದು ಕೃಷ್ಣ–ರುಕ್ಮಿಣಿಯರ ಮಗನಾಗಿ ಜನಿಸಿದ ಗಣೇಶನ ಅವತಾರ.

೩

ಇದು ಒಂದು ದ್ವೈತ ಸಿದ್ಧಾಂತದ ಅನೇಕ ಪ್ರಮೇಯ–ಗಳನ್ನೊಳಗೊಂಡ ಪದ ಶ್ರೀಹರಿಯ ಸರ್ವ ಕರ್ತೃತ್ವ, ಪರಿಪೂರ್ಣತ್ವ, ಸರ್ವೋತ್ತಮತ್ವ ಇತ್ಯಾದಿಗಳನ್ನು ಹೇಳಿದ್ದಾರೆ.

೪

ಶ್ರೀಹರಿಯ ಅನೇಕ ಅವತಾರ ಲೀಲೆಗಳನ್ನು, ಮಹಿಮೆಗಳನ್ನು ವರ್ಣಿಸಿ ಅದ್ಭುತವೆಂದೂ ಆಶ್ಚರ್ಯ ವ್ಯಕ್ತಪಡಿಸಿದ್ದಾರೆ.

೫

ಮೂರೇ ತಾಳಗಳುಳ್ಳ ಈ ಸುಳಾದಿಯಲ್ಲಿ ಲೋಕ ವಾರ್ತೆಯನ್ನು ಬಿಡಿಸಿ ನಿನ್ನ ವಾರ್ತೆಯನ್ನು ತಿಳಿಸೆಂದು ಶ್ರೀಕೃಷ್ಣನನ್ನು ಕೇಳಿದ್ದಾರೆ.

೬

ಕೃಷ್ಣನ ಪಾದವನ್ನೇ ನಂಬಿರುವ ಭಕ್ತರು ಎಲ್ಲಿದ್ದರು ಯಾವ ಸಂದರ್ಭದಲ್ಲೂ ಅವರಿಗೆ ಭಯವಿಲ್ಲವೆಂದೂ ಆಶ್ವಾಸನೆ ಕೊಟ್ಟಿದ್ದಾರೆ.

೭

ಈ ಪದದಲ್ಲಿ ಭಾಗವತದಲ್ಲಿ ಬರುವ ಶ್ರೀಹರಿಯ ಅನೇಕ ರೂಪಾವತಾರಗಳನ್ನು ಉಲ್ಲೇಖಿಸಿ ಅವನ ಲೀಲಾ ವಿಶೇಷಗಳನ್ನು ವರ್ಣಿಸಿ ಸ್ತುತಿಸಿದ್ದಾರೆ.

೮

ಶ್ರೀ ಹರಿಯ ನಾನಾ ವ್ಯಾಪಾರಗಳನ್ನೂ, ಅವತಾರಾದಿಗಳಲ್ಲಿ ಮಾಡಿದ ಕಾರ್ಯಗಳನ್ನೂ ವರ್ಣಿಸಿ ಅವನನ್ನೇ ಮೊರೆಹೊಕ್ಕು ಮುಕ್ತಿಯನ್ನು ಪಡೆಯರೆಂದಿದ್ದಾರೆ.

೯

ಅನೇಕ ಸಂದರ್ಭಗಳನ್ನು ಸೂಚಿಸಿ ಏನೇ ಆದರೂ ಕೃಷ್ಣನನಲ್ಲದೇ ಬೇರೆ ಯಾವ ಪ್ರಭುವನ್ನೂ ಒಪ್ಪಿಕೊಳ್ಳಲಾರೆನೆಂದಿದ್ದಾರೆ. ಶ್ರೀಹರಿಯ ಮಹಿಮೆಗಳನ್ನು ಹೇಳುತ್ತಾ "ಏಕೋ ವಿಷ್ಣುರ್ಮಹಭೂತಃ" ಎಂಬ ವೇದ ವಾಕ್ಯವನ್ನು ಉಲ್ಲೇಖಿಸಿದ್ದಾರೆ.

೧೦

ಕೃಷ್ಣರಾಮಾವತಾರಗಳ ಲೀಲಾ ವಿಶೇಷಗಳನ್ನೂ ಶ್ರೀಹರಿಯ ಇನ್ನೂ ಅನೇಕ ಅವತಾರಗಳನ್ನೂ ವರ್ಣಿಸಿದ್ದಾರೆ.

೧೧

ಭವಸಾಗರದಲ್ಲಿ ತೊಳಲುತ್ತಿರುವವನಿಗೆ ದರ್ಶನಕೊಡೆಂದು ಕೃಷ್ಣನನ್ನು ಪ್ರಾರ್ಥಿಸಿದ್ದಾರೆ.

೧೨

ಕೃಷ್ಣನನ್ನು ಬಿಟ್ಟರೆ ತಮ್ಮನ್ನು ಕಾಪಾಡುವವರು ಬೇರೆ ಯಾರು ಇಲ್ಲವಾದ್ದರಿಂದ ತಮ್ಮಲ್ಲಿರುವ ದೋಷಗಳನ್ನೆಣಿಸದೆ ಕಾಪಾಡೆಂದು ಪ್ರಾರ್ಥಿಸಿದ್ದಾರೆ.

೧೩

ಅನೇಕ ಕೋಟಲೆಗಳಿಗೆ ಒಳಗಾಗಿರುವವನನ್ನು ಕೈಬಿಡದೆ ರಕ್ಷಿಸಬೇಕೆಂದು ಕೃಷ್ಣನನ್ನು ಪ್ರಾರ್ಥಿಸಿದ್ದಾರೆ.

೧೪

ಇದು ಒಂದು ಅಣು ವೆಂಕಟೇಶ ಕಲ್ಯಾಣ. ಸಮಗ್ರ ಶ್ರೀನಿವಾಸ ಕಲ್ಯಾಣದ ಕಥೆಯನ್ನು ಕೆಲವೇ ನುಡಿಗಳಲ್ಲಿ ನಿರೂಪಿಸಿದ್ದಾರೆ.

೧೫

ವಿಠಲನನ್ನೇ ನಂಬಿರುವ ತಮ್ಮನ್ನು ಕಾಪಾಡಬೇಕೆಂದು ಪ್ರಾರ್ಥಿಸಿದ್ದಾರೆ.

೧೬

ದಾಸರನ್ನು ವಿಶೇಷವಾಗಿ ಅನುಗ್ರಹಿಸಿರುವ ಶ್ರೀಜಯತೀರ್ಥ (ಟೀಕಾಚಾರ್ಯ)ರ ಅಂತರಂಗ ಸ್ಥಾಯಿಯಾದ ಕೃಷ್ಣನನ್ನು ಸ್ತೋತ್ರ ಮಾಡಿದ್ದಾರೆ.

೧೭

ಶ್ರೀಹರಿಯ ದಶಾವತಾರಗಳನ್ನು ವರ್ಣಿಸಿ ಅವುಗಳಲ್ಲಿ ದೋಷಗಳನ್ನೇ ಕಂಡು ಎತ್ತಿ ಹೇಳುವ ಒಂದು ನಿಂದಾ ಸ್ತುತಿ.

೧೮

ದಾಸರು ತಮ್ಮ ಅಂಕಿತ ಪ್ರತಿಪಾದ್ಯನಾದ ಶ್ರೀ ತಾಂಡವ ಕೃಷ್ಣ ವಿಠಲನನ್ನು ಸ್ತೋತ್ರ ಮಾಡಿದ್ದಾರೆ.

೧೯

ಇದು ಶ್ರೀಹರಿಯ ವೇದವ್ಯಾಸ ರೂಪದ ಸ್ತೋತ್ರ. ವೇದವ್ಯಾಸರು ಕ್ರಮಿಯಿಂದ ರಾಜ್ಯವಾಳಿಸಿದ್ದನ್ನು ಉಲ್ಲೇಖಿಸಿ ಅಲ್ಪರಾದ ತಮ್ಮನ್ನು ಉದ್ಧರಿಸ ಬೇಕೆಂದಿದ್ದಾರೆ.

೨೦

ಶ್ರೀಹರಿಯ ಮಹಿಮೆಯನ್ನು ತಿಳಿಯದೆ ಅವನಿಗೆ ದ್ರೋಹವೆಸಗಿರುವುದರಿಂದ ತಮಗೆ ಜ್ಞಾನಭಕ್ತ್ಯಾದಿಗಳನ್ನು ಕೊಟ್ಟು ಸಲಹೆಂದು ಕೃಷ್ಣನನ್ನು ಪ್ರಾರ್ಥಿಸಿದ್ದಾರೆ.

೨೧

ಕೃಷ್ಣನನ್ನು ಅವನ ಅನೇಕ ಅವತಾರಾದಿಗಳನ್ನೂ, ಮಹಿಮೆಗಳನ್ನು ವರ್ಣಿಸುವುದರ ಮೂಲಕ ಸ್ತೋತ್ರ ಮಾಡಿದ್ದರೆ.

೨೨

ಶ್ರೀನರಹರಿಯನ್ನೂ, ಅವನ ಮಹಿಮೆಗಳನ್ನೂ ತಾವು ನಂಬಿರುವುದರಿಂದ ತಮ್ಮಲ್ಲಿರುವ ದೊಷಗಳನ್ನು ಮನ್ನಿಸಿ ಪ್ರಸನ್ನನಾಗೆಂದಿದ್ದಾರೆ.

೨೩

ಈ ಪದದಲ್ಲಿ ಮಧ್ವಮತದ ಮುಖ್ಯ ಪ್ರಮೇಯಗಳಾದ ಹರಿ ಸರ್ವೋತ್ತಮತ್ವ, ವಾಯುಜೀವೋತ್ತಮತ್ವ, ಜಗತ್‌ಸತ್ಯತ್ವ, ಮತ್ತು ಜೀವ, ಈಶ, ಜಡ ಇವುಗಳಲ್ಲಿರುವ ಪರಸ್ಪರ ಭೇದ ಮತ್ತು ಜೀವರುಗಳು ಮತ್ತು ಜಡಗಳಲ್ಲಿ ತಮ್ಮತಮ್ಮೊಳಗೆ ಇರುವ ಭೇದ ಮತ್ತು ತಾರತಮ್ಯ, ಪರಮಾತ್ಮನ ಸರ್ವತಂತ್ರ ಸ್ವತಂತ್ರತ್ವ, ಜೀವ ಜಡಗಳ, ಅಸ್ವಾತಂತ್ರತ್ವ ಇತ್ಯಾದಿಗಳು ನಿರೂಪಿಸಲ್ಪಟ್ಟಿವೆ.

೨೪

ಐಹಿಕದಲ್ಲಿ ಬಿದ್ದು ಬಳಲಿ ಬೆಂಡಾದ ತಮಗೆ ಯಾವ ಬಲವೂ ಇಲ್ಲವಾದ್ದರಿಂದ ಕೈಹಿಡಿದು ನಡೆಸೆಂದು ಕೃಷ್ಣನನ್ನು ಪ್ರಾರ್ಥಿಸಿದ್ದಾರೆ.

೨೫

ತಾವು ಶ್ರೀಹರಿಯನ್ನು ಮರೆತರೂ ಅವನು ತಮ್ಮನ್ನು ಮರೆಯದೆ ಕಾಪಾಡಬೇಕೆಂದೂ ಅನೇಕ ಪುರಾಣಪ್ರಸಂಗಗಳನ್ನೂ ಉಲ್ಲೇಖಿಸುವುದರ ಮೂಲಕ ಪ್ರಾರ್ಥಿಸಿದ್ದಾರೆ.

೨೬

ಗುಣ, ರೂಪ, ಮಹಿಮೆಗಳನ್ನು ಹೇಳಿ ನಾರಾಯಣನನ್ನು ಸ್ತುತಿಸಿದ್ದಾರೆ.

೨೭

ತನ್ನ ಸ್ಮರಣೆಯನ್ನು ಕೊಡದೆ ಐಹಿಕದಲ್ಲಿ ವ್ಯರ್ಥ, ಹಣ, ಮಾನಗಳನ್ನು ಕಳೆದುಕೊಳ್ಳುವಂತೆ ಮಾಡುವುದು ಕೃಷ್ಣನಿಗೆ ತರವಲ್ಲವೆಂದೂ ಇನ್ನಾದರೂ ತಮ್ಮನ್ನು ಕೈಹಿಡಿದೆತ್ತಬೇಕೆಂದು ಪ್ರಾರ್ಥಿಸಿದ್ದಾರೆ.

೨೮

ತಮ್ಮಲ್ಲಿ ಕುಂದುಗಳಿದ್ದರೂ ಸಹ ಗಣನೆಗೆ ತೆಗೆದುಕೊಳ್ಳದೆ ಪೊರೆಯಬೇಕೆಂದೂ ಶ್ರೀಹರಿಯನ್ನು ಪ್ರಾರ್ಥಿಸಿದ್ದಾರೆ.

೨೯

ಕೃಷ್ಣನನ್ನು ಅವನ ಅವತಾರ–ಲೀಲಾ ವಿಶೇಷಗಳನ್ನೂ ವರ್ಣಿಸುವುದರ ಮೂಲಕ ಸ್ತೋತ್ರ ಮಾಡಿದ್ದಾರೆ. ಈ ಪದದಲ್ಲಿ ಅನೇಕ ಶಾಸ್ತ್ರ ಪ್ರಮೇಯಗಳು ಅಡಗಿವೆ.

೩೦

ಶ್ರೀಹರಿಯ ದಶಾವತಾರಾದಿಗಳನ್ನೂ, ಭಾಗವತೋಕ್ತ ಇನ್ನೂ ಅನೇಕ ಅವತಾರಗಳನ್ನೂ, ಅವನ ಗುಣ, ರೂಪ, ಕಾರ್ಯ, ಮಹಿಮೆಗಳನ್ನೂ ಹೇಳಿ ಅವನು ಬರುವ ವೈಭವವನ್ನು ವರ್ಣಿಸಿದ್ದಾರೆ.

೩೧

ಶ್ರೀಹರಿಯ ನಾನಾ ಅವತಾರ ಲೀಲೆಗಳನ್ನು ಉಲ್ಲೇಖಿಸಿ ನಿಂದಾ ರೂಪದಲ್ಲಿ ಸ್ತುತಿ ಮಾಡಿದ್ದಾರೆ.

೩೨

ಶ್ರೀಕೃಷ್ಣನ ರೂಪ ಗುಣಾದಿಗಳನ್ನು ವರ್ಣಿಸಿ ಸ್ತೋತ್ರ ಮಾಡಿದ್ದಾರೆ.

೩೩

ತಮ್ಮ ಮನದೈವವಾದ ಕೃಷ್ಣವಿಠಲನನ್ನೂ ಅವನ ದಶಾವತಾರಾದಿ ರೂಪಗಳನ್ನು ವರ್ಣಿಸುವುದರ ಮೂಲಕ ಸ್ತೋತ್ರ ಮಾಡಿದ್ದಾರೆ.

೩೪

ಶ್ರೀ ಹರಿಯ ಅವತಾರ ರೂಪವಾದ ವೇದವ್ಯಾಸರನ್ನು ಸ್ತೋತ್ರ ಮಾಡಿದ್ದಾರೆ.

೩೫

ಕೃಷ್ಣನ ಬಾಲಲೀಲೆಗಳನ್ನು, ವರ್ಣಿಸಿ ಅವನು ಕೇವಲ ಬಾಲನಲ್ಲವೆಂದೂ ಜಗತ್ತಿನ ಸೃಷ್ಟಿ, ಸ್ಥಿತಿ, ಲಯ, ಕರ್ತನೆಂದೂ ಸ್ತೋತ್ರ ಮಾಡಿದ್ದಾರೆ.

೩೬

ತಮ್ಮಲ್ಲಿ ಅನೇಕ ದೋಷಗಳಿದ್ದಾಗ್ಯೂ ಅವುಗಳನ್ನು ಲೆಕ್ಕಿಸದೆ ತಮ್ಮ ಮನಸ್ಸನ್ನು ಶುದ್ಧಿ ಮಾಡಿ ಸಲಹೆಂದು ಪ್ರಾರ್ಥಿಸಿದ್ದಾರೆ.

೩೭

ತಮ್ಮಲ್ಲಿರುವ ದೋಷಗಳನ್ನು ಮನ್ನಿಸಿ ಮನಸ್ಸಿನ ತಾಪವನ್ನು ನಿವಾರಿಸೆಂದೂ ಶ್ರೀಹರಿಯನ್ನು ಪ್ರಾರ್ಥಿಸಿದ್ದಾರೆ.

೩೮

ಕಲಿಕಾಲದ ಜನರ ನಡವಳಿಕೆಗಳನ್ನು ಕಂಡು ಬೇಸರಪಟ್ಟು ರಂಗನು ಮಲಗಿದ್ದಾನೆಂದು ವಿಡಂಬನ ಮಾಡಿದ್ದಾರೆ.

೩೯

ಅಜ್ಞಾನದಿಂದ ಕೃಷ್ಣನನ್ನು ದೇವರೆಂದು ತಿಳಿಯದೆ ಅವನ ಬಾಲ ಲೀಲಾ ವಿಶೇಷಗಳನ್ನು ಬಣ್ಣಿಸಿ ಅವುಗಳಲ್ಲಿ ಗುಣಗಳನ್ನು ಕಾಣದೆ ದೋಷಗಳನ್ನೇ ಎಣಿಸುತ್ತ ಮೋಸಹೋದೆವೆಂದು ಸಖಿಯರು ತಮ್ಮ ತಮ್ಮಲ್ಲೇ ಅಂದುಕೊಳ್ಳುತ್ತಾ ಪಶ್ಚಾತ್ತಾಪಪಡುವ ಸನ್ನಿವೇಶ ಇಲ್ಲಿ ಸುಂದರವಾಗಿ ವರ್ಣಿತವಾಗಿದೆ.

೪೦

ಶ್ರೀಹರಿಯ ದಶಾವತಾರಾದಿ ಅನೇಕ ರೂಪಗಳನ್ನೂ ಗುಣ, ಮಹಿಮೆ ಮೊದಲಾದುವುಗಳನ್ನೂ ಹೇಳುವುದರ ಮೂಲಕ ಕೈ ಹಿಡಿದು ಉದ್ಧರಿಸೆಂದು ಪ್ರಾರ್ಥಿಸಿದ್ದಾರೆ.

೪೧

ರಂಗನ ಮಹಿಮೆಗಳನ್ನು ಕೊಂಡಾಡಿದ್ದಾರೆ.

೪೨

ಈ ಪದದಲ್ಲೂ ರಂಗನಾಥನ ಮಹಿಮೆಗಳನ್ನು ಕೊಂಡಾಡಿದ್ದಾರೆ.

೪೩

ಶ್ರೀಹರಿಯ ಚತುರ್ವಿಂಶತಿ (೨೪) ನಾಮಗಳನ್ನೂ ದಶಾವತಾರ ಮೊದಲಾದ ರೂಪಗಳನ್ನೂ ಸ್ತುತಿಸಿದ್ದಾರೆ.

೪೪

ಶ್ರೀ ಹರಿಯ ದಶಾವತಾರ ಮೊದಲಾದ ನಾಮಗಳನ್ನು ಹೇಳಿ ಸ್ತುತಿಸಿದ್ದಾರೆ.

೪೫

ಇದು ಶ್ರೀರಾಮನ ಮಹಿಮೆಯನ್ನು ಕೊಂಡಾಡಿರುವ ಪದ.

೪೬

ಶ್ರೀಹರಿಯ ಅನೇಕ ರೂಪ-ಮಹಿಮೆಗಳನ್ನು ಹೇಳಿ ವಂದಿಸೆಂದಿದ್ದಾರೆ.

೪೭

ಶ್ರೀನಿವಾಸನನ್ನು ಅನೇಕ ಪರಿಯಲ್ಲಿ ಸ್ತುತಿಸಿ ಕೈಪಿಡಿ ಎಂದಿದ್ದಾರೆ.

೪೮

ವಿಷ್ಣುವಿನ ಅನೇಕ ಅವತಾರ ರೂಪಗಳನ್ನು ಹೇಳಿ ನಮಿಸಿದ್ದಾರೆ.

೪೯

ಶ್ರೀ ಹರಿಯ ಚತುರ್ವಿಂಶತಿ(೨೪) ನಾಮಗಳನ್ನು ಕೊಂಡಾಡುವುದರ ಜೊತೆಗೆ ಅನೇಕ ಶಾಸ್ತ್ರ ಪ್ರಮೇಯಗಳನ್ನು ಹೇಳಿದ್ದಾರೆ.

೫೦

ಈ ಪದದಲ್ಲಿ ಶ್ರೀಹರಿಯ ಅನೇಕ ಮಹಿಮೆಗಳನ್ನೂ ಭಾಗವತದಲ್ಲಿ ಹೇಳಿರುವ ದಶಾವತಾರಾದಿ ಅವನ ಅನೇಕ ಅವತಾರ–ಕಾರ್ಯಗಳನ್ನೂ ಪಟ್ಟೀಕರಿಸಿ ಸ್ತೋತ್ರ ಮಾಡಿದ್ದಾರೆ.

೫೧

ಇದು ಶ್ರೀಹರಿಯ ನಾನಾ ಅವತಾರಗಳನ್ನೂ, ಲೀಲಾ ಮಹಿಮಾ ವಿಶೇಷಗಳನ್ನೂ ವಿವರಿಸಿರುವ ಲಾವಣಿ ಧಾಟಿಯ ಪದ(ಖಡಕು) ಇದರಲ್ಲಿ ಅನೇಕ ಶಾಸ್ತ್ರ ಪ್ರಮೇಯಗಳು ಅಡಗಿವೆ.

೫೨

ಸೂರ್ಯಾಂತರ್ಗತನಾದ ಶ್ರೀಹರಿಯ ಮಹಿಮೆಗಳನ್ನು ಹೇಳಿ ನಮೋ ನಮೋ ಎಂದಿದ್ದಾರೆ.

೫೩

ಈ ಪದದ ಒಂದೊಂದು ನುಡಿಯಲ್ಲಿ ಒಂದೊಂದು ಅವತಾರದಂತೆ ಶ್ರೀಹರಿಯ ದಶಾವತಾರಗಳನ್ನು ಸುಂದರವಾಗಿ ವರ್ಣಿಸಿ ಅವನ ಇನ್ನೂ ಅನೇಕ ಗುಣ ಮಹಿಮೆಗಳನ್ನೂ ಹೇಳಿ ನಾಮ ಸ್ಮರಣೆಯನ್ನಿತ್ತು ಪಾಲಿಸೆಂದಿದ್ದಾರೆ.

೫೪

ಪ್ರಾಸಬದ್ಧವಾದ, ಸೊಗಸಾದ ಪದ ಜೋಡಣೆಗಳಿಂದ ಶ್ರೀ ಲಕ್ಷ್ಮೀದೇವಿಯ ಮಹಿಮೆಯನ್ನು ವರ್ಣಿಸಿ ಸ್ತುತಿಸಿದ್ದಾರೆ.

೫೫

ಶ್ರೀ ಲಕ್ಷ್ಮೀದೇವಿಯನ್ನು ಅವಳ ಮಹಿಮಾತಿಶಯಗಳನ್ನು ವರ್ಣಿಸುವುದರ ಮೂಲಕ ಸ್ತೋತ್ರ ಮಾಡಿದ್ದಾರೆ.

೫೬

ಈ ಪದದ ಪ್ರತಿಯೊಂದು ನುಡಿಯಲ್ಲೂ ಶ್ರೀವಾಯು ದೇವರ ಹನುಮ, ಭೀಮ, ಮಧ್ವಾವತಾರಗಳನ್ನು ವರ್ಣಿಸಿರುವುದು ಒಂದು ವೈಶಿಷ್ಟ್ಯ.

೫೭

ಶ್ರೀ ಮಧ್ವಾಚಾರ್ಯರ ಅವತಾರವನ್ನೂ, ಅವರ ಮಹಿಮೆಯನ್ನೂ ವರ್ಣಿಸಿದ್ದಾರೆ.

೫೮

ಇದು ಶ್ರೀ ಮಧ್ವಾಚಾರ್ಯರ ಸ್ತೊತ್ರ ಪದ ಅವರ ಹನುಮ, ಭೀಮ, ಮಧ್ವಾವತಾರದ ಕಾರ್ಯಗಳನ್ನು ವಿವರಿಸಿದ್ದಾರೆ.

೫೯

ಇದು ಶ್ರೀ ಮಧ್ವಾಚಾರ್ಯರ ಸ್ತೋತ್ರ ಪದವಾದರೂ ಮುಖ್ಯವಾಗಿ ಅವರ ಮೂಲರೂಪವಾದ ವಾಯುದೇವರ ಮಹಿಮೆಯನ್ನೂ ಅವರು ಶ್ರೀಹರಿಯ ಪ್ರಥಮಾಂಗರಾಗಿ ನಡೆಸುವ ಅನೇಕ ಕಾರ್ಯ ವಿಶೇಷಗಳನ್ನೂ ವಿಷದವಾಗಿ ವರ್ಣಿಸಿದ್ದಾರೆ.

೬೦

ಇದು ಶ್ರೀ ಮಧ್ವಾಚಾರ್ಯರನ್ನು ಕುರಿತಾದ ಸ್ತೋತ್ರ ಪದ.

೬೧

ಶ್ರೀ ವಾಯು ದೇವರ ಮೂಲರೂಪ ಮತ್ತು ಅವತಾರ ರೂಪಗಳಾದ ಹನುಮ-ಭೀಮ-ಮಧ್ವ ಇವುಗಳ ಮಹಿಮೆಯನ್ನು ಕೊಂಡಾಡಿದ್ದಾರೆ.

೬೨

ಸಮ ಕಕ್ಷೆಯರಾದ ಇಬ್ಬರ ಮಹಿಮೆಗಳು ಒಂದೇ ರೀತಿಯಲ್ಲಿರುವುದರ ಪ್ರಯುಕ್ತ ಶ್ರೀ ಭಾರತೀ ಮತ್ತು ಶ್ರೀ ಸರಸ್ವತಿ ಇಬ್ಬರನ್ನೂ ಒಟ್ಟಿಗೆ ಸ್ತುತಿ ಮಾಡಿದ್ದಾರೆ.

೬೩

ಇದು ಟೀಕಾಚಾರ್ಯರೆಂದೇ ಪ್ರಸಿದ್ಧರಾದ ಶ್ರೀಜಯರ್ತೀರ್ಥರ ಸ್ತುತಿ. ಇವರ ಮೂಲ ಬೃಂದಾವನವು ಗುಲ್ಬರ್ಗಾ ಸಮೀಪದಲ್ಲಿರುವ ಮಳಖೇಡದ ಕಾಗಿನಿ ನದಿ ತೀರದಲ್ಲಿದೆ.




## ೬೪

ಇದೂ ಸಹ ಶ್ರೀ ಜಯತೀರ್ಥರ ಸ್ತುತಿ. ಇವರು ಹಿಂದೆ ಶ್ರೀ ಮಧ್ವಾಚಾರ್ಯರ ಕಾಲದಲ್ಲಿ ಎತ್ತಿನ ಜನ್ಮ ಹೊಂದಿದ್ದು ಅವರ ಗ್ರಂಥಗಳನ್ನು ಹೊರುತ್ತಿದ್ದರೆಂದು ನಂಬಿಕೆಯಿದೆ.

## ೬೫

ಇದು ಶ್ರೀವಾದಿರಾಜರ ಸ್ತೋತ್ರ. ಶ್ರೀವಾದಿರಾಜರು ಉಡುಪಿಯ ಅಷ್ಟ ಮಠಗಳಲ್ಲೊಂದಾದ ಸೊದೆ ಮಠದ ಪರಂಪರೆಯಲ್ಲಿ ಬಂದ ಅತಿ ಮುಖ್ಯಯತಿಗಳು. ಅವರ ಬೃಂದಾವನವು ಶಿರಸಿ ಬಳಿಯಲ್ಲಿರುವ ಸೋಂದಾ(ಸೋದೆ) ಎಂಬ ಗ್ರಾಮದಲ್ಲಿ ಧವಳಗಂಗಾ ಎಂಬ ಕೊಳದ ತೀರದಲ್ಲಿದೆ. ಶ್ರೀ ವಾದಿರಾಜರು ಲಾತವ್ಯನೆಂಬ ಋಜು ಗಣದ ದೇವತೆಯ ಅವತಾರವೆಂದೂ ಮುಂದಿನ ಬ್ರಹ್ಮಕಲ್ಪದಲ್ಲಿ ವಾಯುದೇವರ ಪಟ್ಟಕ್ಕೆ ಬರುವರೆಂದೂ ನಂಬಿಕೆಯಿದೆ.

ಅವರು ವ್ಯಾಸರಾಜರು, ಪುರಂದರದಾಸರು, ಕನಕದಾಸರು, ವೈಕುಂಠದಾಸರು ಮೊದಲಾದವರ ಸಮಕಾಲೀನರಾಗಿದ್ದು ಹಯವದನ ಮುದ್ರಿಕೆಯಿಂದ ಕನ್ನಡದಲ್ಲಿ ಅನೇಕ ಪದ, ಪದ್ಯ ಸುಳಾದಿಗಳನ್ನು ರಚಿಸಿ ದಾಸ ಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾರೆ.

## ೬೬

ಇದೂ ಸಹ ಶ್ರೀವಾದಿರಾಜರ ಸ್ತುತಿ. (೬೫–ನೇ ಪದದ ಟಿಪ್ಪಣಿ ನೋಡುವುದು). ದಾಸರು ಈ ಪದದಲ್ಲಿ ಶ್ರೀ ವಾದಿರಾಜರು ರಚಿಸಿದ ಗ್ರಂಥ ಮೊದಲಾದವುಗಳನ್ನು ಉಲ್ಲೇಖಿಸಿ ಅವರ ಮಹಿಮೆಗಳನ್ನು ಕೊಂಡಾಡಿದ್ದಾರೆ.

## ೬೭

ಇದೂ ಸಹ ಶ್ರೀವಾದಿರಾಜರ ಸ್ತುತಿ ( ೯೫–೯೬ ರ ಟಿಪ್ಪಣಿ ನೋಡುವುದು)

ಶ್ರೀವಾದಿರಾಜರು ತಮ್ಮ ೧೨೦ ವರ್ಷ ಆಯುಸ್ಸಿನಲ್ಲಿ ಸಾಧಿಸಿದ ಅನೇಕ ಅದ್ಭುತ ಕಾರ್ಯಗಳು ಮತ್ತು ಅವರ ಮಹಿಮೆಗಳು ಇಲ್ಲಿ ವರ್ಣಿತವಾಗಿವೆ. ಅಲ್ಲದೆ ಅವರು ವೃಂದಾವನಸ್ಥರಾದ ನಂತರ ಒಬ್ಬ ಏಡಮೂಕ ಬ್ರಾಹ್ಮಣನಲ್ಲಿ ಆವಿಷ್ಟರಾಗಿ ತಮ್ಮ ಬೃಂದಾವನದ ಮಹಿಮೆಯನ್ನು ತಾವೇ ತಿಳಿಸಿ "ಸ್ವಾಪ್ನವೃಂದಾವನಾಖ್ಯಾನ" ಎಂಬ ಗ್ರಂಥವನ್ನು ಬರೆಸಿದರೆಂದು ಪ್ರತೀತಿಯಿದೆ. ಈ ಸ್ತೋತ್ರ ಪದದಲ್ಲಿ ಅದರ ಸೂಚನೆಯಿದೆ.

## ೬೮

ಶ್ರೀ ರಾಘವೇಂದ್ರ ಸ್ವಾಮಿಗಳು ಶ್ರೀಮಧ್ವಾಚಾರ್ಯರ ಪರಂಪರೆಯಲ್ಲಿ ಬಂದ ಒಬ್ಬ ಪ್ರಸಿದ್ಧ ಮತ್ತು ಸರ್ವಜನ ಮಾನ್ಯರಾದ ಯತಿಗಳು. ಇವರ ಮೂಲಬೃಂದಾವನವು ತುಂಗಭದ್ರಾ ನದಿಯ ತೀರದಲ್ಲಿ ಮಂತ್ರಾಲಯವೆಂಬ ಊರಿನಲ್ಲಿದೆ. ಅವರ ತಮ್ಮ ಜೀವಿತ ಕಾಲದಲ್ಲಿ ತೋರಿಸಿದ ಮತ್ತು ತಮ್ಮ ಬೃಂದಾವನದ ಮೂಲಕ ಈಗಲೂ ತೋರಿಸುತ್ತಿರುವ ಮಹಿಮೆಗಳು ಜನಜನಿತವಾಗಿವೆ.

ದಾಸರು ಈ ಪದದಲ್ಲಿ ಶ್ರೀ ರಾಘವೇಂದ್ರ ಸ್ವಾಮಿಗಳನ್ನು ಸೇವಿಸುವುದರಿಂದ ದೊರೆಯುವ ಫಲಗಳನ್ನು ಹೇಳಿದ್ದಾರೆ.

## ೬೯

ಇದೂ ಸಹ ಶ್ರೀ ರಾಘವೇಂದ್ರ ಸ್ವಾಮಿಗಳ ಸ್ತೋತ್ರ. ಅವರ ಪ್ರಹ್ಲಾದ ಮತ್ತು ವ್ಯಾಸರಾಜರೆಂಬ ಪೂರ್ವಾವತಾರಗಳನ್ನು ವರ್ಣಿಸಿ ಸ್ತೋತ್ರ ಮಾಡಿದ್ದರೆ.

ಶ್ರೀ ವ್ಯಾಸರಾಜರಿಗೆ ಶ್ರೀ ಬ್ರಹ್ಮಣ್ಯತೀರ್ಥರು ಆಶ್ರಮ ಗುರುಗಳು. ಶ್ರೀ ಶ್ರೀಪಾದರಾಜರು ವಿದ್ಯಾಗುರುಗಳು. ಶ್ರೀ ಕೃಷ್ಣದೇವರಾಯನಿಗೆ ಕುಹು ಯೋಗವೆಂಬ ವಿಪತ್ತನ್ನು ರಾಜ ಗುರುಗಳಾಗಿದ್ದ ಶ್ರೀವ್ಯಾಸರಾಜರು ನಿವಾರಿಸಿದರ ಉಲ್ಲೇಖ ಇಲ್ಲಿದೆ.

ಶ್ರೀ ಮಧ್ವಾಚಾರ್ಯರನ್ನು ಮೋದಮುನಿ ಎಂತಲೂ ಕರೆಯುವುದಿದೆ.

## ೭೦

ಶ್ರೀ ರಾಘವೇಂದ್ರ ಸ್ವಾಮಿಗಳ ಮಹಿಮೆಯನ್ನು ಕೊಂಡಾಡುವ ಈ ಪದದಲ್ಲಿ ಅವರ ಮೂಲರೂಪವಾದ ಶಂಕುಕರ್ಣದೇವತೆ, ಹಿಂದಿನ ಅವತಾರಗಳಾದ ಪ್ರಹ್ಲಾದ, ವ್ಯಾಸರಾಯರು ಹಾಗೂ ಮುಂದಿನ ಅವತಾರವಾದ ಶ್ರೀ ಸತ್ಯಸಂಧ ತೀರ್ಥರು–ಇವುಗಳ ಬಗ್ಗೆ ಸೂಚಿಸಿರುವುದರ ಜೊತೆಗೆ ಮಂತ್ರಾಲಯದಲ್ಲಿರುವ ಸ್ವಾಮಿಗಳ ಬೃಂದಾವನದ ಮಹಿಮೆಯನ್ನು ವರ್ಣಿಸಿದ್ದಾರೆ.

## ೭೧

ಶ್ರೀ ರಾಘವೇಂದ್ರ ಸ್ವಾಮಿಗಳನ್ನು ಅವರ ಹಿಂದಿನ ಅವತಾರಗಳಾದ ಪ್ರಹ್ಲಾದ ಮತ್ತು ವ್ಯಾಸರಾಜರು–ಇವರುಗಳ ಮಹಿಮೆಗಳನ್ನೂ ವರ್ಣಿಸುವುದರ ಮೂಲಕ ಸ್ತೋತ್ರ ಮಾಡಿದ್ದಾರೆ.

೭೨

ಇದು ಸಹ ಶ್ರೀ ರಾಘವೇಂದ್ರ ಸ್ವಾಮಿಗಳ ಸ್ತೋತ್ರ ಅವರ ಹಿಂದಿನ ಅವತಾರಗಳಾದ ವ್ಯಾಸರಾಜರು ಮತ್ತು ಪ್ರಹ್ಲಾದನ ಬಗ್ಗೆ ಉಲ್ಲೇಖವಿದೆ.

೭೩

ಇದೂ ಸಹ ಶ್ರೀ ರಾಘವೇಂದ್ರ ಸ್ವಾಮಿಗಳನ್ನು ಕುರಿತಾದ ಒಂದು ಅಶ್ವಧಾಟಿ ಪದ. ಈ ಪದದಲ್ಲಿ ಶ್ರೀರಾಘವೇಂದ್ರ ಸ್ವಾಮಿಗಳ ಇನ್ನೊಂದು ಹಿಂದಿನ ಅವತಾರವಾದ ಬಾಹ್ಲೀಕ ರಾಜ ಮತ್ತು ಮುಂದಿನ ಅವತಾರವಾದ ಶ್ರೀಸತ್ಯಸಂಧತೀರ್ಥರ ಬಗ್ಗೆಯೂ ಉಲ್ಲೇಖವಿದೆ.

೭೪

ಇದು ಶ್ರೀ ರಾಘವೇಂದ್ರ ಸ್ವಾಮಿಗಳನ್ನು ಕುರಿತಾದ ಒಂದು ಸುವ್ವಿ ಮಟ್ಟಿನ ಪದ. ಸ್ವಾಮಿಗಳ ಅನೇಕ ಮಹಿಮೆಗಳನ್ನು ಹೇಳಿ ಅವರ ಮುಂದಿನ ಅವತಾರವೆಂದು ನಂಬಲಾಗಿರುವ ಶ್ರೀ ಸತ್ಯಸಂಧ ತೀರ್ಥರ ಹೆಸರನ್ನೂ ಉಲ್ಲೇಖಿಸಿದ್ದಾರೆ. ಶ್ರೀಸತ್ಯಸಂಧ ತೀರ್ಥರು ಶ್ರೀ ಉತ್ತರಾದಿ ಮಠದ ಪರಂಪರೆಯಲ್ಲಿ ಬಂದ ಒಬ್ಬ ಯತಿಗಳಾಗಿದ್ದು ಅವರ ಬೃಂದಾವನವು ಶಿವಮೊಗ್ಗಾ ಜಿಲ್ಲೆಯ ತೀರ್ಥಹಳ್ಳಿಯ ಬಳಿ ಮಹಿಷಿ ಎಂಬ ಗ್ರಾಮದಲ್ಲಿ ತುಂಗಾ ನದಿಯ ತೀರದಲ್ಲಿದೆ.

೭೫

ಇಲ್ಲಿನ ೨೧ ಷಟ್ಪದಿ ಪದ್ಯಗಳಲ್ಲಿ ಶ್ರೀರಾಘವೇಂದ್ರ ಸ್ವಾಮಿಗಳ ಮತ್ತು ಮಂತ್ರಾಲಯದಲ್ಲಿರುವ ಅವರ ಬೃಂದಾವನದ ಮಹಿಮೆಯನ್ನು ಕೊಂಡಾಡಿದ್ದಾರೆ.

೭೬

ಶ್ರೀ ರಾಘವೇಂದ್ರ ಸ್ವಾಮಿಗಳನ್ನು ಕುರಿತಾದ ಈ ಪದದಲ್ಲಿ ಅವರು ಹಿಂದಿನ ಅವತಾರದಲ್ಲಿ ಪ್ರಹ್ಲಾದನಾಗಿದ್ದನ್ನು ಮತ್ತು ಮೂಲರೂಪದಲ್ಲಿ ಶಂಕುಕರ್ಣನೆಂದೂ, ಬ್ರಹ್ಮದೇವನ ಸೇವಕನಾಗಿರುವುದನ್ನೂ ಸೂಚಿಸಿದ್ದಾರೆ.

೭೭

ಇದು ಶ್ರೀ ಉತ್ತರಾದಿ ಮಠದ ಪೀಳಿಗೆಯ ಶ್ರೀಸತ್ಯಧ್ಯಾನ ತೀರ್ಥರ ಸ್ತೋತ್ರ. ದಾಸರಿಗೆ ಇವರು ವಿದ್ಯಾಗುರುಗಳು.

೭೮

ಇದು ಶ್ರೀವಾದಿರಾಜಸ್ವಾಮಿಗಳ ಭೃತ್ಯರಾದ ನಾರಾಯಣ ಭೂತ ಅಥವಾ ಭೂತರಾಜರ ಸ್ತೋತ್ರ. ಅವರ ಚರಿತ್ರೆ, ಮಹಿಮೆಗಳು ಈ ಪದದಲ್ಲಿವೆ. ಶಿರಸಿ ಬಳಿಯಿರುವ ಸೋಂದಾ ಕ್ಷೇತ್ರದಲ್ಲಿ ಶ್ರೀವಾದಿರಾಜರ ಬೃಂದಾವನದ ಸಮೀಪದಲ್ಲಿ ಭೂತರಾಜರನ್ನು ಪ್ರತಿನಿಧಿಸಿ ಪೂಜಿಸಲ್ಪಡುತ್ತಿರುವ ಲಿಂಗ ರೂಪದ ಭೂತ ಸ್ಥಾನವಿದೆ. ಶ್ರೀವಾದಿರಾಜರು ಮುಂದಿನ ಬ್ರಹ್ಮಕಲ್ಪದಲ್ಲಿ ವಾಯುದೇವರ ಪಟ್ಟಕ್ಕೆ ಬಂದಾಗ ಭೂತರಾಜರು ರುದ್ರ ಪಟ್ಟಕ್ಕೆ ಬರುತ್ತಾರೆಂಬ ನಂಬಿಕೆಯಿದೆ. (ಪದ ೬೫ರ ಟಿಪ್ಪಣಿ ಸಹ ನೋಡುವುದು).

೭೯

ಇದು ಶ್ರೀ ಪುರಂದರದಾಸರನ್ನು ಕುರಿತಾದ ಸ್ತೋತ್ರ ಪದ. ಅವರ ಅವತಾರದ ಹಿನ್ನೆಲೆಯನ್ನೂ ಪುರಂದರದಾಸರಾಗಿ ಪೂಜಿಸಿ ಸಾಧಿಸಿದ ಕಾರ್ಯಗಳನ್ನು ವಿವರಿಸಿದ್ದಾರೆ.

೮೦

ಇದು ಶ್ರೀ ಜಗನ್ನಾಥ ದಾಸರ ಜೀವನ ಚರಿತ್ರೆಯನ್ನೂ ಅವರ ಕಾರ್ಯ ಸಾಧನೆಗಳನ್ನೂ ಸಂಕ್ಷೇಪವಾಗಿ ತಿಳಿಸುವ ಪದ. ಅವರ ಪ್ರಮುಖ ಶಿಷ್ಯರುಗಳ ಹೆಸರುಗಳನ್ನೂ ಜಗನ್ನಾಥದಾಸರ ಪೂರ್ವ ಅವತಾರಗಳನ್ನು ಸೂಚಿಸಿದ್ದಾರೆ.

೮೧

ಶ್ರೀ ನರಸಿಂಹನನ್ನು ತಮ್ಮ ಮನಸ್ಸೆಂಬ ಮನೆಯಲ್ಲಿ ನಿಲ್ಲಿಸಲಾಗದ ತಮ್ಮ ಬಾಳು ನಿರರ್ಥಕವೆಂದಿದ್ದಾರೆ.

೮೨

ತಂಬೂರಿಯನ್ನು ಹಿಡಿದು ಸಂಕೀರ್ತಿಸುವುದರ ಮೂಲಕ ಸಂತುಷ್ಟಿಯನ್ನು ಕಂಡಿರುವುದಾಗಿ ಸ್ವಾನುಭವವನ್ನು ಹೇಳಿ ಕೊಂಡಿದ್ದಾರೆ.

೮೩

ಕೃಷ್ಣನನ್ನು ನಂಬದೆ ತಾವು ಕೆಟ್ಟರೆಂದು ಹೇಳಿ ಕೊಂಡಿದ್ದಾರೆ.

## ೮೪

ತಮ್ಮ ಅವಗುಣಗಳ ಪಟ್ಟಿಯನ್ನೇ ಕೊಟ್ಟು ಕೊಂಡು ತಾವು ಯಾವ ರೀತಿಯಿಂದಲೂ ಉತ್ತಮರಲ್ಲವೆಂದೂ ನೈಚ್ಯಾನು ಸಂಧಾನದಿಂದ ಕೃಷ್ಣನಿಗೆ ಶರಣೆಂದಿದ್ದಾರೆ.

## ೮೫

ಗೆಜ್ಜೆ ಕಟ್ಟಿಕೊಂಡು ಕುಣಿದು ಕುಪ್ಪಳಿಸಿ ಕೃಷ್ಣ ಭಜನೆ ಮಾಡಲು ನಾಚಿಕೆ ಪಟ್ಟುಕೊಂಡು ಅಭಿಮಾನವನ್ನು ತ್ಯಜಿಸದೆ ತಾವು ಕೆಟ್ಟರೆಂದು ಎಲ್ಲಾ ಅಭಿಮಾನಗಳನ್ನು ತೊರೆದು ಹರಿಯನ್ನು ಭಜಿಸಿ ಮಾನ್ಯರಾಗಿ ಎಂದಿದ್ದಾರೆ.

## ೮೬

ದಾಸರು ತಮ್ಮ ಡಾಂಭಿಕ ಜೀವನದ ವೈಶಿಷ್ಟ್ಯಗಳನ್ನು ಹೇಳಿಕೊಳ್ಳತ್ತಾ ತಮ್ಮಲ್ಲಿರುವ ದೋಷಗಳ ಪಟ್ಟಿಯನ್ನೇ ಕೊಟ್ಟುಕೊಂಡು ಹಾಗಿದ್ದರೂ ತಾವು ಶ್ರೀವಿಜಯದಾಸರ ಪರಂಪರೆಯಲ್ಲಿ ಬಂದಿರುವುದರಿಂದ ದೋಷಗಳನ್ನೆಣಿಸದೆ ಲೇಸು ನೀಡೆಂದು ಹರಿಯನ್ನು ಪ್ರಾರ್ಥಿಸಿದ್ದಾರೆ.

ವಿಶೇಷ ವಿಷಯ:– ಬಹಳವಾಗಿ ಕೃಷ್ಣವಿಠಲದಾಸರನ್ನು ವೇಣುಗೋಪಾಲದಾಸರೆಂದು ಪ್ರಸಿದ್ಧರಾದ ಪಂಗನಾಮ ತಿಮ್ಮಣ್ಣದಾಸರ ಪರಂಪರೆಯವರೆಂದೂ ನಿರ್ದೇಶಿಸಿದರೂ ಈ ಪದದಲ್ಲಿ ಅವರೇ "ವಿಜಯದಾಸ ಪ್ರಿಯ ಮೋಹನ್ನ ಪರಂಪರೆಯ ದಾಸ" ಎಂದು ಹೇಳಿಕೊಂಡಿರುವುದು ಗಮನಾರ್ಹ. ಇದಕ್ಕೆ ಸಂಬಂಧಿಸಿದಂತೆ ಇದೇ ಸಂಪುಟದ ಶ್ರೀ ಬಾಗೇಪಲ್ಲಿ ಶೇಷದಾಸರ ಭಾಗದಲ್ಲಿ ಹೆಚ್ಚು ವಿಷಯಗಳನ್ನು ಕಾಣಬಹುದು.

## ೮೭

ತಾವು ಕಿರಿಯರೆಂದು ಕಡೆಗಾಣದೆ ತಮ್ಮನ್ನು ದಾಸತ್ವೇನ ಸ್ವೀಕರಿಸಿ ಉದ್ಧಾರ ಮಾಡಬೇಕೆಂದು ಕೃಷ್ಣನನ್ನು ಪ್ರಾರ್ಥಿಸಿದ್ದಾರೆ.

## ೮೮

ತಮ್ಮ ಜೀವನವು ಬರಿದೇ ವ್ಯರ್ಥವಾಯಿತೆಂದೂ ಆದರೂ ಶ್ರೀಹರಿಯು ಕರುಣಾಮಯನೆಂದು ಬಿರುದಿರುವುದರಿಂದ ತಮ್ಮನ್ನು ಕಾಯಬೇಕೆಂದೂ ಪ್ರಾರ್ಥಿಸಿದ್ದಾರೆ.

೮೯

ತಮ್ಮಲ್ಲಿ ಅನೇಕ ನ್ಯೂನತೆ ದೋಷಗಳಿದ್ದೂ, ಅಯೋಗ್ಯರಾದಾಗ್ಯೂ, ತಮ್ಮನ್ನು ಕರುಣೆಯಿಂದ ಕಾಪಾಡೆಂದು ಕೃಷ್ಣನನ್ನು ಪ್ರಾರ್ಥಿಸಿದ್ದಾರೆ.

೯೦

ಶ್ರೀಹರಿಯ ಕರುಣವನ್ನು ಪಡೆಯಬೇಕಾದರೆ ಅಹಂಕಾರವನ್ನು ತೊರೆದು ಎಲ್ಲಾ ವ್ಯಾಪಾರಗಳಲ್ಲೂ ಶ್ರೀಹರಿಯ ಇರುವನ್ನೇ ಕಾಣುತ್ತಾ ವೈರಾಗ್ಯದಿಂದಿರಬೇಕೆಂದಿದ್ದಾರೆ.

೯೧

ಅರಿಷಡ್ವರ್ಗಗಳನ್ನು ಗೆದ್ದು ಈ ದೇಹ ಸ್ಥಿರವಲ್ಲೆಂದು ನಂಬಿ ಶ್ರೀ ಕೃಷ್ಣನನ್ನು ಮೊರೆ ಹೋಗಬೇಕೆಂದಿದ್ದಾರೆ.

೯೨

ಕಂಡ ಕಂಡವರ ಸೇವೆಯು ಹೇಯವಾಗಿದ್ದು ತಮ್ಮನ್ನು ಪರಮಾತ್ಮನ ದಾಸಾನುದಾಸನೆನ್ನಿಸೆಂದು ಕೃಷ್ಣನನ್ನು ಪ್ರಾರ್ಥಿಸಿದ್ದಾರೆ.

೯೩

ವ್ಯರ್ಥ ಕಾಲಹರಣ ಮಾಡದೆ ಕೃಷ್ಣನನ್ನು ಚೆನ್ನಾಗಿ ಸ್ಮರಿಸಿ ಒಲಿಸಿ ಸಂಸಾರ ಬಂಧನದಿಂದ ಪಾರಾಗಲು ಬನ್ನಿರೆಂದು ಎಲ್ಲರನ್ನು ಕರೆದಿದ್ದಾರೆ.

೯೪

ಒಬ್ಬ ಯುವ ಗೃಹಿಣಿಯು ಹೇಗಿರಬೇಕೆಂಬುದನ್ನು ವಿವರಿಸಿದ್ದಾರೆ.

೯೫

ಬೂಟಾಟಿಕೆಯ ಭಕ್ತಿಯನ್ನು ಮಾಡಿ ಹೊಟ್ಟೆಗೋಸ್ಕರ ಹಾಡು ಹಾಡದೆ ಹೇಗೆ ಸಜ್ಜನನಾಗಿ ಸತ್ಕರ್ಮಾಚರಣೆ ಮಾಡಬೇಕೆಂದು ಹೇಳಿದ್ದಾರೆ.

## ೯೬

ಬೇರೆ ಏನನ್ನಾದರೂ ಮಾಡಬಹುದು ಆದರೆ ಹಣ ಸಂಪತ್ತುಗಳಲ್ಲಿ ಆಸೆಯನ್ನು ಬಿಡುವುದು ಸುಲಭವಲ್ಲವೆಂದೂ ಶ್ರೀ ಕೃಷ್ಣನು ಒಲಿದರೆ ಮಾತ್ರ ಅದು ಸಾಧ್ಯವೆಂದೂ ಹೇಳಿದ್ದಾರೆ.

## ೯೭

ಸಮಾಜದಲ್ಲಿರುವ ಜನರ ಸ್ವಾರ್ಥತೆಯನ್ನು ತಮ್ಮ ಮೇಲೆ ಆರೋಪ ಮಾಡಿಕೊಂಡು ನಿಜವಾದ ದೈವಭಕ್ತಿ ಇಲ್ಲದವರ ಡಾಂಭಿಕ ನಡವಳಿಕೆಯನ್ನು ಮಾರ್ಮಿಕವಾಗಿ ಚಿತ್ರಿಸಿದ್ದಾರೆ.

## ೯೮

ಪತಿವ್ರತ ಸ್ತ್ರೀಯರ ಲಕ್ಷಣಗಳನ್ನು ವಿವರಿಸಿದ್ದಾರೆ.

## ೯೯

ಈ ಬಕುಕಿನಲ್ಲಿ ಅನೇಕ ಕೊರತೆಗಳು, ಕ್ಷಣಿಕ ವಿಷಯಗಳು ಇದ್ದೂ ಅವುಗಳಿಗೆ ಬಲಿಯಾಗದೆ ಕೃಷ್ಣನನ್ನು ಭಜಿಸಿ ಶಾಶ್ವತ ಮುಕ್ತಿಯನ್ನು ಪಡೆಯಬೇಕೆಂದಿದ್ದಾರೆ.

## ೧೦೦

ಲೋಕದಲ್ಲಿನಿಜವಾಗಲೂ ಯಾವುದು ತುಚ್ಛವಾದದ್ದೆಂಬುದನ್ನು ಹೇಳಿದ್ದಾರೆ.

## ೧೦೧

ಶ್ರೀ ಕೃಷ್ಣನ ಸ್ಮರಣೆಯನ್ನು ಸಹ ಮಾಡಲು ಅವಕಾಶಕೊಡದೆ ಕೆಡೆಸುವಂತಹ ಲೌಕಿಕ ವಿಷಯಗಳು ತಮಗೇಕೆಂದಿದ್ದಾರೆ.

## ೧೦೨

ವ್ಯಾಸ–ದಾಸ ಕೂಟಗಳು ಬೇರೆ ಬೇರೆ ಎಂಬ ಜನಜನಿತವಾದ ಭಾವವನ್ನು ಬಿಟ್ಟು ಅವೆರಡೂ ಒಂದೇ ಎಂಬುದನ್ನು ತಿಳಿಯಬೇಕೆಂದಿದ್ದಾರೆ.

## ೧೦೩

ಸಜ್ಜನರನ್ನು ನೋಯಿಸುವುದರಿಂದ ಉಂಟಾಗುವ ಅನರ್ಥಗಳನ್ನು ಪುರಾಣ ಇತಿಹಾಸ ಪ್ರಸಂಗಗಳನ್ನು ಉಲ್ಲೇಖಿಸುವುದರ ಮೂಲಕ ಸೂಚಿಸಿದ್ದಾರೆ.

೧೦೪

ಐಹಿಕ ಸುಖದ ರುಚಿಯನ್ನೆಲ್ಲ ನೋಡಿ ಅದು ನಿಸ್ಸಾರವೆಂದು ಅರಿತು ಕೊನೆಗೆ ಶ್ರೀಹರಿಯ ಭಜನೆಯೇ ಸುಖವೆಂಬುದನ್ನು ಅರಿತೆನೆಂದು ಹೇಳಿಕೊಂಡಿದ್ದಾರೆ.

೧೦೫

ಲೋಕದಲ್ಲಿ ಜನರು ನಡೆದುಕೊಳ್ಳುವ ಅನೇಕ ರೀತಿಗಳನ್ನು ಹೇಳಿ ಹಾಗೆ ಮಾಡಬಾರದೆಂದಿದ್ದಾರೆ.

೧೦೬

ಅಹಂಕಾರ, ಮಮಕಾರಾದಿಗಳನ್ನು ತೊರೆದು ಗುರುಗಳ ಅನುಗ್ರಹವನ್ನು ಪಡೆಯದೆ, ಸತ್ಕರ್ಮಾಚರಣೆಯನ್ನು ಮಾಡದೆ ಶ್ರೀ ಹರಿಯು ಒಲಿಯುವುದಿಲ್ಲವೆಂದು ಘೋಷಿಸಿದ್ದಾರೆ.

೧೦೭

ಅನೇಕ ಮತಗಳ ಪ್ರಕ್ರಿಯೆಗಳನ್ನು ವಿವರಿಸಿ ಅವುಗಳ ಅಸಮರ್ಪಕತೆಯನ್ನು ಹೇಳಿ ಆ ದೋಷಗಳಾವುದೂ ಇಲ್ಲದ ದ್ವೈತ ಮತವೇ ಸರಿಯಾದ ವೈದಿಕ ಮತವೆಂದು ಪ್ರತಿಪಾದಿಸಿದ್ದಾರೆ.

೧೦೮

ಶ್ರೀ ವೆಂಕಟೇಶ ಕಲ್ಯಾಣದ ಕಥೆಯನ್ನು ಲಾವಣಿ ರೂಪದಲ್ಲಿ ಸರಳ ಸುಂದರವಾಗಿ ಸಮಗ್ರವಾಗಿ ನಿರೂಪಿಸಿದ್ದಾರೆ. ಈ ಕೃತಿಯು ಸರಳವಾಗಿ ಕಂಡರೂ ಅನೇಕ ಶಾಸ್ತ್ರ ಪ್ರಮೇಯಗಳನ್ನೊಳಗೊಂಡಿದೆ.

೧೦೯

ಇದು ಒಂದು ಉದಯರಾಗ. ಪರಮ ಹರಿಭಕ್ತನಾದ ಇಂದ್ರದ್ಯುಮ್ನನೆಂಬ ರಾಜನು ಶಾಪದ ನಿಮಿತ್ತ ಆನೆಯಾಗಿ ಮಡುವಿನಲ್ಲಿ ಮೊಸಳೆಯ ದಾಡೆಗಳಿಗೆ ಸಿಕ್ಕು ಪರಿಪರಿಯಾಗಿ ಸ್ತೋತ್ರ ಮಾಡಿದಾಗ ಶ್ರೀ ಹರಿಯು ಧಾವಿಸಿ ಬಂದು ಮೊಸಳೆಯನ್ನು ಕೊಂದು ಗಜೇಂದ್ರನನ್ನು ರಕ್ಷಿಸಿ ಮುಕ್ತಿಯನ್ನು ಕರುಣಿಸಿದ ಕಥೆ ಇಲ್ಲಿದೆ.

## ವರದವಿಠಲರು

೧

ಈ ಪುಟ್ಟ ಪದದಲ್ಲಿ ತಾವು ಏನನ್ನೂ ಬಯಸದೆ ಪರಮಾತ್ಮನ ಸ್ಮರಣೆಯನ್ನು ಮಾತ್ರ ಬಯಸುವುದಾಗಿ ಹೇಳಿದ್ದಾರೆ.

೨

ಸರ್ವರಲ್ಲೂ ನಾರಾಯಣನೇ ನಿಂತು ಸರ್ವವನ್ನೂ ತಾನೇ ಮಾಡಿಸುತ್ತಾನೆಂಬ ತತ್ವವನ್ನು ಹೇಳಿದ್ದಾರೆ.

೩

ಪರಮಾತ್ಮನ ವ್ಯಾಪ್ತತ್ವವನ್ನು ವರ್ಣಿಸಿ ಸ್ತೋತ್ರ ಮಾಡಿದ್ದಾರೆ.

೪

ಸ್ವಯಂಪೂರ್ಣನೂ, ನಿರಪೇಕ್ಷನೂ ಆದ ಶ್ರೀನಿವಾಸನಿಗೆ ಯಾವ ರೀತಿ ಷೋಡಶೋಪಚಾರ ಪೂಜೆಗಳನ್ನು ಮಾಡಿ ತೃಪ್ತಿಪಡಿಸಬೇಕೆಂದು ಕೇಳಿದ್ದಾರೆ.

೫

ದುರ್ಜನರು ಸಜ್ಜನರನ್ನು ಹೀಯಾಳಿಸಿ ಅಪಮಾನ ಮಾಡುತ್ತಿರುವುದನ್ನು ನೋಡಿ ಕೇಳಿ ಸುಮ್ಮನಿರುವುದು ತರವಲ್ಲವೆಂದು ಶ್ರೀನಿವಾಸನನ್ನು ವಿಡಂಬನದಿಂದ ಮೂದಲಿಸಿ ಕರುಣಿಸೆಂದು ಪ್ರಾರ್ಥಿಸಿದ್ದಾರೆ.

೬

ಪರಮಾತ್ಮನ ಅನೇಕ ವ್ಯಾಪಾರಗಳು ದೋಷಯುಕ್ತವಾಗಿರುವುದಾಗಿ ವಿಡಂಬನ ಮಾಡಿದ್ದಾರೆ. ಇದು ಒಂದು ನಿಂದಾಸ್ತುತಿ.

೭

ತಂದೆತಾಯಿ ಸರ್ವಸ್ವವೂ ಶ್ರೀನಿವಾಸನೇ ಎಂದು ಸ್ತೋತ್ರ ಮಾಡಿದ್ದಾರೆ.

೮

ತಾವು ಕನಸಿನಲ್ಲಿ ಕಂಡ ಶ್ರೀನಿವಾಸನ ರೂಪವನ್ನು ವರ್ಣಿಸಿದ್ದಾರೆ.

೯

ಶ್ರೀನಿವಾಸನನ್ನೂ ಅವನ ಅಂಗಾಂಗ, ಆಯುಧ, ಆಭರಣ ಇತ್ಯಾದಿಗಳನ್ನೂ ವರ್ಣಿಸುವುದರ ಮೂಲಕ ಸ್ತೋತ್ರ ಮಾಡಿದ್ದಾರೆ.

೧೦

ಸತ್ಕರ್ಮವೇನನ್ನೂ ಮಾಡದ ತಮ್ಮನ್ನು ರಕ್ಷಿಸಬೇಕೆಂದು ಶ್ರೀನಿವಾಸನನ್ನು ಪ್ರಾರ್ಥಿಸಿದ್ದಾರೆ.

೧೧

ಪರಮಾತ್ಮನು ಭಕ್ತರಿಗೆ ಕರುಣೆ ತೋರಿದ ಅನೇಕ ಪ್ರಸಂಗಗಳನ್ನು ಉಲ್ಲೇಖಿಸಿ ತಮ್ಮನ್ನೂ ಕಾಯಬೇಕೆಂದಿದ್ದಾರೆ.

೧೨

ಪುರಾಣ ಪ್ರಸಿದ್ಧರಾದ ಅನೇಕರನ್ನು ರಕ್ಷಿಸಿದ ಪ್ರಸಂಗಗಳನ್ನು ಉಲ್ಲೇಖಿಸಿ ಹುಲಿಗಿರಿಯ ವರದನನ್ನು ಅನೇಕ ಪ್ರಕಾರವಾಗಿ ಸ್ತುತಿಸಿ ರಕ್ಷಣೆ ಕೋರಿದ್ದಾರೆ.

೧೩

ಇದು ಒಂದು ಅನೇಕ ಸಂಸ್ಕೃತ ಪದಗಳನ್ನೊಳಗೊಂಡ ಪದ. ಶ್ರೀನಿವಾಸನ ಅಂಗಾಂಗಳನ್ನು ಉಪಮಾನಗಳ ಮೂಲಕ ವರ್ಣಿಸಿ ಸ್ತೋತ್ರ ಮಾಡಿದ್ದಾರೆ.

೧೪

ಇದು ಒಂದು ಬಹಳ ಮಟ್ಟಿಗೆ ಸಂಸ್ಕೃತ ಪದಗಳಿಂದಾದ ಕೃತಿ ಅನೇಕ ಉಪಮಾನಗಳ ಮೂಲಕ ಶ್ರೀನಿವಾಸನ ಸೌಂದರ್ಯವನ್ನು ವರ್ಣಿಸಿ ಸ್ತೋತ್ರ ಮಾಡಿದ್ದಾರೆ.

೧೫

ತಮ್ಮನ್ನೆಂದಿಗೂ ಕೈಬಿಡದೆ ರಕ್ಷಿಸಬೇಕೆಂದು ಶ್ರೀನಿವಾಸನನ್ನು ಪ್ರಾರ್ಥಿಸಿದ್ದಾರೆ.

೧೬

ಅನೇಕ ಪಾಪಾಚರಣೆಗಳಿಂದ ದೋಷಯುಕ್ತನಾದ ತನ್ನನ್ನು ಕ್ಷಮಿಸಬೇಕೆಂದು ಶ್ರೀನಿವಾಸನನ್ನು ಪ್ರಾರ್ಥಿಸಿದ್ದಾರೆ.

೧೭

ಶ್ರೀನಿವಾಸನ ರೂಪವನ್ನೂ ಲೀಲಾವಿಶೇಷಗಳನ್ನೂ ವರ್ಣಿಸಿ ಸ್ತೋತ್ರ ಮಾಡಿದ್ದಾರೆ.

೧೮

ಕೃಷ್ಣನ ರೂಪ ಅವತಾರಾದಿಗಳನ್ನು ವರ್ಣಿಸಿ ಸ್ತೋತ್ರ ಮಾಡಿದ್ದಾರೆ.

೧೯

ವಶವಲ್ಲದ ಇಂದ್ರಿಯಗಳ ಉಪಟಳಕ್ಕೆ ಒಳಗಾಗಿರುವವನನ್ನು ಪಾಪ ಕರ್ಮಗಳಿಗೆ ಗುರಿ ಮಾಡದಿರೆಂದು ಪ್ರಾರ್ಥಿಸಿದ್ದಾರೆ.

೨೦

ಇದು ಬಹಳಮಟ್ಟಿಗೆ ಸಂಸ್ಕೃತ ಪದಗಳಿಂದಲೇ ರಚಿತವಾದ ಕೃತಿ. ರಾಮನ ಅನೇಕ ಗುಣಗಳನ್ನು ವರ್ಣಿಸಿ ತಾವು ಅವನ ದಾಸರೆಂದು ಹೇಳಿಕೊಂಡಿದ್ದಾರೆ.

೨೧

ವಿಷಯಾಸಕ್ತಿಯನ್ನು ತಿಗಣೆಯ ಕಾಟಕ್ಕೆ ಹೋಲಿಸಿ ಅದರಿಂದ ಬಿಡುಗಡೆ ಕೊಡೆಂದು ಪ್ರಾರ್ಥಿಸಿದ್ದಾರೆ.

೨೨

ಹರಿಸ್ಮರಣೆ ಮಾಡಿದ ದಿನವೇ ಸುದಿನ, ಜನರೇ ಸುಜನರು ಎಂದಿದ್ದಾರೆ.

೨೩

ಅನೇಕ ನಡವಳಿಕೆಗಳನ್ನು ಸೂಚಿಸಿ ಶ್ರೀನಿವಾಸನಿಗೆ ಪ್ರೀತಿಯಾಗದ ಅವುಗಳಿಂದ ಏನು ಫಲವಿಲ್ಲವೆಂದಿದ್ದಾರೆ.

## ೨೪

ಲಕ್ಷ್ಮೀಪತಿಯಾದ ನಾರಾಯಣನನ್ನು ಸ್ತೋತ್ರ ಮಾಡಿದ್ದಾರೆ.

## ೨೫

ತಮಗೆ ಇಹಲೋಕದ ಸಂಪತ್ತಿನ ಅಬಿಲಾಷೆ ಇಲ್ಲವೆಂತಲೂ ಸಜ್ಜನರ ಸಂಗದಲ್ಲಿ ತಮ್ಮನ್ನಿಟ್ಟು ಕಾಪಾಡಬೇಕೆಂತಲೂ ದೈನ್ಯತೆಯಿಂದ ನಾರಾಯಣನನ್ನು ಪ್ರಾರ್ಥಿಸಿದ್ದಾರೆ.

## ೨೬

ಅನೇಕ ಉದಾಹರಣೆಗಳ ಮೂಲಕ ಈ ಐಹಿಕ ಸುಖವು ನಶ್ವರವೆಂದೂ ಸಂಸಾರವನ್ನು ನೆಚ್ಚಿ ಕೆಡಬಾರದೆಂದೂ ನಾರಾಯಣನ ನಾಮ ಸ್ಮರಣೆ ಮಾಡಿ ಉದ್ಧಾರವಾಗಬೇಕೆಂದೂ ಹೇಳಿದ್ದಾರೆ.

## ೨೭

ನಾನೇ ದೇವರೆಂಬ ಮೋಹಕ್ಕೆ ಸಿಕ್ಕು ತಾನು ನಾರಾಯಣನ ದಾಸನೆನ್ನದೆ ದ್ರೋಹವನ್ನು ಬಗೆದಿರುವುದರಿಂದ ರಕ್ಷಿಸೆಂದು ಪ್ರಾರ್ಥಿಸಿದ್ದಾರೆ.

## ೨೮

ಈ ಪದದಲ್ಲಿ ಗೋವುಗಳಿಗೆ ರೋಗ ತಗುಲಿನ ಸಂದರ್ಭದಲ್ಲಿ ಗುಣಪಡಿಸೆಂದು ಶ್ರೀನಿವಾಸನ್ನು ಪ್ರಾರ್ಥಿಸಿರುವ ಹಾಗಿದೆ.

## ೨೯

ತಾವು ಪರಮಾತ್ಮನ ದಾಸಾನುದಾಸರೆಂದೂ ಸದಾ ದಾಸರುಗಳ ಸಂಗದಲ್ಲೇ ಇಡೆಂತಲೂ ಪ್ರಾರ್ಥಿಸಿದ್ದಾರೆ.

## ೩೦

ಈ ಜಗತ್ತಿನಲ್ಲಿ ಶ್ರೀನಿವಾಸನಲ್ಲದೆ ಬೇರೆ ರಕ್ಷಕರಾರೂ ಇಲ್ಲವೆಂದು ಅನೇಕ ಪುರಾಣ ಪ್ರಸಂಗಗಳನ್ನು ಉಲ್ಲೇಖಿಸುವುದರ ಮೂಲಕ ತಿಳಿಸಿದ್ದಾರೆ.

೩೧

ತಮ್ಮ ಕೊರತೆಗಳನ್ನು ಶ್ರೀನಿವಾಸನ ಮುಂದಿಟ್ಟು ರಕ್ಷಣೆಗಾಗಿ ಅವನ ಪಾದವನ್ನೇ ನಂಬಿರುವುದಾಗಿ ಹೇಳಿದ್ದಾರೆ.

೩೨

ಸಂಸಾರವೆಂಬ ದಟ್ಟ ಕಾಡಿನಲ್ಲಿ ಸಿಕ್ಕು ದಾರಿ ಕಾಣದಿರುವ ತಮಗೆ ಸಂಸಾರದಿಂದ ಬಿಡುಗಡೆಯ ದಾರಿ ತೋರಿಸೆಂದು ಶ್ರೀನಿವಾಸನನ್ನು ಪ್ರಾರ್ಥಿಸಿದ್ದಾರೆ.

೩೩

ಹುಲಿಗಿರಿ ನಿವಾಸನಾದ ವರದನನ್ನು ಒಂದು ಪಚ್ಚೆಮಣಿಗೆ ಹೋಲಿಸಿ ಅದು ಧ್ಯಾನ ಮಾಡುವವರಿಗೆ ಮಾತ್ರ ದೊರೆಯುವ ವಸ್ತುವೆಂದಿದ್ದಾರೆ.

೩೪

ವೆಂಕಟೇಶನ ಮಹಿಮಾತಿಶಯಗಳನ್ನು ವರ್ಣಿಸಿದ್ದಾರೆ.

೩೫

ತಮ್ಮಲ್ಲಿ ಅಸೂಯೆ, ಕೋಪ ಇತ್ಯಾದಿಗಳನ್ನು ತೋರದೆ ಕರುಣಿಸೆಂದು ಕೃಷ್ಣನನ್ನು ಪ್ರಾರ್ಥಿಸಿದ್ದಾರೆ.

೩೬

ತಾಪತ್ರಯ, ಅರಿಷಡ್ವರ್ಗ ಮೊದಲಾದವುಗಳಿಂದ ಬಿಡುಗಡೆಕೊಡೆಂದು ಪ್ರಾರ್ಥಿಸಿದ್ದಾರೆ.

೩೭

ದಶಾವತಾರಗಳನ್ನು ವರ್ಣಿಸುವುದರ ಮೂಲಕ ಶ್ರೀನಿವಾಸನನ್ನು ಸ್ತುತಿಸಿದ್ದಾರೆ.

೩೮

ಅನೇಕ ಪ್ರಸಂಗಗಳನ್ನು ಉಲ್ಲೇಖಿಸುವುದರ ಮೂಲಕ ನಾರಾಯಣನ ಪಾದಗಳ ಮಹಿಮೆಯನ್ನು ಕೊಂಡಾಡುತ್ತ ಅಂತಹ ಪಾದಗಳ ಸೇವೆಯನ್ನು ಕರುಣಿಸೆಂದು ಪ್ರಾರ್ಥಿಸಿದ್ದಾರೆ.

೩೯

ಇದು ಒಂದು ಬಹುಮಟ್ಟಿಗೆ ಸಂಸ್ಕೃತ ಪದಗಳಿಂದಲೇ ರಚಿತವಾದ ಕೃತಿ. ಇಲ್ಲಿ ಬಂದಿರುವ 'ಪೀತದನುಜಭವಭೀತಿದರ' ಎಂಬುದು ಲೋಕಕಂಟಕರಾಗಿದ್ದ ಹಿರಣ್ಯಾಕ್ಷ, ಹಿರಣ್ಯಕಶಿಪು ಇವರುಗಳ ನಿಗ್ರಹಕ್ಕೆ ಸಂಬಂಧಿಸಿದಂತಿದೆ.

೪೦

ಶ್ರೀನಿವಾಸನ ನಾನಾ ಲೀಲೆಗಳನ್ನು ಕೊಂಡಾಡಿ ಸ್ತೋತ್ರ ಮಾಡಿದ್ದಾರೆ.

೪೧

ಭಕ್ತರ ದುಷ್ಕರ್ಮಗಳನ್ನು ಅಪಹರಿಸುವವನೆಂದು ನಂಬಿ ಬರಿ ಕೈಯಲ್ಲಿ ಬರಬಾರದೆಂದು ತಮ್ಮ ಪಾಪಗಳನ್ನೇ ಕಾಣಿಕೆಯಾಗಿ ತಂದಿರುವುದಾಗಿ ಹೇಳಿದ್ದಾರೆ.

೪೨

ಗೋವುಗಳಿಗೆ ರೋಗ ತಗುಲಿದಾಗ ಗುಣಪಡಿಸೆಂದು ಪ್ರಾರ್ಥಿಸಿದ ಹಾಗಿದೆ. ಇದಕ್ಕೆ ಆಧ್ಯಾತ್ಮದ ಅರ್ಥವನ್ನೂ ಹಚ್ಚಬಹುದು. ಈ ಸಂದರ್ಭದಲ್ಲಿ ೨೮ನೇ ಪದವನ್ನೂ ನೋಡಬಹುದು.

೪೩

ವಸ್ತ್ರಾಭರಣಾದಿ-ಅಲಂಕಾರಗಳಿಂದಲೂ ವಾದ್ಯಪರಿವಾರ ಮೊದಲಾದುವುಗಳಿಂದಲೂ ಕೂಡಿ ಬರುತ್ತಿರುವ ಪುಲಿಗಿರಿ ವರದನನ್ನು ಸ್ತೋತ್ರ ಮಾಡಿದ್ದಾರೆ.

೪೪

ಸರ್ವಗುಣ ಸಂಪನ್ನನಾದ ಶ್ರೀನಿವಾಸನನ್ನು ಪೊರೆಯೆಂದು ಪ್ರಾರ್ಥಿಸಿದ್ದಾರೆ.

೪೫

ಭಾಗವತರ ಭಾಗ್ಯನಾದ ಶ್ರೀನಿವಾಸನನ್ನು ಬಾರೆಂದು ಮನೆಗೆ ಕರೆದಿದ್ದಾರೆ.

೪೬

ಪರಿವಾರ ಸಹಿತ ತಮ್ಮ ಮನೆಗೆ ಬರಬೇಕೆಂದೂ ಷೋಡಶೋಪಚಾರಾದಿ ಪೂಜೆಗಳಿಂದ ತಾವು ಸತ್ಕರಿಸುವುದಾಗಿಯೂ ಶ್ರೀಕೃಷ್ಣನನ್ನು ಕರೆದಿದ್ದಾರೆ.

೪೭

ಶಿವ-ಗೌರಿ ಮೊದಲಾದವರು ಜಪಿಸತಕ್ಕಂಥ ರಾಮನಾಮವನ್ನು ಬಿಡಲಾರೆನೆಂದು ಭಕ್ತಿಪರವಶರಾಗಿ ಹಾಡಿದ್ದಾರೆ.

೪೮

ಬಹಳಮಟ್ಟಿಗೆ ಸಂಸ್ಕೃತ ಪದಗಳಿಂದಲೇ ರಚಿತವಾದ ಕೃತಿ. ಶೇಷಶಾಯಿಯಾದ ನಾರಾಯಣನನ್ನು ಸ್ತುತಿಸಿದ್ದಾರೆ.

೪೯

ಶರಣರನ್ನು ಕಾಪಾಡುವ ವರದ ವಿಠಲನನ್ನು ಭಕ್ತಿಯಿಂದ ಭಜಿಸಬೇಕೆಂದಿದ್ದಾರೆ.

೫೦

ಬಹಳಮಟ್ಟಿಗೆ ಸಂಸ್ಕೃತ ಪದಗಳಿಂದಲೆ ರಚಿಸಿರುವ ಕೃತಿ. ಶ್ರೀನಿವಾಸನನ್ನು ಸ್ತೋತ್ರ ಮಾಡಿದ್ದಾರೆ.

೫೧

ತಮ್ಮ ಮೊರೆಯನ್ನು ಕೇಳಿ ಪಾಲಿಸೆಂದು ಶ್ರೀನಿವಾಸನನ್ನು ಪ್ರಾರ್ಥಿಸಿದ್ದಾರೆ.

ವಾರಿಧಿಮದಹರನೆಂದು ಶ್ರೀರಾಮನು ಸಮುದ್ರವನ್ನು ಶಾಂತಗೊಳಿಸಿದ ಪ್ರಸಂಗವನ್ನು ಉಲ್ಲೇಖಿಸಿದ್ದಾರೆ.

೫೨

ಪರಮಾತ್ಮನಲ್ಲಿ ಏನು ಇಲ್ಲದಿರುವುದಿಲ್ಲವೆಂಬುದೇ (ಇಲ್ಲವೆಂಬುದಿಲ್ಲವೆಂಬುದೆ) ಅವನ ಕೊರತೆಯೆಂದು ಚಮತ್ಕಾರಿತವಾಗಿ ಸ್ತುತಿ ಮಾಡಿದ್ದಾರೆ.

೫೩

ವ್ಯಾಘ್ರಾಚಲದಲ್ಲಿ ನಿಂತು ಭಕ್ತರನ್ನು ಅನುಗ್ರಹಿಸುತ್ತಿರುವ ಶ್ರೀನಿವಾಸನನ್ನು ಅವನ ಗುಣ, ಮಹಿಮಾತಿಶಯಗಳನ್ನೂ, ದಶಾವತಾರಗಳನ್ನು ವರ್ಣಿಸುವುದರ ಮೂಲಕ ಸ್ತೋತ್ರ ಮಾಡಿದ್ದಾರೆ.

೫೪

ತಮ್ಮ ಮನಸ್ಸಿನಲ್ಲಿ ಬಂದು ನೆಲೆಸೆಂದು ಕೃಷ್ಣನನ್ನು ಪ್ರಾರ್ಥಿಸಿದ್ದಾರೆ.

೫೫

ಪರಮಾತ್ಮನ ಅನೇಕ ಗುಣ ಮಹಿಮಾತಿಶಯಗಳನ್ನು ವರ್ಣಿಸಿ ಅವನನ್ನು ಮರೆತಿರಲು ಸಾಧ್ಯವಿಲ್ಲವೆಂದು ಹೇಳಿದ್ದಾರೆ.

೫೬

ಮಳೆಯನ್ನು ಪಾಲಿಸಬೇಕೆಂದು ಪರಮಾತ್ಮನನ್ನು ಪ್ರಾರ್ಥಿಸಿರುವ ಪದ. ತೋರಿಕೆಯ ಅರ್ಥವನ್ನಲ್ಲದೆ ಇದಕ್ಕೆ ಆಧ್ಯಾತ್ಮ ಪರವಾದ ಅರ್ಥವನ್ನು ಹಚ್ಚಲು ಸಾಧ್ಯತೆಯಿದೆ.

೫೭

ಅನೇಕ ಸಂಸ್ಕೃತ ಪದಗಳಿಂದ ಕೂಡಿದ ಕೃತಿ. ಮಹಿಮೆಗಳನ್ನು ವರ್ಣಿಸುವುದರ ಮೂಲಕ ಹುಲಿಗಿರಿಯ ಶ್ರೀನಿವಾಸನನ್ನು ಸ್ತೋತ್ರ ಮಾಡಿದ್ದಾರೆ.

೫೮

ಬಹಳಮಟ್ಟಿಗೆ ಸಂಸ್ಕೃತ ಪದಗಳಿಂದ ರಚಿತವಾಗಿರುವ ಕೃತಿ. ಪರಮಾತ್ಮನ ರೂಪಾತಿಶಯಗಳನ್ನು ವರ್ಣಿಸಿದ್ದಾರೆ.

೫೯

ಪರಮಾತ್ಮನನ್ನು ಒಂದು ಅಮೂಲ್ಯವಾದ ಮುತ್ತಿಗೆ ಹೋಲಿಸಿ ಅದು ಧ್ಯಾನಪರರಾದ ಮುನಿಗಳಿಗೆ ಮಾತ್ರ ಸ್ವಾಧೀನವಾದುದೆಂದಿದ್ದಾರೆ.

೬೦

ಪರಮಾತ್ಮನಲ್ಲಿರುವ ಗುಣಗಳನ್ನು ತಮ್ಮಲ್ಲಿರುವ ದೋಷಗಳನ್ನು ವರ್ಣಿಸಿದ್ದಾರೆ.

೬೧

ತನ್ನ ಮಾಯೆಯನ್ನು ಸಾಕು ಮಾಡಿ ತಮ್ಮನ್ನು ರಕ್ಷಿಸಬೇಕೆಂದು ಶ್ರೀನಿವಾಸನನ್ನು ಪ್ರಾರ್ಥಿಸಿದ್ದಾರೆ. ಈ ಪದದಲ್ಲಿ ದಶಾವತಾರಗಳು ಸೂಚಿಸಲ್ಪಟ್ಟಿವೆ.

೬೨

ಅನೇಕ ಸಂಸ್ಕೃತ ಪದಗಳಿಂದಾಗಿರುವ ಕೃತಿ. ಉಪಮಾನಗಳ ಮೂಲಕ ಶ್ರೀನಿವಾಸನ ಸೌಂದರ್ಯವನ್ನು ವರ್ಣಿಸಿದ್ದಾರೆ.

೬೩

ಲೋಕವನ್ನೇ ರಕ್ಷಿಸುವ ಶ್ರೀನಿವಾಸನಿಗೆ ತಮ್ಮ ಮೇಲೆ ಏಕೆ ಕರುಣೆ ಬಂದಿಲ್ಲವೆಂದು ಕೇಳಿದ್ದಾರೆ.

೬೪

ರಾಮಾಯಣದ ಪ್ರಸಂಗಗಳನ್ನು ಉಲ್ಲೇಖಿಸುತ್ತ ರಾಮನನ್ನು ಸ್ತೋತ್ರ ಮಾಡಿದ್ದಾರೆ.

೬೫

ಇದು ಒಂದು ಸಂಸ್ಕೃತ ಪದಗಳಿಂದಲೇ ತುಂಬಿ ಹೋಗಿರುವ ಕೃತಿ. ಸಮಗ್ರ ರಾಮಾಯಣ ಸಂಕ್ಷೇಪವಾಗಿ ಬಂದಿದೆ.

೬೬

ಬಹಳಮಟ್ಟಿಗೆ ಸಂಸ್ಕೃತ ಪದಗಳಿಂದಲೇ ಆಗಿರುವ ಕೃತಿ. ವರದನನ್ನು ಅನೇಕ ವಿಶೇಷಣಗಳಿಂದ ವರ್ಣಿಸಿದ್ದಾರೆ.

೬೭

ಸಂಸ್ಕೃತ ಪದಗಳಿಂದಲೇ ಕೂಡಿರುವ ವೆಂಕಟೇಶನ ಸ್ತೋತ್ರ

೬೮

ಅವನ ಪಾದಸೇವೆಯ ರುಚಿಯನ್ನನುಭವಿಸಿ ಅದೇ ಗತಿಯೆಂದು ಶರಣಾಗತನಾಗಿರುವ ತನ್ನನ್ನು ರಕ್ಷಿಸಬೇಕೆಂದು ಶ್ರೀನಿವಾಸನನ್ನು ಪ್ರಾರ್ಥಿಸಿದ್ದಾರೆ.

೬೯

ಶೇಷಾದ್ರಿಯ ಸೊಬಗನ್ನು ವರ್ಣಿಸಿ ಬೇರೆ ಬೇರೆ ಯುಗಗಳಲ್ಲಿ ಆ ಬೆಟ್ಟಕ್ಕಿದ್ದ ಹೆಸರುಗಳನ್ನು ಸೂಚಿಸಿ ಮಹಿಮೆಯನ್ನು ಹೇಳಿದ್ದಾರೆ.

೭೦

ಪರಮಾತ್ಮನ ಸರಿಸಮಾನರಾರೂ ಇಲ್ಲವೆಂದು ಸ್ತೋತ್ರ ಮಾಡಿದ್ದಾರೆ.

೭೧

ಸಂಸ್ಕೃತ ಪದಗಳಿಂದಲೇ ರಚಿತವಾಗಿರುವ ಶ್ರೀನಿವಾಸನ ಸ್ತೋತ್ರ.

೭೨

ನಾನೇ ದೇವರೆಂದು ಹೇಳಿಕೊಳ್ಳುವವರಿಗೆ ದುಃಖಗಳನ್ನು ಕೊಟ್ಟು ಸದ್ಭಕ್ತರನ್ನು ಕಾಪಾಡುವವನೆಂದು ಶ್ರೀನಿವಾಸನನ್ನು ಕೊಂಡಾಡಬೇಕೆಂದಿದ್ದಾರೆ.

೭೩

ರಾವಣನ ತಂಗಿಯಾದ ಶೂರ್ಪನಖಿಯು ರಾಮನನ್ನು ಮೋಹಿಸಿ ಕೃಷ್ಣಾವತಾರದಲ್ಲಿ ತನ್ನ ಮನೋರಥ ಕೈಗೂಡುವುದೆಂದು ವರ ಪಡೆದು ಮುಂದೆ ಗೋಕುಲದಲ್ಲಿ ರಾಧೆಯಾಗಿ ಜನಿಸಿ ತನ್ನ ಅಭಿಲಾಷೆಯನ್ನು ತೀರಿಸಿಕೊಂಡಳೆಂಬ ವೃತ್ತಾಂತ ಇಲ್ಲಿದೆ.

೭೪

ನಶ್ವರವಾದ ಐಹಿಕ ಸಂಪತ್ತನ್ನು ಬಯಸದೆ ಶ್ರೀನಿವಸನ ಪಾದ ಧ್ಯಾನ ಮಾಡಬೇಕಾಗಿ ಹೇಳಿದ್ದಾರೆ.

೭೫

ಶ್ರೀನಿವಾಸನ ನಾಮವನ್ನು ಗಾನ ಮಾಡುವವನೇ ಧೀರನೆಂದಿದ್ದಾರೆ.

೭೬

ಅನೇಕ ಪುರಾಣ ಪ್ರಸಂಗಗಳನ್ನು ಉಲ್ಲೇಖಿಸುತ್ತ ಪಾದಧ್ಯಾನವನ್ನು ಪಾಲಿಸೆಂದು ಶ್ರೀನಿವಾಸನನ್ನು ಪ್ರಾರ್ಥಿಸಿದ್ದಾರೆ.

೭೭

ಪುಲಿಗಿರಿಯ ಶ್ರೀನಿವಾಸನ ಮಹಿಮೆಯನ್ನು ಕೊಂಡಾಡಿ ಸೇವೆ ಮಾಡಬಯಸುವವರೆಲ್ಲರೂ ಬನ್ನಿರೆಂದಿದ್ದಾರೆ.

೭೮

ಇದು ಒಂದು ಸಂಸ್ಕೃತ ಪದಗಳಿಂದಲೆ ರಚಿತವಾಗಿರುವ ಸ್ತೋತ್ರ ಪದ ಧ್ಯಾನಾವಾಹನಾದಿ ಷೊಡಶೋಪಚಾರಗಳನ್ನು ಸ್ವೀಕರಿಸೆಂದು ಶ್ರೀನಿವಾಸನನ್ನು ಪ್ರಾರ್ಥಿಸಿದ್ದಾರೆ.

೭೯

ಶ್ರೀನಿವಾಸನ ರೂಪ ಗುಣಗಳನ್ನು ವರ್ಣಿಸಿ ಮಾಡಿರುವ ಈ ಸ್ತೊತ್ರ ಪದದಲ್ಲಿ ಸಂಸ್ಕೃತ ಪದಗಳೇ ಹೆಚ್ಚಾಗಿವೆ.

೮೦

ಇದು ಸಹ ಸಂಸ್ಕೃತ ಪದಗಳಿಂದಲೆ ರಚಿತವಾಗಿರುವ ಶ್ರೀನಿವಾಸನ ಸ್ತೋತ್ರ.

೮೧

ಇದೂ ಸಹ ಷಂಸ್ಕೃತ ಪದಗಳಿಂದಲೆ ರಚಿತವಾಗಿರುವ ಸ್ತೋತ್ರ.

೮೨

ಇದು ಒಂದು ಶ್ರೀನಿವಸನ ಸ್ತೋತ್ರ ಪದ.

೮೩

ಬಹಳಮಟ್ಟಿಗೆ ಸಂಸ್ಕೃತ ಪದಗಳಿಂದಲೇ ಆದ ಒಂದು ಕೃತಿ. ಶ್ರೀನಿವಾಸನ ರೂಪಲಾವಣ್ಯಾದಿಗಳನ್ನು ವರ್ಣಿಸಿ ಸ್ತೋತ್ರ ಮಾಡಿದ್ದಾರೆ.

೮೪

ಇದೂ ಸಹ ಸಂಸ್ಕೃತ ಪದಗಳಿಂದಲೇ ರಚಿತವಾಗಿರುವ ಕೃತಿ. ಅನೇಕ ಪ್ರಾಸಗಳನ್ನೊಳಗೊಂಡಿದ್ದು ಶ್ರಾವ್ಯವಾಗಿದೆ.

೮೫

ಇದು ಒಂದು ಅನೇಕ ಹಿಂದೂಸ್ಥಾನೀ ಪದಗಳುಳ್ಳ ಕೃತಿ. ಶ್ರೀನಿವಾಸನ ಧ್ಯಾನ ರಾಮನಾಮ ಜಪ, ದಾಸ ಜನರ ಸಹವಾಸ ಇತ್ಯಾದಿಗಳನ್ನು ಮಾಡಬೇಕೆಂದು ಹೇಳಿದ್ದಾರೆ.

೮೬

ಇದೂ ಸಹ ಸಂಸ್ಕೃತ ಪದಗಳಿಂದಲೆ ತುಂಬಿರುವ ಪದ. ವಿಷ್ಣುವಿನ ಅನೇಕ ರೂಪ, ಅವತಾರ ಲೀಲಾದಿಗಳನ್ನು ವರ್ಣಿಸಿದ್ದಾರೆ. ನುಡಿಗಳು ೧೮ ಇದ್ದು ಒಂದು ನುಡಿ ಬಿಟ್ಟು ಹೋಗಿರುವ ಹಾಗಿದೆ

೮೭

ದೇವಾದಿ ದೇವತೆಗಳಿಂದ ಸೇವ್ಯನಾದ ಶ್ರೀನಿವಾಸನನ್ನು ಕಾಪಡೆಂದು ಪ್ರಾರ್ಥಿಸಿದ್ದಾರೆ.

೮೮

ಶ್ರೀನಿವಾಸನನ್ನು ಸಲಹೆಂದು ಪ್ರಾರ್ಥಿಸಿದ್ದಾರೆ.

೮೯

ಸಂಸ್ಕೃತ ಪದಗಳಿಂದಲೇ ರಚಿತವಾಗಿರುವ ಒಂದು ಕೃತಿ. ಶ್ರೀನಿವಾಸನ ರೂಪ, ಗುಣ, ಮಹಿಮೆ ಇತ್ಯಾದಿಗಳನ್ನು ಕೊಂಡಾಡಿದ್ದಾರೆ.

೯೦

ಇದೂ ಸಹ ಸಂಸ್ಕೃತ ಪದಗಳಿಂದಲೇ ರಚಿತವಾಗಿರುವ ಕೃತಿ. ವೆಂಕಟೇಶನಲ್ಲಿ ಭಕ್ತಿ ಬೇಡಿದ್ದಾರೆ.

೯೧

ಈ ಕೃತಿಯು ಸಂಸ್ಕೃತ ಪದಗಳಿಂದಲೇ ರಚಿತವಾಗಿದೆ. ಪರಮಾತ್ಮನ ಮಹಿಮೆಯನ್ನು ವರ್ಣಿಸಿದ್ದಾರೆ.

೯೨

ಪರಮಾತ್ಮನ ಶರಣಾಗತ ರಕ್ಷಕತ್ವವನ್ನು ಅನೇಕ ಉದಾಹರಣೆಗಳ ಮೂಲಕ ವರ್ಣಿಸಿದ್ದಾರೆ. ವ್ಯಾಘ್ರಗಿರಿಯಲ್ಲಿ ಮಾಂಡವ್ಯ ಋಷಿಯನ್ನು ಹುಲಿಯ ಬಾಧೆಯಿಂದ ರಕ್ಷಿಸಿದ್ದನ್ನು ಸೂಚಿಸಿದ್ದಾರೆ.

೯೩

ಅನೇಕ ದೈಹಿಕ ಮಾನಸಿಕ ವೇದನೆಗಳನ್ನು ನಿವೇದಿಸಿಕೊಂಡು ಅವುಗಳನ್ನು ನಿವಾರಿಸೆಂದು ಶ್ರೀನಿವಾಸನನ್ನು ಪ್ರಾರ್ಥಿಸಿದ್ದಾರೆ.

೯೪

ಶ್ರೀನಿವಾಸನ ಗುಣ ರೂಪಾತಿಶಯಗಳನ್ನು ವರ್ಣಿಸಿ ಸ್ತೋತ್ರ ಮಾಡಿದ್ದಾರೆ. ಈ ಪದದಲ್ಲಿ ಸಮ ಸಂಖ್ಯೆಯ (೧೨) ನುಡಿಗಳಿದ್ದು ಒಂದು ನುಡಿ ಬಿಟ್ಟು ಹೋಗಿರುವಂತಿದೆ.

೯೫

ಸಂಸ್ಕೃತ ಪದಗಳಿಂದಲೇ ರಚಿತವಾಗಿರುವ ಕೃತಿ. ಶ್ರೀನಿವಾಸನ ಅಂಗಾಂಗಾಭರಣಾದಿಗಳನ್ನು ಬಣ್ಣಿಸಿದ್ದಾರೆ.

೯೬

ಪರಮಾತ್ಮನನ್ನು ಒಂದು ಹಣ್ಣಿಗೆ ಹೋಲಿಸಿ ಅನೇಕ ತಾತ್ವಿಕ ವಿಚಾರಗಳನ್ನು ಅಳವಡಿಸಿ ಸ್ತುತಿಸಿದ್ದಾರೆ.

೯೭

ಇದೂ ಸಹ ಸಂಸ್ಕೃತ ಪದಗಳಿಂದಲೇ ರಚಿತವಾಗಿರುವ ಒಂದು ಸ್ತೋತ್ರ ಪದ.

೯೮

ಹರಿಯ ಕೃಪೆಯಿಂದ ತಮಗೆ ತಂಬೂರಿ ದೊರೆತು ಆ ಮೂಲಕ ಅವನ ಕೀರ್ತನೆಗೆ ಅನುಕೂಲವಾಗಿದ್ದು ನಾಮ ಸ್ಮರಣೆಯ ಮಹತ್ವವನ್ನು ಹೇಳಿದ್ದಾರೆ. ಈ ಪದವನ್ನು ಆಧ್ಯಾತ್ಮದ ಪರವಾಗಿಯೂ ಅರ್ಥೈಸಬಹುದು.

11518



೯೯

ಸೃಷ್ಟಿ, ಸ್ಥಿತಿ ಲಯಗಳಿಗೆ ಕಾರಣನಾದ ಶ್ರೀನಿವಾಸನು ತಮ್ಮನ್ನು ಕಾಪಾಡಬೇಕೆಂದು ಕೇಳಿಕೊಂಡಿದ್ದಾರೆ.

೧೦೦

ಇದು ಅಲಮೇಲಮಂಗಾಮಣಿ ಎಂದು ಕರೆಸಿಕೊಳ್ಳುವ ಲಕ್ಷ್ಮೀದೇವಿಯ ಸ್ತೋತ್ರ ಅವಳ ರೂಪಾತಿಶಯವನ್ನು ಬಣ್ಣಿಸಿದ್ದಾರೆ. ಈ ಪದದಲ್ಲಿ ಅಂಕಿತವಿಲ್ಲದಿರುವುದನ್ನು ಗಮನಿಸಬಹುದು.

೧೦೧

ಲಕ್ಷ್ಮೀದೇವಿಯ ರೂಪಾತಿಶಯವನ್ನು ವರ್ಣಿಸಿ ಪಾಲಿಸೆಂದಿದ್ದಾರೆ.

೧೦೨

ಲಕ್ಷ್ಮೀದೇವಿಯ ರೂಪಲಾವಣ್ಯಾದಿಗಳನ್ನು ವರ್ಣಿಸಿ ಸ್ತೋತ್ರ ಮಾಡಿದ್ದಾರೆ.

# ಅನುಬಂಧ ೩

## ತಂದೆ ಮುದ್ದು ಮೋಹನ ವಿಠಲದಾಸರು ಕೊಟ್ಟ ಅಂಕಿತಗಳು

(ವಿಶೇಷ ಸೂಚನೆ : ಒಂದೇ ಅಂಕಿತವು ಅನೇಕರಿಗೆ ಕೊಡಲ್ಪಟ್ಟಿದೆ)

೧. ಅಕ್ರೂರವರದ ವಿಠಲ
೨. ಅಗಣಿತ ಮಹಿಮ ವಿಠಲ
೩. ಅಗಾಧ ಮಹಿಮ ವಿಠಲ
೪. ಅಚ್ಯುತಾನಂತ ವಿಠಲ
೫. ಅಚ್ಯುತಮೂರ್ತಿ ವಿಠಲ
೬. ಅಜಪಿತ ವಿಠಲ
೭. ಅಜಪಿತಸ್ವಾಮಿ ವಿಠಲ
೮. ಅನಂತಶಯನ ವಿಠಲ
೯. ಅನಾದಿಪುರುಷ ವಿಠಲ
೧೦. ಅನಾದಿಪುರುಷ ವಿಠಲ
೧೧. ಅನಂತಶಯನ ವಿಠಲ
೧೨. ಅನಂತಾನಂತ ವಿಠಲ
೧೩. ಅನಂತೇಶ ವಿಠಲ
೧೪. ಅಪಾರ ಮಹಿಮ ವಿಠಲ
೧೫. ಅಪಾರ ಮಹಿಮ ವಿಠಲ
೧೬. ಅಭಯಪ್ರದ ವಿಠಲ
೧೭. ಅಮಿತಗುಣಭರಿತ ವಿಠಲ
೧೮. ಅಮರೇಶ ವಿಠಲ
೧೯. ಅಮರೇಂದ್ರ ವಿಠಲ
೨೦. ಅನುಪಮಚರಿತ ವಿಠಲ
೨೧. ಅಮರೇಶ ವಂದ್ಯ ವಿಠಲ
೨೨. ಅಮರೇಂದ್ರ ವಂದ್ಯ ವಿಠಲ
೨೩. ಅರವಿಂದಾಕ್ಷ ವಿಠಲ
೨೪. ಅರವಿಂದ ನಾಭವಿಠಲ
೨೫. ಅವನೀಶ ವಿಠಲ
೨೬. ಅಸುರಾರಿ ವಿಠಲ
೨೭. ಅಸುರಾರಿ ವಿಠಲ
೨೮. ಆದಿನಾರಾಯಣ ವಿಠಲ
೨೯. ಆದಿಪುರುಷರಾಮ ವಿಠಲ
೩೦. ಆದಿಮೂರುತಿವಿಠಲ
೩೧. ಆದಿಕಾರಣಮೂರ್ತಿವಿಠಲ
೩೨. ಆದಿದೇವವಿಠಲ
೩೩. ಆನಂದಪೂರ್ಣವಿಠಲ
೩೪. ಆನಂದವಿಠಲ

೩೫. ಆನಂದಮೂರ್ತಿವಿಠಲ
೩೬. ಆನಂದಮಯವಿಠಲ
೩೭. ಆನಂದಪುರುಷವಿಠಲ
೩೮. ಆನಂದಸಾಂದ್ರವಿಠಲ
೩೯. ಆನಂದಸಾಂದ್ರ ವಿಠಲ
೪೦. ಆನಂದಪ್ರದ ವಿಠಲ
೪೧. ಆನಂದಲೀಲ ವಿಠಲ
೪೨. ಆನಂದ ಮೂರ್ತಿ ವಿಠಲ
೪೩. ಆನಂದ ಗುರುಮೂರ್ತಿ ವಿಠಲ
೪೪. ಆನಂದದಾಯಕ ವಿಠಲ
೪೫. ಆನಂದನಿಧಿ ವಿಠಲ
೪೬. ಆನಂದಾತ್ಮ ವಿಠಲ
೪೭. ಆನಂದನಿಧಿವಿಠಲ
೪೮. ಆನಂದರಸಪೂರ್ಣ ವಿಠಲ
೪೯. ಆನಂದಕರ ವಿಠಲ
೫೦. ಆನಂದತೀರ್ಥವರದ ವಿಠಲ
೫೧. ಆಪದ್ಬಾಂಧವ ವಿಠಲ
೫೨. ಅಪದ್ಬಾಂಧವ ವಿಠಲ
೫೩. ಆಶ್ರಿತವತ್ಸಲವಿಠಲ
೫೪. ಆಹ್ಲಾದಪ್ರದ ವಿಠಲ
೫೫. ಇಂದಿರೇಶ ವಿಠಲ
೫೬. ಇಂದಿರಾರಮಣ ವಿಠಲ
೫೭. ಇಂದಿರಾಪತಿ ವಿಠಲ
೫೮. ಇಂದಿರಾವಲ್ಲಭ
೫೯. ಇಷ್ಟಾರ್ಥಪ್ರದ
೬೦. ಇಂದಿರಾಧರ
೬೧. ಇಂದಿರಾ ಕಾಂತ ಮೋಹನ ವಿಠಲ
೬೨. ಇಂದೀವರಾಕ್ಷ ವಿಠಲ
೬೩. ಇಂದಿರಾಲೋಲ ವಿಠಲ
೬೪. ಇಂದಿರಾನಾಥ ವಿಠಲ
೬೫. ಇಂದಿರಾಲೋಲ ವಿಠಲ
೬೬. ಇಂದಿರಾರಾಧ್ಯ ವಿಠಲ
೬೭. ಉರಗಭೂಷಣವಂದ್ಯ ವಿಠಲ
೬೮. ಉರಗಶಯನ ವಿಠಲ
೬೯. ಉಪೇಂದ್ರಮಾಧವ ವಿಠಲ
೭೦. ಉದಧಿ ಶಯನ ವಿಠಲ
೭೧. ಉಪೇಂದ್ರ ವಿಠಲ
೭೨. ಉರಗಾದ್ರಿವಾಸ ವಿಠಲ
೭೩. ಉದಾರಗುಣಭರಿತ ವಿಠಲ
೭೪. ಕಮಲನಾಭಮೋಹನ ವಿಠಲ
೭೫. ಕರುಣಾಪೂರ್ಣಮೋಹನ ವಿಠಲ
೭೬. ಕೃಪಾಸಾಂದ್ರ ವಿಠಲ
೭೭. ಕರುಣಾಪಯೋನಿಧಿ ವಿಠಲ
೭೮. ಕಾಮಿತಾರ್ಥಪ್ರದ ವಿಠಲ
೭೯. ಕರುಣಾನಿಧಿ ವಿಠಲ
೮೦. ಕರುಣಾಕರವೆಂಕಟ ವಿಠಲ
೮೧. ಕರುಣಾಕರರಾಮ ವಿಠಲ
೮೨. ಕಮಲಾಕಾಂತ ವಿಠಲ
೮೩. ಕಲ್ಯಾಣಗುಣಪೂರ್ಣ ವಿಠಲ
೮೪. ಕಮಲಾಕ್ಷ ವಿಠಲ
೮೫. ಕಮಲಾನಾಥ ವಿಠಲ
೮೬. ಕಮಲನಾಭ ವಿಠಲ

೮೭. ಕರಿಗಿರೀಶ ವಿಠಲ
೮೮. ಕಾಮಜನಕ ವಿಠಲ
೮೯. ಕಮಲಾರಮಣ ವಿಠಲ
೯೦. ಕಂಜನಾಭ ಮೋಹನ ವಿಠಲ
೯೧. ಕೈವಲ್ಯಪತಿ ವಿಠಲ
೯೨. ಕೃಷ್ಣಾನಂದ ವಿಠಲ
೯೩. ಕಾಮಿತವರದವಿಠಲ
೯೪. ಕಮಲಾಪ್ರಿಯ ವಿಠಲ
೯೫. ಕಾರುಣ್ಯಮೂರ್ತಿ ವಿಠಲ
೯೬. ಕೃಪಾನಿಧಿ ವಿಠಲ
೯೭. ಕೃಪಾವಲೋಕನ ವಿಠಲ
೯೮. ಕೃಪಾಮೂರ್ತಿ ವಿಠಲ
೯೯. ಕಂಜನಾಭ ವಿಠಲ
೧೦೦. ಕೈವಲ್ಯದಾಯಕ ವಿಠಲ
೧೦೧. ಕರಿರಾಜವರದ ವಿಠಲ
೧೦೨. ಕೃಪಾನಿಧಿರಾಮ ವಿಠಲ
೧೦೩. ಕಲುಷದೂರ ವಿಠಲ
೧೦೪. ಕಲ್ಯಾಣಮೂರ್ತಿ ವಿಠಲ
೧೦೫. ಕಮಲಾಕಾಂತರಾಮ ವಿಠಲ
೧೦೬. ಕಮಲನಾಭರಾಮ ವಿಠಲ
೧೦೭. ಕಮಲಾಲೋಲ ವಿಠಲ
೧೦೮. ಕರುಣಾಮಯ ವಿಠಲ
೧೦೯. ಕರುಣಾಸಮುದ್ರ ವಿಠಲ
೧೧೦. ಕರುಣಾಳು ವಿಠಲ
೧೧೧. ಕಂತುಜನಕ ಶ್ರೀಕಾಂತ ವಿಠಲ
೧೧೨. ಕಮಲಾನಂದಪ್ರದ ವಿಠಲ
೧೧೩. ಕಾಂತೇಶ ವಿಠಲ
೧೧೪. ಕೈವಲ್ಯಪ್ರದ ವಿಠಲ
೧೧೫. ಕಲ್ಯಾಣಗುಣಭರಿತಸ್ವಾಮಿ ವಿಠಲ
೧೧೬. ಕಮಲೇಶ ವಿಠಲ
೧೧೭. ಕಮಲೇಶರಾಮ ವಿಠಲ
೧೧೮. ಕಮಲನಾಭಸ್ವಾಮಿ ವಿಠಲ
೧೧೯. ಕಮಲನಯನವಾಸುದೇವವಿಠಲ
೧೨೦. ಕಮನೀಯಗುಣಪೂರ್ಣ ವಿಠಲ
೧೨೧. ಕಮಲಾಲೋಲ ವಿಠಲ
೧೨೨. ಕನಕಾದ್ರಿವಾಸ ವಿಠಲ
೧೨೩. ಕಮಲನಾಥಸ್ವಾಮಿ ವಿಠಲ
೧೨೪. ಕಮಲಾನಂದಪ್ರದ ವಿಠಲ
೧೨೫. ಕನಕಗಿರಿವಾಸ ವೆಂಕಟೇಶ ವಿಠಲ
೧೨೬. ಕಮಲಾಪತಿ ವಾಸುದೇವ ವಿಠಲ
೧೨೭. ಕರಿಗಿರೀಶ ವಿಠಲ
೧೨೮. ಕರಿಗಿರಿವಾಸ ವಿಠಲ
೧೨೯. ಕಮಲಾಪತಿ ಮನೋಹರ ವಿಠಲ
೧೩೦. ಕೃಷ್ಣಾನಂದ ವಿಠಲ
೧೩೧. ರಾಂ ಕೃಷ್ಣಾನಂದ ವಿಠಲ
೧೩೨. ಕರುಣಾಕರ ಶ್ರೀಕೃಷ್ಣ ವಿಠಲ
೧೩೩. ಕಮಲಾಪ್ರಿಯ ವಿಠಲ
೧೩೪. ಕಮಲಾರಮಣ ವಿಠಲ

೧೩೫. ಕಮಲಾಶ್ರಯ ವಿಠಲ

೧೩೬. ಕಮಲಾಲೋಲ ವಿಠಲ

೧೩೭. ಕಮಲಾಕಾಂತಮೋಹನ ವಿಠಲ

೧೩೮. ಕಮಲಾರಮಣ ವಿಠಲ

೧೩೯. ಕಮಲೇಶಮೋಹನ ವಿಠಲ

೧೪೦. ಕಮಲಾಪತಿ ವಾಸುದೇವ ವಿಠಲ

೧೪೧. ಕಲ್ಯಾಣದಾಯಕ ವಿಠಲ

೧೪೨. ಕೃಷ್ಣಾರಮಣಪ್ರಿಯ ವಿಠಲ

೧೪೩. ಖಗಪತಿವಾಹನ ವಿಠಲ

೧೪೪. ಖಗರಾಜಗಮನ ವಿಠಲ

೧೪೫. ಗರುಡಗಮನ ವಿಠಲ

೧೪೬. ಗಂಗಾಜನಕ ವಿಠಲ

೧೪೭. ಗೋಪಾಲಕೃಷ್ಣ ವಿಠಲ

೧೪೮. ಗರುಡಧ್ವಜ ವರದ ವಿಠಲ

೧೪೯. ಗಂಗಾಪಿತ ವಿಠಲ

೧೫೦. ಗಜರಾಜವರದ ವಿಠಲ

೧೫೧. ಗಾನಲೋಲ ವಿಠಲ

೧೫೨. ಗುರುಮಧ್ವೇಶ ವಿಠಲ

೧೫೩. ಗುರುವೆಂಕಟ ವಿಠಲ

೧೫೪. ಗುಣಸಾಂದ್ರ ವಿಠಲ

೧೫೫. ಗುರುವರೇಶ ವಿಠಲ

೧೫೬. ಗುರುಮಾಧವ ವಿಠಲ

೧೫೭. ಗೋವಿಂದರಾಮ ವಿಠಲ

೧೫೮. ಗಾಂಗೇಯನುತ ವಿಠಲ

೧೫೯. ಗಂಗಾ ಜನಕರಾಮ ವಿಠಲ

೧೬೦. ಗುರುವರೇಶ ವಿಠಲ

೧೬೧. ಗೋಕುಲಾನಂದ ವಿಠಲ

೧೬೨. ಗಜವರದ ವಿಠಲ

೧೬೩. ಗುಣೋದಧಿ ವಿಠಲ

೧೬೪. ಗಾನಪ್ರಿಯ ವಿಠಲ

೧೬೫. ಗುರುವರೇಣ್ಯ ವಿಠಲ

೧೬೬. ಗುರುರಾಜ ಪ್ರಿಯ ವಿಠಲ

೧೬೭. ಗುಣಸಂಪನ್ನ ವಿಠಲ

೧೬೮. ಗುಣನಿಲಯ ವಿಠಲ

೧೬೯. ಗುಣಾರ್ಣವಸ್ವಾಮಿ ವಿಠಲ

೧೭೦. ಗರುಡವಾಹನ ವಿಠಲ

೧೭೧. ಗರುಡವಾಹನ ವಿಠಲ

೧೭೨. ಗಂಗಾಪಿತ ಮೋಹನ ವಿಠಲ

೧೭೩. ಗೋಪಾಲಸ್ವಾಮಿ ವಿಠಲ

೧೭೪. ಗಂಗಾಪತಿ ವಿಠಲ

೧೭೫. ಗಜೇಂದ್ರವರದ ವಿಠಲ

೧೭೬. ಗೋಪಾಲ ಮಾಧವ ವಿಠಲ

೧೭೭. ಗೋಪಾಲ ಸ್ವಾಮಿ ವಿಠಲ

೧೭೮. ಗುರುವೆಂಕಟೇಶ ವಿಠಲ

೧೭೯. ಗುರುಮುಖ್ಯಪ್ರಾಣಪತಿ ವಿಠಲ

೧೮೦. ಗುರುನಾಥ ವಿಠಲ

೧೮೧. ಗುರುಸ್ವಾಮಿ ವಿಠಲ

೧೮೨. ಗುಣಭರಿತ ವಿಠಲ

೧೮೩. ಗುರುಶ್ರೀನಾಥ ವಿಠಲ

೧೮೪. ಗುರುಗೋವಿಂದ ವಿಠಲ

೧೮೫. ಗುರುವಾಸುದೇವ ವಿಠಲ

೧೮೬. ಗುರುಜಯನಾಥ ವಿಠಲ

೧೮೭. ಚಾರುಚರಿತ ವಿಠಲ
೧೮೮. ಚಕ್ರಪಾಣಿ ವಿಠಲ
೧೮೯. ಚಂದ್ರಹಾಸವರದ ವಿಠಲ
೧೯೦. ಚಿನ್ಮಯ ವಿಠಲ
೧೯೧. ಚಿದಾನಂದ ವಿಠಲ
೧೯೨. ಚಿನ್ಮಯರೂಪಾನಂದ ವಿಠಲ
೧೯೩. ಚಿದಾನಂದಸ್ವಾಮಿ ವಿಠಲ
೧೯೪. ಚಿದಾನಂದ ವಿಠಲ
೧೯೫. ಜಗದೀಶ ವಿಠಲ
೧೯೬. ಜಯಜಯ ವಿಠಲ
೧೯೭. ಜಯದೇವ ವಿಠಲ
೧೯೮. ಜಾನಕೀರಮಣ ವಿಠಲ
೧೯೯. ಜಯರಾಮ ವಿಠಲ
೨೦೦. ಜಯಗೋಪಾಲ ವಿಠಲ
೨೦೧. ಜಯಾರಮಣ ವಿಠಲ
೨೦೨. ಜಯಾಪತಿ ವಿಠಲ
೨೦೩. ಜಯೇಶನರಹರಿ ವಿಠಲ
೨೦೪. ಜಾನಕೀಪತಿ ವಿಠಲ
೨೦೫. ಜಯಪ್ರದ ವಿಠಲ
೨೦೬. ಜನಾರ್ದನ ವಿಠಲ
೨೦೭. ಜಗದೊಡೆಯ ವಿಠಲ
೨೦೮. ಜಯರಘುವೀರ ವಿಠಲ
೨೦೯. ಜಯಪಾಂಡುರಂಗ ವಿಠಲ
೨೧೦. ಜಗತ್ಪತಿ ವಿಠಲ
೨೧೧. ಜಗದೇಕನಾಥ ವಿಠಲ
೨೧೨. ಜಗತ್ಪಾಲಕ ವಿಠಲ
೨೧೩. ಜಗದೋದ್ಧಾರಕ ವಿಠಲ
೨೧೪. ಜನಕಜಾ ವಲ್ಲಭ ವಿಠಲ
೨೧೫. ಜಯಪ್ರದ ಮೋಹನ ವಿಠಲ
೨೧೬. ಜಯಪ್ರದ ರಾಮ ವಿಠಲ
೨೧೭. ಜಯಾಲೋಲ ವಿಠಲ
೨೧೮. ಜಯಾಮೋಹನ ವಿಠಲ
೨೧೯. ಜಯನಾರಾಯಣ ವಿಠಲ
೨೨೦. ಜಯರಾಮಚಂದ್ರ ವಿಠಲ
೨೨೧. ಜನಾರ್ದನರಾಮ ವಿಠಲ
೨೨೨. ಜಗತ್ಪಾವನ ವಿಠಲ
೨೨೩. ಜಗತ್ಕಾರಣ ವಿಠಲ
೨೨೪. ಜಯನಾರಸಿಂಹ ವಿಠಲ
೨೨೫. ಜಗನ್ನಾಯಕ ವಿಠಲ
೨೨೬. ಜಗಸ್ವಾಮಿ ವಿಠಲ
೨೨೭. ಜಗತ್ಪತಿರಾಮ ವಿಠಲ
೨೨೮. ಜಗನ್ಮೋಹನ ವಿಠಲ
೨೨೯. ಜಯಜನಾರ್ದನ ವಿಠಲ
೨೩೦. ಜಗತ್ಪಾವನ ವಿಠಲ
೨೩೧. ಜಯಪರಾತ್ಪರ ವಿಠಲ
೨೩೨. ಜಯಶೀಲಕಾಮ ವಿಠಲ
೨೩೩. ಜಯಹರಿ ವಿಠಲ
೨೩೪. ಜಯಲಕ್ಷ್ಮೀಶ ವಿಠಲ
೨೩೫. ಜಯನಾಥ ವಿಠಲ
೨೩೬. ಜಯಪೂರ್ಣ ವಿಠಲ
೨೩೭. ಜಯಭಾರತೀರಮಣ ವಿಠಲ
೨೩೮. ಜಯಭಾರ್ಗವರಾಮ ವಿಠಲ
೨೩೯. ಜಯಮಂಗಳಪ್ರದ ವಿಠಲ

೨೪೦. ಜಯರಾಘವ ವಿಠಲ
೨೪೧. ಜಯ ರಾಮಚಂದ್ರ ವಿಠಲ
೨೪೨. ಜಯ ಮಾಧವ ವಿಠಲ
೨೪೩. ಜಯ ಲಕ್ಷ್ಮೀನರಸಿಂಹ ವಿಠಲ
೨೪೪. ಜಗತ್ಪಾವನ ಮೂರ್ತಿ ವಿಠಲ
೨೪೫. ಜಯರಘುನಾಥ ವಿಠಲ
೨೪೬. ಜಯನಾಥ ವಿಠಲ
೨೪೭. ಜನಕಜಾವಲ್ಲಭ ವಿಠಲ
೨೪೮. ಜಗನ್ಮೋಹನ ವಿಠಲ
೨೪೯ ಜಗತ್ಪಾಲಕ ಮೋಹನ ವಿಠಲ
೨೫೦ ಜಗದೀಶ ನಾರಾಯಣ ವಿಠಲ
೨೫೧ ಜಯಜಾನಕೀಕಾಂತ ವಿಠಲ
೨೫೨ ಜಗನ್ಮಯಮೂರ್ತಿ ವಿಠಲ
೨೫೩ ಜಯಮನೋಹರ ವಿಠಲ
೨೫೪ ಜಯತೀರ್ಥವರದ ವಿಠಲ
೨೫೫ ಜಯದೇವ ಹರಿ ವಿಠಲ
೨೫೬ ಜಗತ್ಪತಿ ಕೇಶವ ವಿಠಲ
೨೫೭ ಜಗತ್ಪತಿ ಕೇಶವ ವಿಠಲ
೨೫೮ ಜಯರಾಮಚಂದ್ರ ವಿಠಲ
೨೫೯ ಜಾನಕೀಪ್ರಿಯ ವಿಠಲ
೨೬೦ ಜಗದ್ರಕ್ಷಕ ವಿಠಲ
೨೬೧ ಜಯಾರಮಣಸ್ವಾಮಿ ವಿಠಲ
೨೬೨ ಜಯಮಾರುತೀಶ ವಿಠಲ
೨೬೩ ಜಯನಾರಾಯಣ ವಿಠಲ
೨೬೪ ಜಯಾಪತಿ ವಿಠಲ
೨೬೫ ಜಯಕೇಶವ ವಿಠಲ
೨೬೬ ಜಯಗೋಪಾಲ ವಿಠಲ
೨೬೭ ಜಯಹರಿ ವಿಠಲ
೨೬೮ ಜಯರಘುರಾಮಚಂದ್ರ ವಿಠಲ
೨೬೯ ಜಯಗೋಪಾಲಸ್ವಾಮಿ ವಿಠಲ
೨೭೦ ಜಯಾರಮಣ ಮೋಹನ ವಿಠಲ
೨೭೧ ಜಯಪದ್ಮಾಕ್ಷ ವಿಠಲ
೨೭೨ ಜಯನಾರಾಯಣ ಸ್ವಾಮಿ ವಿಠಲ
೨೭೩ ಜಯರಮಾಪತಿ ವಿಠಲ
೨೭೪ ಜಗನ್ನಿಯಾಮಕ ವಿಠಲ
೨೭೫ ಜಗನ್ಮಯರಾಮ ವಿಠಲ
೨೭೬ ಜಯತೀರ್ಥವರದ ವಿಠಲ
೨೭೭ ಜಯಗೋಪಾಲ ವಿಠಲ
೨೭೮ ಜಯದೇವೇಶ ವಿಠಲ
೨೭೯ ಜಯಶ್ರೀನಿವಾಸ ವಿಠಲ
೨೮೦ ಜಲಜಾಕ್ಷರಾಮ ವಿಠಲ
೨೮೧ ಜಯವೆಂಕಟೇಶ ವಿಠಲ
೨೮೨ ಜಯವಾಸುದೇವ ವಿಠಲ
೨೮೩ ತ್ರಿವಿಕ್ರಮ ವಿಠಲ
೨೮೪ ತತ್ವೇಶ ವಿಠಲ
೨೮೫ ತಂದೆಕೇಶವ ವಿಠಲ
೨೮೬ ತಂದೆರಾಘವೇಂದ್ರಗುರು ವಿಠಲ

೨೮೭ ತಂದೆ ನರಹರಿ ವಿಠಲ
೨೮೮ ದಯಾನಿಧಿ ವಿಠಲ
೨೮೯ ದಾಮೋದರ ವಿಠಲ
೨೯೦ ದಶರಥರಾಮ ವಿಠಲ
೨೯೧ ದಯಾಪೂರ್ಣ ವಿಠಲ
೨೯೨ ದಯಾಸಾಂದ್ರ ವಿಠಲ
೨೯೩ ದಯಾಮಯ ವಿಠಲ
೨೯೪ ದಯಾಕರ ವಿಠಲ
೨೯೫ ಧೃವವರದ ವಿಠಲ
೨೯೬ ದಾಶರಥಿ ವಿಠಲ
೨೯೭ ದೇವವರೇಣ್ಯ ವಿಠಲ
೨೯೮ ದಯಾಮೂರ್ತಿ ವಿಠಲ
೨೯೯ ಧರಾರಮಣ ವಿಠಲ
೩೦೦ ದಯಾಂಬುಧಿಕಾಯ ವಿಠಲ
೩೦೧ ದೇವನಾಥ ವಿಠಲ
೩೦೨ ದಯಾಪರಮೂರ್ತಿ ವಿಠಲ
೩೦೩ ದೇವರಾಜ ವಿಠಲ
೩೦೪ ದಿವ್ಯಮೂರ್ತಿ ವಿಠಲ
೩೦೫ ದೇವ ದೇವೋತ್ತಮ ವಿಠಲ
೩೦೬ ದೋಷರಹಿತ ವಿಠಲ
೩೦೭ ದೇವತಾಂತರ್ಗತ ವಿಠಲ
೩೦೮ ದೇವತಾಂತರ್ಯಾಮಿ ವಿಠಲ
೩೦೯ ದಿವ್ಯಮಂಗಳ ವಿಗ್ರಹ ವಿಠಲ
೩೧೦ ದೇವಾಶ್ರಯ ವಿಠಲ
೩೧೧ ಧನ್ವಂತರೀದೇವ ವಿಠಲ
೩೧೨ ದಶರಥಾತ್ಮಜ ವಿಠಲ
೩೧೩ ಧನ್ವಂತರಿದೇವ ವಿಠಲ
೩೧೪ ದಯಾನಂದಸ್ವಾಮಿ ವಿಠಲ
೩೧೫ ದೇವರಾಜ ವಿಠಲ
೩೧೬ ದೇವೇಶ ಸ್ವಾಮಿ ವಿಠಲ
೩೧೭ ದಯಾಮೂರ್ತಿ ವಿಠಲ
೩೧೮ ದೀನಜನಮಂದಾರ ವಿಠಲ
೩೧೯ ದೀನಜನಮಂದಾರ
ವರನಾರಸಿಂಹ ವಿಠಲ
೩೨೦ ನರಸಾರಥಿ ವಿಠಲ
೩೨೧ ನರಹರಿರಾಘವ ವಿಠಲ
೩೨೨ ನಾದಮೂರ್ತಿ ವಿಠಲ
೩೨೩ ನಾರದ ವರದ ವಿಠಲ
೩೨೪ ನಾಗಶಯನ ವಿಠಲ
೩೨೫ ನಿಗಮಗೋಚರ ವಿಠಲ
೩೨೬ ನಿತ್ಯಾನಂದ ವಿಠಲ
೩೨೭ ನೀಲಾಪತಿ ವಿಠಲ
೩೨೮ ನಿರ್ಜರೇಶ ವಿಠಲ
೩೨೯ ನಿರ್ಮಲಾತ್ಮಕ ವಿಠಲ
೩೩೦ ನಿರಾಮಯ ವಿಠಲ
೩೩೧ ನಿಜಾನಂದ ವಿಠಲ
೩೩೨ ನಿತ್ಯತೃಪ್ತ ವಿಠಲ
೩೩೩ ನಿತ್ಯನಂದಪ್ರದ ವಿಠಲ
೩೩೪ ನಿರ್ವಾಣದಾಯಕ ವಿಠಲ
೩೩೫ ನಿತ್ಯಸುಧಾಪ್ರಿಯ ವಿಠಲ
೩೩೬ ನೀರಜಸಂಭವನುತ ವಿಠಲ
೩೩೭ ನರಹರಿರಾಮಕೃಷ್ಣ ವಿಠಲ
೩೩೮ ನರಸಿಂಹದೇವ ವಿಠಲ
೩೩೯ ನಾರದ ವರದ ವಿಠಲ

೩೪೦ ನಾರದಪ್ರಿಯ ವಿಠಲ
೩೪೧ ನಾರಾಯಣವಾಸುದೇವ ವಿಠಲ
೩೪೨ ನರಹರಿಮೂರ್ತಿ ವಿಠಲ
೩೪೩ ನಾರಾಯಣ ವಿಠಲ
೩೪೪ ನಾರದವರದಶ್ರೀಶ ವಿಠಲ
೩೪೫ ನರಹರಿಮಾಧವ ವಿಠಲ
೩೪೬ ನಿರಾಮಯ ವಿಠಲ
೩೪೭ ನಾರದಪ್ರಿಯ ವಿಠಲ
೩೪೮ ನಿತ್ಯಾನಂದಮೂರ್ತಿ ವಿಠಲ
೩೪೯ ನಿತ್ಯಮಂಗಳಚರಿತ ವಿಠಲ
೩೫೦ ನಿತ್ಯಮಂಗಳಮೂರ್ತಿ ವಿಠಲ
೩೫೧ ನಿರವದ್ಯ ವಿಠಲ
೩೫೨ ಪ್ರಾಣನಾಥ ವಿಠಲ
೩೫೩ ಪರಮ ಪಾವನ ವಿಠಲ
೩೫೪ ಪರಮಪಾವನ ಮೂರ್ತಿ ವಿಠಲ
೩೫೫ ಪದ್ಮನಾಭ ವಿಠಲ
೩೫೬ ಪರಮಾನಂದ ವಿಠಲ
೩೫೭ ಪುರುಷೋತ್ತಮ ವಿಠಲ
೩೫೮ ಪಾರ್ಥಸಾರಥಿ ವಿಠಲ
೩೫೯ ಪರಿಪೂರ್ಣ ವಿಠಲ
೩೬೦ ಪ್ರಾಣಪತಿ ವಿಠಲ
೩೬೧ ಪುಂಡರೀಕಾಕ್ಷ ವಿಠಲ
೩೬೨ ಪ್ರಹ್ಲಾದವರದ ವಿಠಲ
೩೬೩ ಪಂಢರಿನಾಥ ವಿಠಲ
೩೬೪ ಪದ್ಮೇಶ ವಿಠಲ
೩೬೫ ಪುಂಡರೀಕ ವರದ ವಿಠಲ
೩೬೬ ಪದ್ಮಾವತಿಪ್ರಿಯ ವಿಠಲ
೩೬೭ ಪಂಕಜಾರಮಣ ವಿಠಲ
೩೬೮ ಪಂಕಜಾಸನವಂದ್ಯ ವಿಠಲ
೩೬೯ ಫಣಿರಾಜಶಯನ ವಿಠಲ
೩೭೦ ಪ್ರಾಣಮಯಪ್ರದ್ಯುಮ್ನ ವಿಠಲ
೩೭೧ ಪರಾತ್ಪರ ವಿಠಲ
೩೭೨ ಪ್ರಾಣಕಾಂತ ವಿಠಲ
೩೭೩ ಪ್ರಾಣವಲ್ಲಭ ವಿಠಲ
೩೭೪ ಪೂತಾತ್ಮ ವಿಠಲ
೩೭೫ ಪರಮಪುರುಷಾರ್ಥಪ್ರದ ವಿಠಲ
೩೭೬ ಪರಮಪವಿತ್ರ ವಿಠಲ
೩೭೭ ಪನ್ನಗಾಚಲನಿವಾಸ ವಿಠಲ
೩೭೮ ಪ್ರಣತಾರ್ತಿಹರ ವಿಠಲ
೩೭೯ ಪೂರ್ಣಬೋಧಪತಿ ವಿಠಲ
೩೮೦ ಪಟ್ಟಾಭಿರಾಮ ವಿಠಲ
೩೮೧ ಪವಮಾನವಂದಿತ ವಿಠಲ
೩೮೨ ಪರಾಕ್ರಮ ವಿಠಲ
೩೮೩ ಪರಸುಖಕಾರಣ ವಿಠಲ
೩೮೪ ಪೂರ್ಣಸೌಖ್ಯದಾಯಕ ವಿಠಲ
೩೮೫ ಪ್ರಾಣಪ್ರಿಯರಾಮ ವಿಠಲ
೩೮೬ ಪುರುಷೋತ್ತಮಕೃಷ್ಣ ವಿಠಲ
೩೮೭ ಪದ್ಮೇಶ ವಿಠಲ
೩೮೮ ಪುರಾತನ ಪುರುಷ ವಿಠಲ
೩೮೯ ಪರವಾಸುದೇವ ವಿಠಲ

೩೯೦ ಪವಮಾನವಂದಿತ ವಿಠಲ
೩೯೧ ಪ್ರಾಣೋತ್ತಮ ವಿಠಲ
೩೯೨ ಪುರುಷಾರ್ಥಪ್ರದ ವಿಠಲ
೩೯೩ ಪ್ರಸನ್ನ ಗೋವಿಂದ ವಿಠಲ
೩೯೪ ಪರಮಕೃಪಾಕರೇಶ ವಿಠಲ
೩೯೫ ಪರಬ್ರಹ್ಮ ವಿಠಲ
೩೯೬ ಪರಸೌಖ್ಯಪ್ರದ ವಿಠಲ
೩೯೭ ಪೂರ್ಣಕಾಮ ವಿಠಲ
೩೯೮ ಪರಾಕ್ರಮ ವಿಠಲ
೩೯೯ ಪರಮಪಾವನ ವಿಠಲ
೪೦೦ ಪರಮಪುರುಷೋತ್ತಮ ವಿಠಲ
೪೦೧ ಪಾವನ ಚರಿತ ವಿಠಲ
೪೦೨ ಪರಮಪಾವನಸ್ವಾಮಿ ವಿಠಲ
೪೦೩ ಪಾಂಡುರಂಗ ಪರಿಪೂರ್ಣ ವಿಠಲ
೪೦೪ ಪೂರ್ಣಸುಖಭರಿತ ವಿಠಲ
೪೦೫ ಪೂರ್ಣಜ್ಞಾನ ವಿಠಲ
೪೦೬ ಪ್ರಕಾಶಮಯ ವಿಠಲ
೪೦೭ ಪತಿಪ್ರೇರಕ ವಿಠಲ
೪೦೮ ಪಾರ್ವತೀಶವಿನುತ ವಿಠಲ
೪೦೯ ಪರಮಪಾವನ ಮೂರ್ತಿ ವಿಠಲ
೪೧೦ ಪೂರ್ಣಸುಖಭರಿತ ವಿಠಲ
೪೧೧ ಪರಮಾತ್ಮಪೂರ್ಣ ವಿಠಲ
೪೧೨ ಪೂರ್ಣಾನಂದಾತ್ಮಕ ವಿಠಲ
೪೧೩ ಪರಮಕೃಪಾನಿಧಿ ವಿಠಲ
೪೧೪ ಪಂಕಜನಾಭ ವಿಠಲ
೪೧೫ ಪರಮಪುರುಷ ವಿಠಲ
೪೧೬ ಪ್ರಾಣಕಾಂತಸ್ವಾಮಿ ವಿಠಲ
೪೧೭ ಪರಿಪೂರ್ಣಮೋಹನ ವಿಠಲ
೪೧೮ ಪ್ರಹ್ಲಾದಪೋಷಕ ವಿಠಲ
೪೧೯ ಪರಾವರೇಶ ವಿಠಲ
೪೨೦ ಪರಮಪುರುಷಕೃಷ್ಣ
೪೨೧ ಪದ್ಮವಲ್ಲಭ ವಿಠಲ
೪೨೨ ಫಣಿರಾಜಶಯನ ವಿಠಲ
೪೨೩ ಪರಮಶುಭಕರ ವಿಠಲ
೪೨೪ ಭಾವಜಪಿತ ವಿಠಲ
೪೨೫ ಭಯಹಾರಕ ವಿಠಲ
೪೨೬ ಭಾಗವತ ಜನಪ್ರಿಯ ವಿಠಲ
೪೨೭ ಭಾಗ್ಯದಾಯಕ ವಿಠಲ
೪೨೮ ಭವತಾರಕಹರಿ ವಿಠಲ
೪೨೯ ಭಕ್ತಪ್ರಿಯ ವಿಠಲ
೪೩೦ ಭುವನೇಶ ವಿಠಲ
೪೩೧ ಬದರೀನಾಥ ವಿಠಲ
೪೩೨ ಭಕ್ತವತ್ಸಲ ವಿಠಲ
೪೩೩ ಭೂಕಾಂತ ವಿಠಲ
೪೩೪ ಬ್ರಾಹ್ಮಾದಿವಂದ್ಯ ವಿಠಲ
೪೩೫ ಭೂದೇವಿಪತಿ ವಿಠಲ
೪೩೬ ಬಾಲಗೋಪಾಲ ವಿಠಲ
೪೩೭ ಭಾವಜಾರಿಪ್ರಿಯ ವಿಠಲ
೪೩೮ ಬಿಂದುಮಾಧವ ವಿಠಲ
೪೩೯ ಭುವನಾಧಿಪತಿ ವಿಠಲ
೪೪೦ ಬ್ರಾಹ್ಮಣದೇವ ವಿಠಲ

೪೪೧ ಭುವನೇಶ ವಿಠಲ
೪೪೨ ಭೀಮೇಶಕೃಷ್ಣ ವಿಠಲ
೪೪೩ ಭಯಪರಿಹಾರಕ ವಿಠಲ
೪೪೪ ಬದರೀವಾಸ ವಿಠಲ
೪೪೫ ಮಂಗಳಾಂಗ ವಿಠಲ
೪೪೬ ಮಾಧವಮೂರ್ತಿ ವಿಠಲ
೪೪೭ ಮಾರಜನಕಮೋಹನ ವಿಠಲ
೪೪೮ ಮಧ್ವಮುನಿವರದ ವಿಠಲ
೪೪೯ ಮಧ್ವವಲ್ಲಭ ವಿಠಲ
೪೫೦ ಮುಕ್ತಿದಾಯಕ ವಿಠಲ
೪೫೧ ಮುಕ್ತೇಶ ವಿಠಲ
೪೫೨ ಮಧುರಾನಿಲಯ ವಿಠಲ
೪೫೩ ಮಯಾವರದ ವಿಠಲ
೪೫೪ ಮುಕ್ತಾಶ್ರಯ ವಿಠಲ
೪೫೫ ಮಧ್ವನಾಥ ವಿಠಲ
೪೫೬ ಮಾಧವ ವಿಠಲ
೪೫೭ ಮಧ್ವೇಶ ವಿಠಲ
೪೫೮ ಮಧ್ವರಮಣ ವಿಠಲ
೪೫೯ ಮುರಳೀಲೋಲ ವಿಠಲ
೪೬೦ ಮಧುರಾನಾಥ ವಿಠಲ
೪೬೧ ಮಾಯಾರಮಣ ವಿಠಲ
೪೬೨ ಮಂಗಳಾತ್ಮಕರಾಮ ವಿಠಲ
೪೬೩ ಮಂದರಾದ್ರಿಧರ ವಿಠಲ
೪೬೪ ಮಧ್ವಪ್ರಿಯ ವಿಠಲ
೪೬೫ ಮಧುಸೂದನ್ನಮೋಹನ ವಿಠಲ
೪೬೬ ಮಧ್ವಾಂತರ್ಗತ ವಿಠಲ
೪೬೭ ಮೋಕ್ಷದಾಯಕ ವಿಠಲ
೪೬೮ ಮಾರಜನಕ ವಿಠಲ
೪೬೯ ಮಾಧವಮೋಹನ ವಿಠಲ
೪೭೦ ಮಾಮನೋಹರ ವಿಠಲ
೪೭೧ ಮಾರಮಣ ವಿಠಲ
೪೭೨ ಮಧುಸೂದನ ವಿಠಲ
೪೭೩ ಮಂಗಳಕರ ವಿಠಲ
೪೭೪ ಮಂಗಳನಾಮ ವಿಠಲ
೪೭೫ ಮಂಗಳಮೂರ್ತಿ ವಿಠಲ
೪೭೬ ಮಂಗಳಮೋಹನ ವಿಠಲ
೪೭೭ ಮಾರಜನಕ ವಿಠಲ
೪೭೮ ಮಾಮನೋಹರ ವಿಠಲ
೪೭೯ ಮನೋಮಯ ವಿಠಲ
೪೮೦ ಮಾರುತಿವಲ್ಲಭ
೪೮೧ ಮಾರುತೀಶ ವಿಠಲ
೪೮೨ ಮುಕುಂದಮುರಮರ್ದನ ವಿಠಲ
೪೮೩ ಮುಕ್ತೀಶ ವಿಠಲ
೪೮೪ ಮುಕುಂದಮೋದಪ್ರದ ವಿಠಲ
೪೮೫ ಮುಕ್ತಜನಾಶ್ರಯ ವಿಠಲ
೪೮೬ ಮುಕ್ತಿಕಾರಣ ವಿಠಲ
೪೮೭ ಮದ್ಗುರುಪ್ರಿಯ ವಿಠಲ
೪೮೮ ಮಾರುತಿಪ್ರಿಯ ವಿಠಲ
೪೮೯ ಮುಖ್ಯಕಾರಣ ವಿಠಲ
೪೯೦ ಮಂಗಳಮಹಿಮಶುಭಾಂಗ ವಿಠಲ

೪೯೧ ಮೋಹನಲೋಲ ವಿಠಲ
೪೯೨ ಮುರಾಂತಕ ವಿಠಲ
೪೯೩ ಮೋಹನಮೂರ್ತಿ ವಿಠಲ
೪೯೪ ಮಹಾಸ್ವಾಮಿ ವಿಠಲ
೪೯೫ ಮಂಗಳಮೂರ್ತಿ ವಿಹಂಗಗಮನ ವಿಠಲ
೪೯೬ ಮಾಧವಸ್ವಾಮಿ ವಿಠಲ
೪೯೭ ಮಾಧವನರಹರಿ ವಿಠಲ
೪೯೮ ಮುಕ್ತಿದಾಯಕಮಾರಮಣ ವಿಠಲ
೪೯೯ ಮುರಳೀಧರಮೋಹನ ವಿಠಲ
೫೦೦ ಮಮಸ್ವಾಮಿಹರಿ ವಿಠಲ
೫೦೧ ಮಧ್ವೇಶ ವೇದವ್ಯಾಸ ವಿಠಲ
೫೦೨ ಮಾರಮಣದೇವ ವಿಠಲ
೫೦೩ ಮಂಗಳಮಹಿಮ ವಿಠಲ
೫೦೪ ಮಧ್ವನಾಥ ವಿಠಲ
೫೦೫ ಮುಕ್ತಿದಾಯಕಮೋಹನ ವಿಠಲ
೫೦೬ ಮರುತಾಂತರ್ಗತಶ್ರೀ ವಿಠಲ
೫೦೭ ಮಾಯಾರಮಣಮೋಹನ ವಿಠಲ
೫೦೮ ಮಂಗಳಮೂರ್ತಿಮೋಹನ ವಿಠಲ
೫೦೯ ಮಧ್ವೇಶನರಹರಿ ವಿಠಲ
೫೧೦ ಮನೋಜ್ಞಮೂರ್ತಿ ವಿಠಲ
೫೧೧ ಮುನಿವಂದ್ಯ ವಿಠಲ
೫೧೨ ಯಾದವೇಶ ವಿಠಲ
೫೧೩ ಯಾದವ ವಿಠಲ
೫೧೪ ಯದುಕುಲನಂದನ ವಿಠಲ
೫೧೫ ಯಾದವೇಂದ್ರ ವಿಠಲ
೫೧೬ ಯಾದವಕೃಷ್ಣ ವಿಠಲ
೫೧೭ ಯಜ್ಞೇಶ ವಿಠಲ
೫೧೮ ಯೋಗೀಶ ವಿಠಲ
೫೧೯ ಯಾದವೇಶ ವಿಠಲ
೫೨೦ ಯಾದವೇಶಕೃಷ್ಣ ವಿಠಲ
೫೨೧ ಯೋಗಗಮ್ಯಸ್ವಾಮಿ ವಿಠಲ
೫೨೨ ಯದುನಾಥಮೋಹನ ವಿಠಲ
೫೨೩ ರಂಗೇಶ ವಿಠಲ
೫೨೪ ರಂಗನಾಥ ವಿಠಲ
೫೨೫ ರಘುರಾಮ ವಿಠಲ
೫೨೬ ರಮಾಕಾಂತ ವಿಠಲ
೫೨೭ ರಘುನಂದನ ವಿಠಲ
೫೨೮ ರಮಾನಂದ ವಿಠಲ
೫೨೯ ರಮೇಶ ವಿಠಲ
೫೩೦ ರಾಧಾಪ್ರಿಯ ವಿಠಲ
೫೩೧ ರುಕ್ಮಿಣೀಶ ವಿಠಲ
೫೩೨ ರಮಾನಾಥ ವಿಠಲ
೫೩೩ ರಮಾವಲ್ಲಭ ವಿಠಲ
೫೩೪ ರಘುರಾಮಚಂದ್ರ ವಿಠಲ
೫೩೫ ರಮಾಧವರಾಮ ವಿಠಲ
೫೩೬ ರಾಜೀವಲೋಚನ ವಿಠಲ
೫೩೭ ರಮಾಪತಿ ವಿಠಲ
೫೩೮ ರಮಾರಮಣ ಮೋಹನ ವಿಠಲ

೫೩೯ ರಮಾಮನೋಹರರಾಮ ವಿಠಲ
೫೪೦ ರಾಮಗೋವಿಂದ ವಿಠಲ
೫೪೧ ರಮಾಮನೋಹರ ವಿಠಲ
೫೪೨ ರಮಾವರ ವಿಠಲ
೫೪೩ ರಾಮರಾಮ ವಿಠಲ
೫೪೪ ರಮಾರಮಣ ವಿಠಲ
೫೪೫ ರಮಾಮನೋವಲ್ಲಭ ವಿಠಲ
೫೪೬ ರಮಾಪ್ರಿಯ ವಿಠಲ
೫೪೭ ರಾಮಕೃಷ್ಣ ವಿಠಲ
೫೪೮ ರಮಾರಮಣ ರಾಮ ವಿಠಲ
೫೪೯ ರಮಾನಾಥಮೋಹನ ವಿಠಲ
೫೫೦ ರಾಜೇಂದ್ರರಾಯ ವಿಠಲ
೫೫೧ ರಾಘವೇಶರಾಮ ವಿಠಲ
೫೫೨ ರಮಾನಂದಶ್ರೀಶ ವಿಠಲ
೫೫೩ ರಘುಕುಲಸ್ವಾಮಿ ವಿಠಲ
೫೫೪ ರಘುವರ ವಿಠಲ
೫೫೫ ರಘುನಂದನ ದೇವ ವಿಠಲ
೫೫೬ ರಾಘವೇಂದ್ರ ವಿಠಲ
೫೫೭ ರಮಾಮನೋವಲ್ಲಭ ವಿಠಲ
೫೫೮ ರಮಾವಿನುತ ವಿಠಲ
೫೫೯ ರಮಾಮನೋವಲ್ಲಭ ವಿಠಲ
೫೬೦ ರುಕ್ಮಿಣೀಕಾಂತ ವಿಠಲ
೫೬೧ ರಮಾಪ್ರಿಯ ವಿಠಲ
೫೬೨ ರಾಮಸ್ವಾಮಿ ವಿಠಲ
೫೬೩ ರಮಾರಮಣಮನೋಹರ ವಿಠಲ
೫೬೪ ರಾಮಚಂದ್ರವರದ ವಿಠಲ
೫೬೫ ರಮೇಶಸ್ವಾಮಿ ವಿಠಲ
೫೬೬ ರಾಮಕೃಷ್ಣಹರಿ ವಿಠಲ
೫೬೭ ರಮಾಲೋಲ ವಿಠಲ
೫೬೮ ರಘುನಂದನರಾಮ ವಿಠಲ
೫೬೯ ರಮಾನಾಥ ವಿಠಲ
೫೭೦ ರಮೇಶಮೋಹನ ವಿಠಲ
೫೭೧ ರಾಜಾರಾಮ ವಿಠಲ
೫೭೨ ರಘುರಾಮಚಂದ್ರ ವಿಠಲ
೫೭೩ ರಮಾಲೋಲ ವಿಠಲ
೫೭೪ ರಘುಪತಿರಾಮ ವಿಠಲ
೫೭೫ ಲಕ್ಷ್ಮೀನರಸಿಂಹ ವಿಠಲ
೫೭೬ ಲಕ್ಷ್ಮೀಧವ ವಿಠಲ
೫೭೭ ಲಕ್ಷ್ಮೀರಮಣ ವಿಠಲ
೫೭೮ ಲೋಕೇಶ ವಿಠಲ
೫೭೯ ಲಕುಮೀಶ ವಿಠಲ
೫೮೦ ಲಕ್ಷ್ಮೀನಾರಾಯಣ ಮೋಹನ ವಿಠಲ
೫೮೧ ಲಕ್ಷ್ಮೀಮನೋಹರ ವಿಠಲ
೫೮೨ ಲಕ್ಷ್ಮೀನಿವಾಸ ವಿಠಲ
೫೮೩ ಲಕ್ಷ್ಮೀಪ್ರಿಯ ವಿಠಲ
೫೮೪ ಲಕ್ಷ್ಮೀಪ್ರಿಯ ವಿಠಲ
೫೮೫ ಲಕ್ಷ್ಮೀನರಸಿಂಹ ವಿಠಲ
೫೮೬ ಲಕ್ಷ್ಮೀನಾರಾಯಣ ವಿಠಲ
೫೮೭ ಲಕ್ಷ್ಮೀನಾಥ ವಿಠಲ
೫೮೮ ಲಕ್ಷ್ಮೀಶ ವಿಠಲ
೫೮೯ ಲೋಕವಲ್ಲಭ ವಿಠಲ

೫೯೦ ಲಕ್ಷ್ಮೀವಿಲೋಲ ವಿಠಲ
೫೯೧ ಲಾವಣ್ಯಮೂರ್ತಿ ವಿಠಲ
೫೯೨ ಲಕ್ಷ್ಮೀಶ ವಿಠಲ
೫೯೩ ಲೋಕಬಂಧು ವಿಠಲ
೫೯೪ ಲೋಕನಾಥ ವಿಠಲ
೫೯೫ ಲೋಕೇಶಮೋಹನ ವಿಠಲ
೫೯೬ ಲಕ್ಷ್ಮೀಶಮೋಹನ ವಿಠಲ
೫೯೭ ಲಕ್ಷ್ಮೀಪತಿವರದ ವಿಠಲ
೫೯೮ ಲೋಕಪಾವನಸ್ವಾಮಿ ವಿಠಲ
೫೯೯ ಲೋಕನಾಥ ವಿಠಲ
೬೦೦ ಲಾವಣ್ಯಗುಣನಿಧಿ ವಿಠಲ
೬೦೧ ಲೀಲಾಮೂರ್ತಿ ವಿಠಲ
೬೦೨ ಲೋಕಪ್ರಿಯರಾಮ ವಿಠಲ
೬೦೩ ಲಕ್ಷ್ಮೀಮನೋಹರ ವಿಠಲ
೬೦೪ ಲಕ್ಷ್ಮೀರಮಣಮೋಹನ ವಿಠಲ
೬೦೫ ಲಕ್ಷ್ಮೀನಾರಾಯಣ ವಿಠಲ
೬೦೬ ಲಕ್ಷ್ಮೀನರಸಿಂಹಸ್ವಾಮಿ ವಿಠಲ
೬೦೭ ಲಕ್ಷ್ಮೀಕಾಂತ ವಿಠಲ
೬೦೮ ಲಕ್ಷ್ಮೀಪತಿ ವಿಠಲ
೬೦೯ ಲಕ್ಷ್ಮೀನೃಸಿಂಹ ವಿಠಲ
೬೧೦ ವರದ ವಿಠಲ
೬೧೧ ವರೇಶ ವಿಠಲ
೬೧೨ ವಾರಿಜವದನ ವಿಠಲ
೬೧೩ ವೆಂಕಟಾಚಲ ವಿಠಲ
೬೧೪ ವೆಂಕಟಗಿರಿವಾಸ ವಿಠಲ
೬೧೫ ವರದಮೋಹನ ವಿಠಲ
೬೧೬ ವರದೇಶ ವಿಠಲ
೬೧೭ ವರಗುರುಗೋಪಾಲ ವಿಠಲ
೬೧೮ ವೈಕುಂಠ ವಾಸ ವಿಠಲ
೬೧೯ ವರಗುರುಮಧ್ವೇಶ ವಿಠಲ
೬೨೦ ವೇಣುಗಾನಪ್ರಿಯ ವಿಠಲ
೬೨೧ ವಟಪತ್ರಶಯನ ವಿಠಲ
೬೨೨ ವೆಂಕಟರಮಣ ವಿಠಲ
೬೨೩ ವಿಶ್ವೇಶ ವಿಠಲ
೬೨೪ ವೆಂಕಟಾಚಲಸ್ವಾಮಿ ವಿಠಲ
೬೨೫ ವೇದಗೋಚರ ವಿಠಲ
೬೨೬ ವಿಶ್ವರಕ್ಷಕ ವಿಠಲ
೬೨೭ ವಿಶ್ವಂಭರ ವಿಠಲ
೬೨೮ ವಿಹಂಗನಾಥಗಮನ ವಿಠಲ
೬೨೯ ವಿಹಗೇಂದ್ರಗಮನ ವಿಠಲ
೬೩೦ ವೆಂಕಟಗಿರಿನಾಥ ವಿಠಲ
೬೩೧ ವಿಶ್ವಾಧಾರ ವಿಠಲ
೬೩೨ ವರದರಾಜ ವಿಠಲ
೬೩೩ ವರದಾಯಕ ವಿಠಲ
೬೩೪ ವಸುದೇವಸುತಶ್ರೀಶ ವಿಠಲ
೬೩೫ ವೆಂಕಟರಾಮ ವಿಠಲ
೬೩೬ ವಿಶ್ವಮೋಹನದೇವ ವಿಠಲ
೬೩೭ ವಿಶ್ವೇಶಪೂರ್ಣ ವಿಠಲ
೬೩೮ ವಿದ್ಯಾಧೀಶ ವಿಠಲ
೬೩೯ ವೈರಾಗ್ಯನಿಧಿ ವಿಠಲ
೬೪೦ ವೈಕುಂಠ ನಾರಾಯಣ ವಿಠಲ
೬೪೧ ವರವಾಸುದೇವ ವಿಠಲ
೬೪೨ ವಿಜಯರಘುಪತಿ ವಿಠಲ

೬೪೩ ವಿಜಯರಘುಪತಿ ವಿಠಲ

೬೪೪ ವಿಜಯಮಿತ್ರ ವಿಠಲ

೬೪೫ ವಿಶೋಕ ವಿಠಲ

೬೪೬ ವೆಂಕಟನಾಥ ವಿಠಲ

೬೪೭ ವಿದ್ಯಾಧೀಶ ವಿಠಲ

೬೪೮ ವೇದಸುವೇದ್ಯ ವಿಠಲ

೬೪೯ ವಾರಿಜನಾಭ ವಿಠಲ

೬೫೦ ವೇದಮಯ ವಿಠಲ

೬೫೧ ವಾಜಿವದನ ವಿಠಲ

೬೫೨ ವಿಶ್ವಕಾರಣ ವಿಠಲ

೬೫೩ ವಿದ್ಯಾಪತಿ ವಿಠಲ

೬೫೪ ವಿದ್ಯಾನಿಧಿ ವಿಠಲ

೬೫೫ ವಾಸುದೇವಸರ್ವೋತ್ತಮ ವಿಠಲ

೬೫೬ ವಸುದೇವಸುತಕೃಷ್ಣ ವಿಠಲ

೬೫೭ ವಿಜಯರಂಗೇಶ ವಿಠಲ

೬೫೮ ವ್ಯಾಸಮುನಿವರದ ವಿಠಲ

೬೫೯ ವರದರಾಜ ವಿಠಲ

೬೬೦ ವೆಂಕಟಾದ್ರಿವಾಸ ವಿಠಲ

೬೬೧ ವರದಗೋಪಾಲ ವಿಠಲ

೬೬೨ ವಾಸುದೇವಮೂರ್ತಿ ವಿಠಲ

೬೬೩ ವಾಸುದೇವಾನಂದ ವಿಠಲ

೬೬೪ ವಸುದೇವಸುತಮೋಹನ ವಿಠಲ

೬೬೫ ವಾಸುದೇವಾನಂದ ವಿಠಲ

೬೬೬ ವೇದೇಶ ವಿಠಲ

೬೬೭ ವಸುದೇವಸುತ ವಿಠಲ

೬೬೮ ವಿಶ್ವನಾಥ ವಿಠಲ

೬೬೯ ವಿಜಯಸಾರಥಿ ವಿಠಲ

೬೭೦ ವಿಷ್ಣುಸರ್ವೋತ್ತಮ ವಿಠಲ

೬೭೧ ವಿಧಿಜನಕ ವಿಠಲ

೬೭೨ ಶಿರಿಮನೋಹರ ವಿಠಲ

೬೭೩ ಶ್ರೀನಾಥ ವಿಠಲ

೬೭೪ ಶಿರಿರಾಮ ವಿಠಲ

೬೭೫ ಶ್ರೀಲೋಲ ವಿಠಲ

೬೭೬ ಶ್ರೀನಿಧಿ

೬೭೭ ಶುಭಗುಣಭರಿತ ವಿಠಲ

೬೭೮ ಶ್ರೀಧರ ಮೋಹನ ವಿಠಲ

೬೭೯ ಶಿರಿ ರಘುರಾಮ ವಿಠಲ

೬೮೦ ಶ್ರೀಪ್ರಾಣನಾಥಮೋಹನ ವಿಠಲ

೬೮೧ ಶ್ರೀದಸರ್ವೇಶ ವಿಠಲ

೬೮೨ ಶಿರಿರಮಾಧವ ವಿಠಲ

೬೮೩ ಶ್ರೀಕಾಂತ ಮೋಹನ ವಿಠಲ

೬೮೪ ಶ್ರೀಕಾಂತ ವಿಠಲ

೬೮೫ ಶ್ರೀಪತಿ ಮೋಹನ ವಿಠಲ

೬೮೬ ಶಿರಿ ಇಂದಿರಾಪತಿ ವಿಠಲ

೬೮೭ ಶಿರಿಕೃಪಾನಿಧಿರಾಮ ವಿಠಲ

೬೮೮ ಶಿರಿವಲ್ಲಭ ವಿಠಲ

೬೮೯ ಶಿರಿ ಗೋವಿಂದ ವಿಠಲ

೬೯೦ ಶಿರಿರಾಮಕೃಷ್ಣ ವಿಠಲ

೬೯೧ ಶಿರಿರಮಣ ವಿಠಲ

೬೯೨ ಶಿರಿಮಾಧವ ವಿಠಲ

೬೯೩ ಶಿರಿನಿಧಿ ವಿಠಲ

೧೯೪ ಶ್ರೀಧರ ವಿಠಲ
೧೯೫ ಶ್ರೀಕೃಷ್ಣ ವಿಠಲ
೧೯೬ ಶೇಷಾದ್ರೀಶ ವಿಠಲ
೧೯೭ ಶಿರಿಸತ್ಯೇಶ ವಿಠಲ
೧೯೮ ಶಿರಿನಾಥ ವಿಠಲ
೧೯೯ ಶಿರಿರಮೇಶ ವಿಠಲ
೨೦೦ ಶ್ರೀರಮಣ ವಿಠಲ
೨೦೧ ಶಿರಿನಾರಾಯಣ ವಿಠಲ
೨೦೨ ಶಿರಿಗೋಪಾಲಕೃಷ್ಣ ವಿಠಲ
೨೦೩ ಶಿರಿರಂಗಮೂರ್ತಿ ವಿಠಲ
೨೦೪ ಶಿರಿಮುಕುಂದ ವಿಠಲ
೨೦೫ ಶಿರಿಕೇಶವ ವಿಠಲ
೨೦೬ ಶ್ರೀಮನೋಹರ ವಿಠಲ
೨೦೭ ಶ್ರೀಗುರುನಾಥ ವಿಠಲ
೨೦೮ ಶಿಷ್ಟಜನಪರಿಪಾಲಕ ವಿಠಲ
೨೦೯ ಶ್ರೀಜಯನಾಥ ವಿಠಲ
೨೧೦ ಶ್ರೀರಂಗಮೂರ್ತಿ ವಿಠಲ
೨೧೧ ಶಾಂತಪ್ರಿಯ ವಿಠಲ
೨೧೨ ಶ್ರೀಪತಿರಾಮ ವಿಠಲ
೨೧೩ ಶ್ರೀದೇವಿಪತಿ ವಿಠಲ
೨೧೪ ಶ್ರೀಶಸರ್ವೇಶ ವಿಠಲ
೨೧೫ ಶ್ರೀಇಂದಿರಾಲೋಲ ವಿಠಲ
೨೧೬ ಶ್ರೀಕರಾರ್ಚಿತ ವಿಠಲ
೨೧೭ ಶ್ರೀಕಾಂತರಾಮ ವಿಠಲ
೨೧೮ ಶುಭಗುಣಸಾಂದ್ರ ವಿಠಲ
೨೧೯ ಶಿರಿಪ್ರಾಣಪತಿ ವಿಠಲ
೨೨೦ ಶ್ರೀಲಕ್ಷ್ಮೀಲೋಲ ವಿಠಲ
೨೨೧ ಶ್ರೀಕಾಂತಮನೋಹರ ವಿಠಲ
೨೨೨ ಶ್ರೀಪ್ರಾಣಪ್ರಿಯ ವಿಠಲ
೨೨೩ ಶ್ರೀ ರಾಮಮೂರ್ತಿ ವಿಠಲ
೨೨೪ ಶಾಂತಮೂರ್ತಿ ವಿಠಲ
೨೨೫ ಶ್ರೀರಾಮಮನೋಹರ ಮೂರ್ತಿ ವಿಠಲ
೨೨೬ ಶ್ರೀಕರಾರ್ಚಿತವರ ವಿಠಲ
೨೨೭ ಶರ್ವಾದಿಪತಿವಂದ್ಯ ವಿಠಲ
೨೨೮ ಶ್ರೀಲಕ್ಷ್ಮೀವೆಂಕಟೇಶ ವಿಠಲ
೨೨೯ ಶ್ರೀಮನೋಹರರಾಮ ವಿಠಲ
೨೩೦ ಶ್ರೀನಿವಾಸತಂದೆ ವಿಠಲ
೨೩೧ ಶ್ರೀದೇವಿರಮಣ ವಿಠಲ
೨೩೨ ಶ್ರೀಮಾರುತೀಶ ವಿಠಲ
೨೩೩ ಶ್ರುತಿಪ್ರತಿಪಾದ್ಯ ವಿಠಲ
೨೩೪ ಶ್ರೀರಾಮಕೃಷ್ಣ ವಿಠಲ
೨೩೫ ಶುಭಫಲದಾಯಕ ವಿಠಲ
೨೩೬ ಶ್ರೀನಿವಾಸಮೂರ್ತಿ ವಿಠಲ
೨೩೭ ಶ್ರೀರಮಣರಾಮ ವಿಠಲ
೨೩೮ ಶ್ರೀಮಾಧವಮೋಹನ ವಿಠಲ
೨೩೯ ಶ್ರೀರಮಾಮನೋವಲ್ಲಭ ವಿಠಲ
೨೪೦ ಶ್ರೀಗೋಪಾಲರಾಮ ವಿಠಲ
೨೪೧ ಶ್ರೀನಾಥಸುಂದರ ವಿಠಲ
೨೪೨ ಶ್ರೀಹರಿಮೋಹನ ವಿಠಲ
೨೪೩ ಶ್ರೀನರಹರಿಗುರುನಾಥ ವಿಠಲ
೨೪೪ ಶ್ರೀಕಾಂತರಾಮ ವಿಠಲ
೨೪೫ ಶ್ರೀಪತಿಕೃಷ್ಣ ವಿಠಲ

೨೪೬ ಶಾಂತಿಪ್ರಿಯ ವಿಠಲ

೨೪೭ ಶ್ರೀಕಾಂತಪೂರ್ಣ ವಿಠಲ

೨೪೮ ಶ್ರೀಕಾಂತೇಶಪ್ರಿಯ ವಿಠಲ

೨೪೯ ಶಾಂತಿದಾಯಕ ವಿಠಲ

೨೫೦ ಶ್ರೀರಮಣಪ್ರಿಯ ವಿಠಲ

೨೫೧ ಶ್ರೀಶನರಹರಿ ವಿಠಲ

೨೫೨ ಶ್ರೀಲೋಲಕೇಶವ ವಿಠಲ

೨೫೩ ಶಿರಿಜಯನಾರಾಯಣ ವಿಠಲ

೨೫೪ ಶ್ರೀವಾಸ ವಿಠಲ

೨೫೫ ಶ್ರೀಕಾಂತಸರ್ವೇಶ ವಿಠಲ

೨೫೬ ಶ್ರೀರಂಗಮೂರ್ತಿ ವಿಠಲ

೨೫೭ ಶ್ರೀಕಾಂತಮೂರ್ತಿ ವಿಠಲ

೨೫೮ ಶ್ರೀರಾಮ ವಿಠಲ

೨೫೯ ಶ್ರೀನಿವಾಸರಾಮ ವಿಠಲ

೨೬೦ ಶ್ರೀಕಾಂತಸ್ವಾಮಿ ವಿಠಲ

೨೬೧ ಶ್ರೀರಾಮವಿಠಲ

೨೬೨ ಶ್ರೀನಿವಾಸರಾಮ ವಿಠಲ

೨೬೩ ಶ್ರೀಕಾಂತಸ್ವಾಮಿ ವಿಠಲ

೨೬೪ ಶ್ರೀನಾಥಮೋಹನ ವಿಠಲ

೨೬೫ ಶಿವರಾಮಯೋಗಿ ವಿಠಲ

೨೬೬ ಶ್ರೀಕೃಷ್ಣಯೋಗಿ ವಿಠಲ

೨೬೭ ಶ್ರೀರಮಾರಮಣಸ್ವಾಮಿ ವಿಠಲ

೨೬೮ ಶ್ರೀರಾಮಕೃಷ್ಣ ವಿಠಲ

೨೬೯ ಶೇಷಶಯನ ವೆಂಕಟೇಶ ವಿಠಲ

೨೭೦ ಶ್ರೀರಾಮಮೂರ್ತಿ ವಿಠಲ

೨೭೧ ಶ್ರೀರಮಣ ವಿಠಲ

೨೭೨ ಶ್ರೀದೇವಿವಂದ್ಯ ವಿಠಲ

೨೭೩ ಶ್ರೀಕೃಷ್ಣಮೂರ್ತಿ ವಿಠಲ

೨೭೪ ಶ್ರೀನಾಥ ವಿಠಲ

೨೭೫ ಶ್ರೀರಮಣಸ್ವಾಮಿ ವಿಠಲ

೨೭೬ ಶ್ರೀಕಾಂತವರದೇಶ ವಿಠಲ

೨೭೭ ಶ್ರೀಸತಿ ಮೋಹನ ವಿಠಲ

೨೭೮ ಶ್ರೀಮನೋರಮ ವಿಠಲ

೨೭೯ ಸರ್ವೇಶ ವಿಠಲ

೨೮೦ ಸುಖಭರಿತ ವಿಠಲ

೨೮೧ ಸುರವರ ವಿಠಲ

೨೮೨ ಸಾಮಜವರದ ವಿಠಲ

೨೮೩ ಸದ್ಗುರುನಾಥಮೋಹನ ವಿಠಲ

೨೮೪ ಸರ್ವೋತ್ತಮ ವಿಠಲ

೨೮೫ ಸೀತಾಪತಿ ವಿಠಲ

೨೮೬ ಸುರೇಶ ವಿಠಲ

೨೮೭ ಸದಾನಂದಗುಣಭರಿತ ವಿಠಲ

೨೮೮ ಸುರೇಂದ್ರ ವಿಠಲ

೨೮೯ ಸರಸಿಜಾಕ್ಷ

೨೯೦ ಸತ್ಯೇಶ ವಿಠಲ

೨೯೧ ಸುಖಪೂರ್ಣ ವಿಠಲ

೨೯೨ ಸುಖತೀರ್ಥವರದ ವಿಠಲ

೨೯೩ ಸೀತಾಕಾಂತ ವಿಠಲ

೨೯೪ ಸುರವರೇಂದ್ರವಿಠಲ

೨೯೫ ಸದಮಲಾನಂದ ವಿಠಲ

೨೯೬ ಸುಜ್ಞಾನದಾಯಕ ವಿಠಲ

೭೯೭ ಸುಖಸಾಂದ್ರಮೋಹನ ವಿಠಲ
೭೯೮ ಸದ್ಗುರುನಾಥ ವಿಠಲ
೭೯೯ ಸುಗುಣಪೂರ್ಣಮೋಹನ ವಿಠಲ
೮೦೦ ಸುರನಾಥಮೋಹನ ವಿಠಲ
೮೦೧ ಸುಗುಣಸಾಂದ್ರ ವಿಠಲ
೮೦೨ ಸಕಲಸುಖಪೂರ್ಣ ವಿಠಲ
೮೦೩ ಸೀತಾರಾಮ ವಿಠಲ
೮೦೪ ಸುಜ್ಞಾನಮೂರುತಿ ವಿಠಲ
೮೦೫ ಸರ್ವೇಶಸಿರಿ ಕೃಷ್ಣ ವಿಠಲ
೮೦೬ ಸಚ್ಚಿದಾನಂದಸ್ವಾಮಿ ವಿಠಲ
೮೦೭ ಸದಾಶಿರೋಮಣಿ ವಿಠಲ
೮೦೮ ಸೀತಾಪತಿರಾಮ ವಿಠಲ
೮೦೯ ಸುಖಕರ ವಿಠಲ
೮೧೦ ಸಾಮಗಾನಪ್ರಿಯ ವಿಠಲ
೮೧೧ ಸುರೋತ್ತಮ ವಿಠಲ
೮೧೨ ಸುಖತೀರ್ಥನಾಥ ವಿಠಲ
೮೧೩ ಸನಾತನ ವಿಠಲ
೮೧೪ ಸರ್ವಾಧಾರ ವಿಠಲ
೮೧೫ ಸಾಮಸನ್ನುತ ವಿಠಲ
೮೧೬ ಸರ್ವಕಾರಣ ವಿಠಲ
೮೧೭ ಸುಖದಾಯಕ ವಿಠಲ
೮೧೮ ಸನ್ಮಂಗಳಾತ್ಮಕ ವಿಠಲ
೮೧೯ ಸುಜ್ಞಾನದಾಯಕ ವಿಠಲ
೮೨೦ ಸರ್ವಸ್ವತಂತ್ರ ವಿಠಲ
೮೨೧ ಸತ್ಯಮೂರ್ತಿ ವಿಠಲ
೮೨೨ ಸತ್ಯಾವಲ್ಲಭ ವಿಠಲ
೮೨೩ ಸತ್ಯಾನಂದ ವಿಠಲ
೮೨೪ ಸುಂದರಮೂರ್ತಿ ವಿಠಲ
೮೨೫ ಸತ್ಯಕಾಮ ವಿಠಲ
೮೨೬ ಸತ್ಯಪ್ರಿಯ ವಿಠಲ
೮೨೭ ಸುರರಕ್ಷಕ ವಿಠಲ
೮೨೮ ಸೀತಾಕಾಂತಮೋಹನ ವಿಠಲ
೮೨೯ ಸೀತಾವಲ್ಲಭ ವಿಠಲ
೮೩೦ ಸತ್ಯವಿಕ್ರಮ ವಿಠಲ
೮೩೧ ಸುರವರೇಶ ವಿಠಲ
೮೩೨ ಸರ್ವೋತ್ಕೃಷ್ಟ ವಿಠಲ
೮೩೩ ಸತ್ಯಾತ್ಮಕ ವಿಠಲ
೮೩೪ ಸನ್ಮಂಗಳಪ್ರದ ವಿಠಲ
೮೩೫ ಸಿದ್ಧಿದಾಯಕ ವಿಠಲ
೮೩೬ ಸುರನಾಥಮೋಹನ ವಿಠಲ
೮೩೭ ಸುರಪತಿವಿಠಲ
೮೩೮ ಸುಖಮಯ ವಿಠಲ
೮೩೯ ಸುರನಾಥ ವಿಠಲ
೮೪೦ ಸರ್ವಾಂತರ್ಗತವಿಠಲ
೮೪೧ ಸುರರಾಜ ವಿಠಲ
೮೪೨ ಸರ್ವಗುಣಾಧಾರ ವಿಠಲ
೮೪೩ ಸುಖಸಾಂದ್ರ ವಿಠಲ
೮೪೪ ಸಕಲಸುಖಭರಿತ ವಿಠಲ
೮೪೫ ಸುಖಪೂರ್ಣರಾಮ ವಿಠಲ
೮೪೬ ಸುರಸಾರ್ವಭೌಮ ವಿಠಲ
೮೪೭ ಸುರಕುಲೋತ್ತಮ ವಿಠಲ
೮೪೮ ಸುರನಾಥ ವಿಠಲ
೮೪೯ ಸನ್ಮಂಗಳಪ್ರದಮೋಹನ ವಿಠಲ

೮೫೦ ಸುರನಾಥರಾಮ ವಿಠಲ
೮೫೧ ಸುಖನಿಧಿ ವಿಠಲ
೮೫೨ ಸರ್ವಾಧಿಪತಿರಾಮ ವಿಠಲ
೮೫೩ ಸುಧಾಪ್ರಿಯ ವಿಠಲ
೮೫೪ ಸುರನಾಥಪ್ರಿಯ ವಿಠಲ
೮೫೫ ಸುಗುಣಪೂರ್ಣ ವಿಠಲ
೮೫೬ ಸುರರಾಜವರದ ವಿಠಲ
೮೫೭ ಸರ್ವಪಾಲಕ ವಿಠಲ
೮೫೮ ಸುರವರೇಣ್ಯ ವಿಠಲ
೮೫೯ ಸುರನಾಥರಾಮ ವಿಠಲ
೮೬೦ ಸುರಕಾಮಧೇನು ವಿಠಲ
೮೬೧ ಸಕಲಕಾರಣರಾಮ ವಿಠಲ
೮೬೨ ಸಾಮಗಾನಲೋಲ ವಿಠಲ
೮೬೩ ಸಕಲೇಶಕೃಷ್ಣ ವಿಠಲ
೮೬೪ ಸುಂದರ ವಿಠಲ
೮೬೩ ಸತ್ಯಪೂರ್ಣ ವಿಠಲ
೮೬೬ ಸುರವರೇಶ ವಿಠಲ
೮೬೭ ಸುರೋತ್ತಮ ವಿಠಲ
೮೬೮ ಸರೋತ್ತಮರಾಜ ವಿಠಲ
೮೬೯ ಸ್ವಾಮಿಗುರು ವಿಠಲ
೮೭೦ ಸರ್ವೇಶಹರಿ ವಿಠಲ
೮೭೧ ಸುರರಾಜ ವರದ ಮೋಹನ ವಿಠಲ
೮೭೨ ಸರ್ವಪಾಲಕ ವಿಠಲ
೮೭೩ ಸನ್ಮತಿಪ್ರದ ವಿಠಲ
೮೭೪ ಸದಾನಂದಸ್ವಾಮಿ ವಿಠಲ
೮೭೫ ಸುರಮುನಿನಾಥ ವಿಠಲ
೮೭೬ ಸುಮನಸಾರ್ಚಿತ ವಿಠಲ
೮೭೭ ಸರ್ವನಾಮಕ ವಿಠಲ
೮೭೮ ಸುಖರೂಪವರದ ವಿಠಲ
೮೭೯ ಸರ್ವೇಷ್ಟಪ್ರದ ವಿಠಲ
೮೮೦ ಸುಧಾಕರ ವಿಠಲ
೮೮೧ ಸುರವರಪೂಜಿತ ರಾಮ ವಿಠಲ
೮೮೨ ಸನಕಾದಿವಂದ್ಯ ವಿಠಲ
೮೮೩ ಸಾರತರ ವಿಠಲ
೮೮೪ ಸುಗುಣಾಕರ ವಿಠಲ
೮೮೫ ಸುರಾಗ್ರಗಣ್ಯ ವಿಠಲ
೮೮೬ ಸಕಲಾತ್ಮಕ ವಿಠಲ
೮೮೭ ಸಮೀರವಂದ್ಯ ವಿಠಲ
೮೮೮ ಸುಧಾಮಪ್ರಿಯ ವಿಠಲ
೮೮೯ ಸುರೇಂದ್ರಸ್ವಾಮಿ ವಿಠಲ
೮೯೦ ಸಾಕಾರಮೂರ್ತಿ ವಿಠಲ
೮೯೧ ಸುಶೀಲಮೂರ್ತಿ ವಿಠಲ
೮೯೨ ಸುಗುಣಾಭರಣ ವಿಠಲ
೮೯೩ ಸುಪರ್ಣಧ್ವಜ ವಿಠಲ
೮೯೪ ಸೌಂದರ್ಯಸಾರ ವಿಠಲ
೮೯೫ ಸುಂದರಾಕೃತಿ ವಿಠಲ
೮೯೬ ಸುಂದರೀಪತಿ ವಿಠಲ
೮೯೭ ಸಂಗೀತಪ್ರಿಯ ವಿಠಲ
೮೯೮ ಸದಾನಂದಕರ ವಿಠಲ
೮೯೯ ಸರಸಿಜಾಕ್ಷಶ್ರೀನಿವಾಸ ವಿಠಲ
೯೦೦ ಸುರವರಪೂಜಿತ ವಿಠಲ
೯೦೧ ಸೀತಾಕಾಂತಮನೋಹರ ವಿಠಲ

೯೦೨ ಸದಾಶ್ರಯ ವಿಠಲ
೯೦೩ ಸುಜ್ಞಾನನಿಧಿ ವಿಠಲ
೯೦೪ ಸುಜ್ಞಾನಮುರ್ತಿ ವಿಠಲ
೯೦೫ ಸರ್ವಾನಂದಮೂರ್ತಿ ವಿಠಲ
೯೦೬ ಸತ್ಯಾನಂದ ವಿಠಲ
೯೦೭ ಸುರರಾಜ ವಿಠಲ
೯೦೮ ಸುರರಾಜ ವಂದ್ಯ ವಿಠಲ
೯೦೯ ಸುರಮುನಿಪೂಜ್ಯ ವಿಠಲ
೯೧೦ ಸತ್ಯದೇವ ವಿಠಲ
೯೧೧ ಸುಖವನಧಿ ವಿಠಲ
೯೧೨ ಸ್ವಾಮಿಪರಾತ್ಪರ ವಿಠಲ
೯೧೩ ಸುರವರ ವಂದ್ಯ ವಿಠಲ
೯೧೪ ಸಕಲಕಾರಣಸ್ವಾಮಿ ವಿಠಲ
೯೧೫ ಸಕಲ ಕಾರಣಾತ್ಮಕ ವಿಠಲ
೯೧೬ ಸಚ್ಚಿದಾನಂದರೂಪ ವಿಠಲ
೯೧೭ ಸೀತಾನಾಥ ವಿಠಲ
೯೧೮ ಸುಗುಣರತ್ನಾಕರ ವಿಠಲ
೯೧೯ ಸತ್ಯವತೀಸುತ ವಿಠಲ
೯೨೦ ಸುರರಾಜ ವಿಠಲ
೯೨೧ ಸುರನಾಥಪ್ರಿಯ ವಿಠಲ
೯೨೨ ಸುಶಾಂತಮೂರ್ತಿ ವಿಠಲ
೯೨೩ ಸಾಮಗಾನವಿಲೋಲ ವಿಠಲ
೯೨೪ ಸೌಭಾಗ್ಯನಿಧಿ ವಿಠಲ
೯೨೫ ಸುಜ್ಞಾನಪ್ರಿಯ ವಿಠಲ
೯೨೬ ಸುಗುಣಮಹೋದಧಿ ವಿಠಲ
೯೨೭ ಸುರಮುನಿಪ್ರಿಯ ವಿಠಲ
೯೨೮ ಸನಾತನರಾಮ ವಿಠಲ
೯೨೯ ಸುಪ್ರಸನ್ನಮೂರ್ತಿ ವಿಠಲ
೯೩೦ ಸುರಾಗ್ರಗಣ್ಯ ವಿಠಲ
೯೩೧ ಸುರನಾಥಪೂಜಿತ ವಿಠಲ
೯೩೨ ಸುರವರೇಣ್ಯಹರಿ ವಿಠಲ
೯೩೩ ಸುಗುಣರತ್ನಾಕರ ವಿಠಲ
೯೩೪ ಸರ್ವಾಧಾರಹರಿ ವಿಠಲ
೯೩೫ ಸುಂದರಾಕಾರ ವಿಠಲ
೯೩೬ ಸುರನಾಥಮುಖ್ಯ ವಿಠಲ
೯೩೭ ಸೌಂದರ್ಯಸಾರಮೂರ್ತಿ ವಿಠಲ
೯೩೮ ಸುಖಪೂರ್ಣಮೋಹನ ವಿಠಲ
೯೩೯ ಸಕಲೇಶ ವಿಠಲ
೯೪೦ ಸಕಲಾತ್ಮ ವಿಠಲ
೯೪೧ ಸುರರಾಜಪ್ರಿಯ ವಿಠಲ
೯೪೨ ಸುರಮುನಿನಾಥಪ್ರಿಯ ವಿಠಲ
೯೪೩ ಸದ್ಗುರುನಾಥ ವಿಠಲ
೯೪೪ ಸೀತಾಮನೋಹರರಾಮ ವಿಠಲ
೯೪೫ ಸೀತಾಪತಿರಾಮ ವಿಠಲ
೯೪೬ ಸುರೇಶ್ವರ ವಿಠಲ
೯೪೭ ಸರ್ವಜ್ಞಮೂರ್ತಿ ವಿಠಲ
೯೪೮ ಸಾಧುವಂದಿತ ವಿಠಲ
೯೪೯ ಸ್ವಾಮಿರಾಮ ವಿಠಲ
೯೫೦ ಸರ್ವಸ್ವಾಮಿ ವಿಠಲ
೯೫೧ ಸರ್ವೇಶಗುಣನಿಧಿ ವಿಠಲ
೯೫೨ ಸದಾನಂದಪೂರ್ಣ ವಿಠಲ

೯೫೩ ಸರ್ವಜ್ಞಮೂರ್ತಿ ವಿಠಲ
೯೫೪ ಸರ್ವನಿಯಮಕ ವಿಠಲ
೯೫೫ ಸರ್ವೇಶಮೂರ್ತಿ ವಿಠಲ
೯೫೬ ಸುಗುಣಾರ್ಣವಮೋಹನ ವಿಠಲ
೯೫೭ ಸುಖತೀರ್ಥಪ್ರಿಯ ವಿಠಲ
೯೫೮ ಸುಖಮಯಶ್ರೀಶ ವಿಠಲ
೯೫೯ ಸುಗುಣನಿಧಿಮೋಹನ ವಿಠಲ
೯೬೦ ಸರ್ವೇಶಮೋಹನ ವಿಠಲ
೯೬೧ ಸರ್ವೇಶಮೂರ್ತಿ ವಿಠಲ
೯೬೨ ಸುಧಾಪ್ರಿಯ ವಿಠಲ
೯೬೩ ಸುಧಾರಮಣ ವಿಠಲ
೯೬೪ ಸರ್ವೇಷ್ಟದಾಯಕ ವಿಠಲ
೯೬೫ ಸತ್ಯೇಶಮೋಹನ ವಿಠಲ
೯೬೬ ಸುಖಕಾರಣ ವಿಠಲ
೯೬೭ ಸುಜ್ಞಾನಲೋಲ ವಿಠಲ
೯೬೮ ಸರ್ವೇಶಪೂರ್ಣ ವಿಠಲ
೯೬೯ ಸರ್ವಕಾರಣ ವಿಠಲ
೯೭೦ ಸರ್ವೇಶಮೂರ್ತಿವಿಠಲ
೯೭೧ ಸರ್ವನಾಮಕ ವಿಠಲ
೯೭೨ ಸರ್ವಗುಣಸಂಪನ್ನ ವಿಠಲ
೯೭೩ ಸದಾನಂದಕೃಷ್ಣ ವಿಠಲ
೯೭೪ ಸದಾನಂದರಾಮ ವಿಠಲ
೯೭೫ ಸರ್ವಪಾಲಕ ವಿಠಲ
೯೭೬ ಸಿರಿಕಲ್ಯಾಣಗುಣಪೂರ್ಣ ವಿಠಲ
೯೭೭ ಸುರನಾಥಮೂರ್ತಿ ವಿಠಲ
೯೭೮ ಸುಂದರಾಕಾರ ವಿಠಲ
೯೭೯ ಸುಖಾತ್ಮಕರಾಮ ವಿಠಲ
೯೮೦ ಸತ್ಯದೇವ ವಿಠಲ
೯೮೧ ಹಯವದನ ವಿಠಲ
೯೮೨ ಹನುಮೇಶ ವಿಠಲ
೯೮೩ ಹರಿನಾರಾಯಣ ವಿಠಲ
೯೮೪ ಹರಿದಾಮೋದರ ವಿಠಲ
೯೮೫ ಹೃಷಿಕೇಶ ವಿಠಲ
೯೮೬ ಹಯಗ್ರೀವ ವಿಠಲ
೯೮೭ ಹನುಮೇಶರಾಮ ವಿಠಲ
೯೮೮ ಹನುಮನೊಡೆಯ ವಿಠಲ
೯೮೯ ಹಯಾಸ್ಯ ವಿಠಲ
೯೯೦ ಹರಿಶ್ರೀ ವಿಠಲ
೯೯೧ ಹನುಮೇಶ ರಾಮ ವಿಠಲ
೯೯೨ ಕ್ಷೇಮಕರ ವಿಠಲ
೯೯೩ ಕ್ಷಮಾಪೂರ್ಣ ವಿಠಲ
೯೯೪ ಕ್ಷೀರವಾರಿಧಿಶಯನ ವಿಠಲ
೯೯೫ ಜ್ಞಾನಪೂರ್ಣಮೋಹನ ವಿಠಲ
೯೯೬ ಜ್ಞಾನದಾಯಕ ಮೋಹನ ವಿಠಲ
೯೯೭ ಜ್ಞಾನಪೂರ್ಣ ವಿಠಲ
೯೯೮ ಜ್ಞಾನದಾಯಕಸ್ವಾಮಿ ವಿಠಲ
೯೯೯ ಜ್ಞಾನಾತ್ಮಕ ವಿಠಲ
೧೦೦೦ ಜ್ಞಾನನಿಧಿ ವಿಠಲ
೧೦೦೧ ಜ್ಞಾನದಾಯಕಸ್ವಾಮಿ ವಿಠಲ
೧೦೦೨ ಜ್ಞಾನಪ್ರದ ವಿಠಲ
೧೦೦೩ ಜ್ಞಾನಮೂರ್ತಿ ವಿಠಲ
೧೦೦೪ ಜ್ಞಾನಾತ್ಮಕ ವಿಠಲ
೧೦೦೫ ಜ್ಞಾನಮಯ ವಿಠಲ
೧೦೦೬ ಜ್ಞಾನಾತ್ಮಕಸ್ವಾಮಿ ವಿಠಲ

# ಅನುಬಂಧ ೪

## ಕೀರ್ತನೆಗಳ ಅಕಾರಾದಿ

## ಬಾಗೇಪಲ್ಲಿ ಶೇಷದಾಸರು

